# ಉತ್ತರ ಕರ್ನಾಟಕದ ಕನ್ನಡ ಶಾಸನಗಳಲ್ಲಿ ಪುರಾಣ ಪರಿಕಲ್ಪನೆ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಲಾದ ಮಹಾಪ್ರಬಂಧ)

ಸಂಶೋಧಕರು
ಗೋವಿಂದಪ್ಪ ಜಿ.

ಮಾರ್ಗದರ್ಶಕರು
ಪ್ರೊ. ಮಾಧವ ಪೆರಾಜೆ
ಪ್ರಾಧ್ಯಾಪಕರು



ಭಾಷಾ ನಿಕಾಯ
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೭

# ಉತ್ತರ ಕರ್ನಾಟಕದ ಕನ್ನಡ ಶಾಸನಗಳಲ್ಲಿ ಪುರಾಣ ಪರಿಕಲ್ಪನೆ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಲಾದ ಮಹಾಪ್ರಬಂಧ)



ಸಂಶೋಧಕರು

**ಗೋವಿಂದಪ್ಪ ಜಿ.**

ಮಾರ್ಗದರ್ಶಕರು

**ಪ್ರೊ. ಮಾಧವ ಪೆರಾಜೆ**

ಪ್ರಾಧ್ಯಾಪಕರು



ಭಾಷಾ ನಿಕಾಯ

ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೭-೧೮




## ಪ್ರಮಾಣ ಪತ್ರ

**ಉತ್ತರ ಕರ್ನಾಟಕದ ಕನ್ನಡ ಶಾಸನಗಳಲ್ಲಿ ಪುರಾಣ ಪರಿಕಲ್ಪನೆ** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಈ ಮಹಾಪ್ರಬಂಧವನ್ನು **ಡಾ. ಮಾಧವ ಪೆರಾಜೆ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತೇನೆ. ಸದರಿ ಮಹಾಪ್ರಬಂಧವು ಈ ಮೊದಲು ಯಾವ ಪದವಿಗೂ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಗೋವಿಂದಪ್ಪ ಜಿ.
ಸಂಶೋಧನ ವಿದ್ಯಾರ್ಥಿ
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ.

ಸ್ಥಳ: ವಿದ್ಯಾರಣ್ಯ
ದಿನಾಂಕ:

## ಮಾರ್ಗದರ್ಶಕರ ದೃಢೀಕರಣ ಪತ್ರ

**ಗೋವಿಂದಪ್ಪ ಜಿ. ಅವರು ಉತ್ತರ ಕರ್ನಾಟಕದ ಕನ್ನಡ ಶಾಸನಗಳಲ್ಲಿ ಪುರಾಣ ಪರಿಕಲ್ಪನೆ** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವ ಪದವಿಗೂ ಸಲ್ಲಿಸಲ್ಪಟ್ಟಿಲ್ಲವೆಂದು ದೃಢೀಕರಿಸುತ್ತೇನೆ.

**ಡಾ. ಮಾಧವ ಪೆರಾಜೆ**
**ಪ್ರಾಧ್ಯಾಪಕರು**
**ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
**ವಿದ್ಯಾರಣ್ಯ.**

**ಸ್ಥಳ: ವಿದ್ಯಾರಣ್ಯ**
**ದಿನಾಂಕ:**

# ಪರಿವಿಡಿ

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆ

### ಪ್ರಸ್ತಾವನೆ

ಇತಿಹಾಸ ತಿಳಿಯಲು ಆಧಾರಗಳು ಬಹಳ ಮುಖ್ಯ. ಅವುಗಳಿಲ್ಲದೆ ಇತಿಹಾಸವನ್ನು ತಿಳಿಯುವುದು ಅಸಾಧ್ಯ. ಭಾರತದ ಇತಿಹಾಸವನ್ನು ತಿಳಿಯಲು ನಮಗೆ ದೊರೆತ ಮೊದಲ ಆಧಾರಗಳೆಂದರೆ ಮೌಖಿಕ ಆಧಾರಗಳಾದ ಪುರಾಣ, ಐತಿಹ್ಯ, ಸ್ಥಳನಾಮ, ಸ್ಥಳ ಪುರಾಣಗಳಂತಹ ವಿಷಯಗಳು ಬರವಣಿಗೆಯ ರೂಪ ಪಡೆದು ನಂತರ ಲಿಖಿತ ಆಕರಗಳಾದವು. ಶಾಸನಗಳು ದೊರೆಯುವುದಕ್ಕೂ ಮುನ್ನ ಭಾರತದ ಇತಿಹಾಸವನ್ನು ತಿಳಿಯಲು ಪುರಾಣ, ಐತಿಹ್ಯ, ಸ್ಥಳ ಪುರಾಣಗಳೇ ಆಕರಗಳಾಗಿದ್ದವು. ನಂತರ ಶಾಸನಗಳು ದೊರೆತ ಮೇಲೆ ಇತಿಹಾಸವನ್ನು ತಿಳಿಯಲು ಪ್ರಮುಖ ಆಕರಗಳಾದವು. ಇಂತಹ ಶಾಸನಗಳಲ್ಲಿ ಅರಸರ ಕಾಲ, ವಂಶ, ದೇಶ ವಿಷಯಗಳಲ್ಲದೆ ಇನ್ನು ಅನೇಕ ಸಾಂಸ್ಕೃತಿಕ ವಿಚಾರಗಳು ದೊರೆಯುತ್ತವೆ.

ಇಂತಹ ಶಾಸನಗಳನ್ನು ಅಭ್ಯಾಸ ಮಾಡುತ್ತಾ ಹೋದಂತೆಲ್ಲಾ ಅದರ ವ್ಯಾಪ್ತಿಯು ವಿಶಾಲವಾಗುತ್ತಾ ಹೋಗುತ್ತದೆ. ಶಾಸನಗಳು ನಮ್ಮ ಸಂಸ್ಕೃತಿಯ ವಿವಿಧ ಮುಖಗಳ ಅಭ್ಯಾಸವನ್ನು ಶ್ರೀಮಂತಗೊಳಿಸುವ ಅಣಿಮುತ್ತುಗಳಂತೆ ಹೊಸ ವಿಷಯಗಳು ಹೊರಬರುತ್ತಾ ಹೋಗುತ್ತವೆ. ಶಾಸನಗಳಲ್ಲಿ ಬರೀ ಇತಿಹಾಸವಷ್ಟೇ ಅಲ್ಲದೇ ಪುರಾಣ, ಐತಿಹ್ಯ, ಭಾಷೆ, ಸಾಹಿತ್ಯ, ಧರ್ಮ, ಅರ್ಥವ್ಯವಸ್ಥೆ ಹಾಗೂ ವಾಸ್ತುಶಿಲ್ಪ ಕಲೆಗಳಂತಹ ವಿವಿಧ ಜ್ಞಾನಶಾಖೆಗಳ ಅರಿವಿಗೆ ಪೂರಕವಾಗುವಂತಹ ವಿಪುಲವಾದ ಮಾಹಿತಿ ಇವುಗಳಿಂದ ದೊರೆಯುತ್ತದೆ.

ಶಾಸನ ರಚನೆಕಾರರು ಸಹ ವಿಷಯವನ್ನು ಇದ್ದಂತೆಯೇ ಬರೆಯದೆ ಅದನ್ನು ಆಕರ್ಷಕವಾಗಿ ಅತಿರಂಜಕವಾಗಿ ಹೇಳಿ ಜನರ ಮನಸ್ಸನ್ನು ಸೆಳೆಯುವ ಪ್ರಯತ್ನ ಮಾಡಿದ್ದಾರೆ. ಅಂತಹ ಸಂಧರ್ಭದಲ್ಲಿ

ಅವರು ಅನೇಕ ಬಾರಿ ಮೊರೆ ಹೋಗುವುದು ಪೌರಾಣಿಕ ಅಂಶಗಳತ್ತ ಎನ್ನುವುದು ಗಮನಾರ್ಹ. ಬಹುಶಃ ಜನರ ಮನಸ್ಥಿತಿಯನ್ನರಿತು ಅವರು ಇಂತಹ ವಿಷಯಗಳನ್ನು ಆಯ್ಕೆ ಮಾಡಿಕೊಂಡಿರಬಹುದೆನಿಸುತ್ತದೆ. ಜೊತೆಗೆ ಪುರಾಣಗಳ ಬಗ್ಗೆ ಶಾಸನಕಾರರಿಗಿದ್ದ ಸೆಳೆತವು ಕೂಡ ಇದಕ್ಕೆ ಮತ್ತೊಂದು ಕಾರಣವಾಗಿರಬಹುದು.

ಭಾರತೀಯರು ಹಿಂದಿನ ಘಟನೆಗಳನ್ನು ಬದುಕಿ ಬಾಳಿದ ವ್ಯಕ್ತಿಗಳನ್ನು ಕೇವಲ ಘಟನೆ ವ್ಯಕ್ತಿಗಳನ್ನಾಗಿ ನೋಡದೆ ಅವುಗಳನ್ನು ಹಿಂದಿನ ಮೌಲ್ಯಗಳನ್ನಾಗಿ ಗುರುತಿಸಿ ಅವುಗಳನ್ನು ವಸ್ತು ಸ್ಥಿತಿಗಿಂತಲೂ ಭಿನ್ನವಾದ ಸ್ತರದಲ್ಲಿರಿಸಿ ಕಥಾರೂಪದಲ್ಲಿ ಸಾಂಕೇತಿಕವಾದ ರೀತಿಯಲ್ಲಿ ಹೇಳುವ ಧೋರಣೆಯಿಂದ ಕೂಡಿದ್ದಾಗಿದೆ. ಈ ಪ್ರವೃತ್ತಿಯ ಪರಿಣಾಮದಿಂದಾಗಿಯೇ ಶಾಸನಗಳಲ್ಲಿ ಪೌರಾಣಿಕ ಅಂಶಗಳು ನುಸುಳಲು ಕಾರಣವಾಗಿದೆ. ಪೌರಾಣಿಕ ಅಂಶಗಳು ಮನುಷ್ಯನ ಅರಿವಿನ ಪ್ರಜ್ಞೆಯನ್ನು ವಿಸ್ತರಿಸುವ ಘಟಕವಾಗಿವೆ. ಅಂತರಂಗವನ್ನು ಹೊಕ್ಕಾಗ ಅನೇಕ ಪವಾಡ ದೃಶ್ಯಗಳು, ದಂತಕಥೆಗಳು, ಪುರಾಣಕತೆಗಳು ಕಂಡುಬರುತ್ತವೆ. ಇವು ಪೀಳಿಗೆಯಿಂದ ಪೀಳಿಗೆಗೆ ವಿಸ್ತಾರಗೊಳ್ಳುತ್ತಾ ಮುಂದಿನ ತಲೆಮಾರಿನವರೆಗೆ ದಾಖಲೆಯ ರೂಪದಲ್ಲಿ ಪುರಾಣ ಕತೆಗಳನ್ನು ಹೇಳುತ್ತವೆ. ಇವುಗಳು ಮಾನವನ ಅರಿವಿನ ಪ್ರಜ್ಞೆಯನ್ನು ವಿಸ್ತರಿಸುವುದರ ಜೊತೆಗೆ ವಂಶ, ವ್ಯಕ್ತಿ, ಸ್ಥಳ ಅಥವಾ ಪ್ರದೇಶಕ್ಕೆ ಸೈದ್ಧಾಂತಿಕ ಮೌಲ್ಯವನ್ನು ಒದಗಿಸುವ ಸೃಜನಶೀಲ ಕ್ರಿಯೆಯಾಗಿವೆ.

ಈ ಅರಿವಿನಲ್ಲಿ ಬಂದ ನಮ್ಮ ಪ್ರಜ್ಞೆಯು ರಾಜವಂಶಾವಳಿಗಳಿಗೂ ಹಾಗೂ ರಾಜನಿಗೂ ನೈತಿಕ ಮೌಲ್ಯ ಒದಗಿಸಲು ಪ್ರೇರಕ ಮತ್ತು ಸಹಾಯಕವಾಗುತ್ತವೆ. "ನಾಡಿನ ಪ್ರಭುತ್ವವನ್ನು ಹಿಡಿದ ರಾಜನ ವಂಶ ಅಥವಾ ರಾಜನ ವಂಶಾವಳಿ ಯಾವುದೇ ಕೆಳಹಂತದ್ದಾಗಿದ್ದರೂ ಕೂಡ ಆ ವ್ಯಕ್ತಿಗೆ ಪೂಜ್ಯ ಅಥವಾ ಗೌರವವನ್ನು ತಂದುಕೊಡುವ ಉದ್ದೇಶದಿಂದ ಪುರೋಹಿತಶಾಹಿಗಳು ಅಥವಾ ಅಧಿಕಾರಸ್ಥರು ಆ ರಾಜನ ವಂಶಕ್ಕೆ ಹಾಗೂ ಆತನಿಗೆ ಪೌರಾಣಿಕ ಚೌಕಟ್ಟನ್ನು ಕಟ್ಟಿ ಆ ವ್ಯಕ್ತಿಗೆ ಹಾಗೂ ಅವನ ವಂಶಕ್ಕೆ ಮೌಲ್ಯ ಒದಗಿಸುವ ಜನರಲ್ಲಿ ಉನ್ನತ ಭಾವನೆ ಉಂಟುಮಾಡುವಂತೆ ಮಾಡುವುದಾಗಿತ್ತು". ಅಂದರೆ ವ್ಯಕ್ತಿ ಅಥವಾ ರಾಜ ಅಸಮರ್ಪಕ ಆಡಳಿತ ಅಥವಾ ದುರ್ಬಲ ಗುಣವನ್ನುಳ್ಳವನಾಗಿದ್ದರೂ ಅವನ ಮೇಲೆ ಪ್ರಜೆಗಳಲ್ಲಿ ಪೂಜ್ಯಭಾವನೆ ಅಥವಾ ಗೌರವ ಬರಲೆಂಬ ಕಾರಣದಿಂದ ಆತನನ್ನು ಪೌರಾಣೀಕರಿಸಿ, ಹೊಗಳಿ ರಾಜನನ್ನು ತಮ್ಮ ಹಿಡಿತಕ್ಕೆ ತೆಗೆದುಕೊಳ್ಳುವ ಒಂದು ಒಳಹುನ್ನಾರ ಪುರೋಹಿತಶಾಹಿಗಳಲ್ಲಿ ಅಥವಾ ಅಧಿಕಾರಶಾಹಿಗಳಲ್ಲಿ ಇತ್ತು ಎನ್ನಲಾಗಿದೆ.

ಶಾಸನಗಳಲ್ಲಿ ರಾಜರ ವಂಶಗಳನ್ನು ಪುರಾಣಗಳೊಂದಿಗೆ ಸೇರಿಸುವ ಪ್ರಯತ್ನಗಳು ಹನ್ನೊಂದು ಮತ್ತು ಹನ್ನೆರಡನೆಯ ಶತಮಾನ ಹಾಗೂ ಆನಂತರವೇ ಹೆಚ್ಚಾಗಿ ಆಗಿರುವುದನ್ನು ಕೇವಲ ಆಕಸ್ಮಿಕ ಎನ್ನುವಂತಿಲ್ಲ. ಇದಕ್ಕೆ ಸಾಹಿತ್ಯ ಕೃತಿಗಳು ಒಂದುಕಡೆ ಪ್ರೇರಣೆ ನೀಡಿರಬಹುದು.

ಮತ್ತೊಂದೆಡೆ ಪುರಾಣದ ಬಗ್ಗೆ ಶಾಸನಕಾರರಿಗಿದ್ದ ಸೆಳೆತವು ಕಾರಣವಾಗಿರಬಹುದು. ಈ ಸಂದರ್ಭದಲ್ಲಿ ಹೆಚ್ಚಾಗಿ ರಾಜರುಗಳು ತಮ್ಮನ್ನು ಪುರಾಣ ವ್ಯಕ್ತಿಗಳಿಗೆ ಹೋಲಿಸಿಕೊಳ್ಳುವ ಪರಿಪಾಠ ಬೆಳಸಿಕೊಂಡರೆಂದು ತಿಳಿಯುತ್ತದೆ. ಮೊದಲಿಗೆ ಸಂಕ್ಷಿಪ್ತವಾಗಿ ಘಟನೆಯೊಂದರ ವಿಷಯದ ನಿರೂಪಣೆಗೆ ಮಾತ್ರ ಸೀಮಿತವಾಗಿದ್ದ ಶಾಸನಗಳು ಕ್ರಮೇಣ ವಂಶಾವಳಿ, ಬಿರುದಾವಳಿ, ಪ್ರಶಸ್ತಿ ಮೊದಲಾದವುಗಳ ಸೇರ್ಪಡೆಯಿಂದ ವಿಸ್ತಾರಗೊಂಡವು. ಕೆಲವು ಶಾಸನಗಳಂತೂ ಕಿರುಕಾವ್ಯಗಳೇ ಆಗಿವೆ. ದೊರೆತಿರುವ ಶಾಸನಗಳ ನೆರೆವಿನಿಂದ ಇತಿಹಾಸವನ್ನು ತಿಳಿಯಲು ಸಾಧ್ಯವಾಗಿದೆ. ಶಾಸನಗಳ ರಚನೆಯ ಜೊತೆ ಜೊತೆಗೆ ಪುರಾಣದ ರಚನೆಯೂ ಆಗಿರುವುದನ್ನು ಅಲಕ್ಷಿಸುವಂತಿಲ್ಲ. ಒಂದೆಡೆ ಸಾರ್ವಜನಿಕರಿಗೆಲ್ಲಾ ತಿಳಿಯುವಂತೆ ಬಹಿರಂಗವಾಗಿ ಶಾಸನಗಳು ಪ್ರಕಟಣೆ ಆಗುತ್ತಿದ್ದರೆ ಮತ್ತೊಂದೆಡೆ ಆಂತರಿಕವಾಗಿ ವಿಶೇಷವಾಗಿ ಓದು-ಬರಹ ಬಲ್ಲವರ ಅರಿವಿಗಾಗಿ ಪುರಾಣಗಳು ರಚನೆಯಾಗುತ್ತಿದ್ದವು. ಆನಂತರದ ದಿನಗಳಲ್ಲಿ ರಾಜರುಗಳನ್ನು ದೈವತ್ವಕ್ಕೇರಿಸುವ ನೆಪದಿಂದಲೋ ಅಥವಾ ದೇವರಿಗೆ ಸಲ್ಲುವ ಮಾನ ಸನ್ಮಾನಗಳು ತಮಗೂ ದೊರೆಯಲಿ ಎಂಬ ಕಾರಣದಿಂದಲೆ ಶಾಸನಗಳನ್ನು ಪುರಾಣಗಳ ಹಿನ್ನೆಲೆಯಲ್ಲಿ ಹಾಕಿಸತೊಡಗಿದರು.

ಐತಿಹ್ಯಗಳನ್ನು ಗಮನಿಸುವುದಾದರೆ ಐತಿಹ್ಯಗಳು ಕೂಡ ಐತಿಹಾಸಿಕ ಅಂಶಗಳನ್ನು ಬಳಸಿಕೊಳ್ಳುತ್ತ ತಲೆಮಾರುಗಳ ಮೂಲಕ ಹರಿದುಬಂದವುಗಳಾಗಿವೆ. ಇಂತಹ ಅಂಶಗಳು ಪುರಾಣವನ್ನು ನೋಡುವಲ್ಲಿ ಯಾವರೀತಿ ಸಹಾಯಕವಾಗಿವೆ ಎಂಬುದನ್ನು ಚರ್ಚಿಸಲಾಗಿದೆ.

ಪ್ರಾಚೀನ ಭಾರತೀಯ ಪರಂಪರೆಯಲ್ಲಿ ಇತಿಹಾಸದ ಕುರಿತಾದ ಆಧುನಿಕ ಪರಿಕಲ್ಪನೆ ಇದ್ದಿರಲು ಸಾಧ್ಯವಿಲ್ಲವೆಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ. ಆದುದರಿಂದ ಶಾಸನಗಳ ರಚನೆಯ ಕಾಲಘಟ್ಟದಲ್ಲಿ ಪುರಾಣವನ್ನು ಇತಿಹಾಸದಿಂದ ಪ್ರತ್ಯೇಕಿಸಿ ನೋಡುವ ಕ್ರಮ ಇದ್ದಿರಲಾರದೆಂದು ಹೇಳಬಹುದು. ಹಾಗಾಗಿಯೇ ನಮ್ಮ ಬಹುಪಾಲು ಶಾಸನಗಳು ಪುರಾಣಗಳನ್ನು ಹೇಗೆ ಇತಿಹಾಸಗೊಳಿಸುವ ಪ್ರಕ್ರಿಯೆಯಲ್ಲಿ ತೊಡಗಿದ್ದವೆಂಬುದನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

**ಅಧ್ಯಯನದ ಉದ್ದೇಶ:**

ಶಾಸನಗಳನ್ನು ಇತಿಹಾಸಕ್ಕೆ ಆಕರವಾಗಿ ಬಳಸಿಕೊಂಡು ಅಧ್ಯಯನ ಮಾಡುವುದು ಸರ್ವೇಸಾಮಾನ್ಯವಾಗಿ ಕಂಡುಬರುತ್ತದೆ. ಹಾಗೆಯೇ ಇತಿಹಾಸ ರಚನೆಗೆ ಶಾಸನಗಳು ಪೂರಕವೆಂದೂ ಭಾವಿಸಲಾಗುತ್ತದೆ. ಆದರೆ ಭಾರತದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ಶಾಸನಗಳು ಪುರಾಣಗಳ ಮೂಲಕವೇ ಆರಂಭವಾಗುತ್ತವೆ. ಹಾಗಾದರೆ ಪುರಾಣದ ಬಗೆಗೆ ಶಾಸನಕಾರರ ನಿಲುವುಗಳೇನು? ಶಾಸನಗಳಲ್ಲಿ ಪುರಾಣ ಮತ್ತು ಇತಿಹಾಸಗಳ ಸಮೀಕರಣ ಪ್ರಕ್ರಿಯೆ ಹೇಗೆ ನಡೆದಿದೆ ಎನ್ನುವುದನ್ನು ಕಂಡುಕೊಳ್ಳುವ ಪ್ರಯತ್ನವನ್ನು ಇಲ್ಲಿ ನಡೆಸಲಾಗಿದೆ.

**ಅಧ್ಯಯನದ ವ್ಯಾಪ್ತಿ :**

ಪ್ರಸ್ತುತ ಮಹಾಪ್ರಬಂಧವಾದ 'ಉತ್ತರ ಕರ್ನಾಟಕದ ಕನ್ನಡ ಶಾಸನಗಳಲ್ಲಿ ಪುರಾಣ ಪರಿಕಲ್ಪನೆ' ಎಂಬ ವಿಷಯವು ಅಧ್ಯಯನದ ದೃಷ್ಟಿಯಿಂದ ತುಂಬಾ ವಿಸ್ತೃತವಾದದ್ದಾಗಿದೆ. ಈಗಾಗಲೇ ಹಲವು ಗ್ರಂಥಗಳಲ್ಲಿ ಪೌರಾಣಿಕ ಅಂಶಗಳು ಪುರಾಣದ ನೆಲೆಯಿಂದಲೂ ಮತ್ತು ಐತಿಹ್ಯಗಳು ಜಾನಪದೀಯ ನೆಲೆಯಿಂದಲೂ ಚರ್ಚಿತವಾಗಿವೆ. ಆದರೆ ಪುರಾಣದ ದೃಷ್ಟಿಯಿಂದ ನೋಡುತ್ತಿರುವಲ್ಲಿ ಮಹಾಪ್ರಬಂಧವು ಭಿನ್ನವಾಗಿದೆಯಲ್ಲದೆ ವಿಶಿಷ್ಟವೂ ಮಹತ್ವಪೂರ್ಣವು ಆದುದಾಗಿದೆ. ಪ್ರಮುಖವಾಗಿ ಶಾಸನಗಳಲ್ಲಿನ ಪುರಾಣ ಮತ್ತು ಐತಿಹ್ಯಗಳಿಂದ ಪುರಾಣ ನಿರ್ವಚಿಸುವ ಉದ್ದೇಶವನ್ನು ಹೊಂದಿರುವ ಈ ಮಹಾಪ್ರಬಂಧದ ವ್ಯಾಪ್ತಿಯನ್ನು ಭೌಗೋಳಿಕವಾಗಿ ಮತ್ತು ಚಾರಿತ್ರಿಕವಾಗಿ ಮಹತ್ವಪೂರ್ಣವಾಗಿರುವ ಉತ್ತರ ಕರ್ನಾಟಕ ಪ್ರದೇಶದ ಕನ್ನಡ ಶಾಸನಗಳಿಗೆ ಸೀಮಿತಗೊಳಿಸಿಕೊಳ್ಳಲಾಗಿದೆ.

ಇಂದಿನ ಕರ್ನಾಟಕ ರಾಜ್ಯದ ಪ್ರಮುಖ ಪದೇಶವಾಗಿರುವ ಉತ್ತರ ಕರ್ನಾಟಕ ಪ್ರದೇಶ ಪ್ರಾಕೃತಿಕ ಸಂಪನ್ಮೂಲಗಳಾದ ಖನಿಜ ನಿಕ್ಷೇಪ ಗಣಿಗಾರಿಕೆಯಿಂದ ಪ್ರಸಿದ್ಧಿಪಡೆದಿದೆ. ರಾಜ್ಯದ ಮಧ್ಯಭಾಗದಿಂದ ಉತ್ತರಕ್ಕೆ ಇರುವ ಈ ಪ್ರದೇಶದ ಉತ್ತರಕ್ಕೆ ಮಹಾರಾಷ್ಟ್ರ, ಪೂರ್ವಕ್ಕೆ ಆಂಧ್ರಪ್ರದೇಶ, ದಕ್ಷಿಣಕ್ಕೆ ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಗಳಿವೆ. ಪಶ್ಚಿಮಕ್ಕೆ ಕಾರವಾರ ಮತ್ತು ಗೋವಾ ಪ್ರದೇಶಗಳನ್ನು ಮೇರೆಗಳಾಗಿ ಹೊಂದಿದೆ.

ಉತ್ತರ ಕರ್ನಾಟಕ ಪ್ರದೇಶದಲ್ಲಿ ಹಲವಾರು ನದಿಗಳು ಹರಿಯುತ್ತವೆ. ಅವುಗಳಲ್ಲಿ ತುಂಗಭದ್ರ, ಭೀಮ, ಘಟಪ್ರಭ, ಮಲಪ್ರಭ ಮೊದಲಾದವು ಮುಖ್ಯವಾಗಿವೆ. ಅಲ್ಲದೆ ಈ ಪರಿಸರದಲ್ಲಿ ಬೆಟ್ಟಗುಡ್ಡಗಳ ಸಾಲುಗಳಿದ್ದು ಅವುಗಳಲ್ಲಿ ಬೆಳಗಾವಿ ಜಿಲ್ಲೆಯ ಸವದತ್ತಿ, ಸೊಗಲ, ಶಿರಸಂಗಿ, ಬಳ್ಳಾರಿ ಜಿಲ್ಲೆಯ ಸಂಡೂರು, ಹೊಸಪೇಟೆ, ಹಂಪಿ ಮೊದಲಾದ ಪ್ರದೇಶಗಳಲ್ಲಿ ಪ್ರಮುಖವು. ಸಂಡೂರು, ಹೊಸಪೇಟೆ ಮತ್ತಿತರ ಬೆಟ್ಟಗಳಲ್ಲಿ ಉತ್ತಮ ದರ್ಜೆಯ ಮ್ಯಾಂಗನೀಸ್ ಕಬ್ಬಿಣದ ಅದಿರು ದೊರೆಯುತ್ತದೆ. ಬೆಳಗಾವಿ ಜಿಲ್ಲೆಯ ಬೆಟ್ಟಗಳು ಮಣ್ಣಿನಿಂದ ಕೂಡಿದ್ದ, ಪ್ರಮುಖ ಔಷಧಿ ಸಸ್ಯಗಳನ್ನು ಬೆಳೆಯುವ ಬೆಟ್ಟಗಳಾಗಿವೆ. ಅಲ್ಲದೆ ಈ ಪ್ರದೇಶದಲ್ಲಿ ಪುಣ್ಯಕ್ಷೇತ್ರಗಳು ಇವೆ. ಗುಲಬರ್ಗಾ ಜಿಲ್ಲೆಯಲ್ಲಿ ಸುಣ್ಣದಕಲ್ಲು, ಕಡಪಕಲ್ಲುಗಳು ನಿಕ್ಷೇಪಗಳಿವೆ.

ಭೌಗೋಳಿಕ ಹಿನ್ನೆಲೆಯಂತೆ ಉತ್ತರ ಕರ್ನಾಟಕ ಪ್ರದೇಶವು ಚಾರಿತ್ರಿಕವಾಗಿಯೂ, ಮಹತ್ವಪೂರ್ಣವಾದ ಪ್ರದೇಶವಾಗಿದೆ. ಇದರ ಪ್ರಾಚೀನತೆಯ ಪ್ರಾಗೈತಿಹಾಸಿಕ ನೆಲೆಗಳಿಂದ ಶಿಲಾಯುಗ, ಮಧ್ಯಶಿಲಾಯುಗ ಮತ್ತು ನವಶಿಲಾಯುಗಳೆಲ್ಲೆಲ್ಲಾ ಹರಡಿಕೊಂಡಿದೆ. ಇಷ್ಟೇ ಅಲ್ಲದೆ ಈ ಜಿಲ್ಲೆಯು ಪುರಾತನ ಕಾಲದಿಂದ ಐತಿಹಾಸಿಕ ಮಹತ್ವವನ್ನು ಪಡೆದುದಕ್ಕೆ ನಿದರ್ಶನಗಳಿವೆ. ಕ್ರಿ.ಪೂ. ೨ನೇ ಶತಮಾನದಿಂದ ಕ್ರಮವಾಗಿ ಮೌರ್ಯರು, ಶಾತವಾಹನರು, ಕದಂಬರು, ಗಂಗರು, ಬಾದಾಮಿ

ಚಾಲುಕ್ಯರು, ರಟ್ಟರು, ರಾಷ್ಟ್ರಕೂಟರು, ಕಲ್ಯಾಣಚಾಲುಕ್ಯರು, ಚೋಳರು, ಕಲಚೂರ್ಯರು, ಹೊಯ್ಸಳರು, ನೊಳಂಬರು, ವಿಜಯನಗರ ಸಾಮ್ರಾಜ್ಯ, ದೇಸಾಯಿ ಮನೆತನ, ಬಹುಮನಿ ಸಾಮ್ರಾಜ್ಯ, ಪಾಳೆಗಾರರು, ಮಾಮರಾಠರು ರಾಜರಷ್ಟೆ, ಅಲ್ಲದೆ ಸಾಮಂತರೂ ಆಳ್ವಿಕೆ ನಡೆಸಿದ ರಾಜಕೀಯ ಚರಿತ್ರೆಯಿದೆ. ಐತಿಹಾಸಿಕ ಕಾಲದಲ್ಲಿ ಮೌರ್ಯ ಸಾಮ್ರಾಟನಾದ ಅಶೋಕನ ಆಳ್ವಿಕೆಗೆ ಈ ಪ್ರದೇಶ ಒಳಪಟ್ಟಿದ್ದಿತು ಎಂಬುದಕ್ಕೆ ಗುಲಬರ್ಗಾ ಜಿಲ್ಲೆಯ ಸನ್ನತಿ, ರಾಯಚೂರು ಜಿಲ್ಲೆಯ ಮಸ್ಕಿ, ಸಿರುಗುಪ್ಪ ಮೊದಲಾದ ಪ್ರದೇಶಗಳಲ್ಲಿ ದೊರೆತಿರುವ ಶಾಸನಗಳೇ ಸಾಕ್ಷಿಯಾಗಿವೆ.

ಬೀದರ್ ಜಿಲ್ಲೆಯ ಶಾಸನೋಕ್ತ ಇತಿಹಾಸವು ಪ್ರಾರಂಭವಾಗುವುದು ಕ್ರಿ.ಶ. ೪–೫ನೇ ಶತಮಾನದಿಂದ. ಈ ಬೀದರ್ ಜಿಲ್ಲೆಯು ಕರ್ನಾಟಕದ ತುದಿಯಲ್ಲಿದ್ದು ಉತ್ತರದ ಬಯಲು ಜಿಲ್ಲೆಗಳಿಗೆ ಹೋಲಿಸಿದಲ್ಲಿ ಸ್ವಲ್ಪ ಎತ್ತರದಲ್ಲಿದೆ. ಜಿಲ್ಲೆಯ ದಕ್ಷಿಣ ಭಾಗವು ಪೂರ್ವದಿಂದ ಪಶ್ಚಿಮಕ್ಕೆ ಇಳಿಜಾರಾಗಿದ್ದು, ಉತ್ತರ ಭಾಗವು ಪೂರ್ವಕ್ಕೆ ಇಳಿಜಾರಾಗಿದೆ. ಈ ಎರಡು ಇಳಿಜಾರು ಪ್ರದೇಶಗಳಲ್ಲಿ ಗೋದಾವರಿಯ ಉಪನದಿಗಳಾದ ಕಾರಂಜಾ ಮತ್ತು ಮಂಜಿರಾ ಎಂಬ ಸಣ್ಣತೊರೆಗಳು ಹರಿಯುತ್ತವೆ. ಇವುಗಳ ದಂಡೆಯಲ್ಲಿ ಅಲ್ಲಲ್ಲಿ ಶಿಲಾಯುಗದ ಅವಶೇಷಗಳು ದೊರೆತಿವೆ. ಉಳಿದಂತೆ ಈ ಪ್ರದೇಶದಲ್ಲಿ ಶಾಸನಗಳ ಸಂಖ್ಯೆ ತುಂಬಾ ಕಡಿಮೆ. ೧೪ನೆಯ ಶತಮಾನದ ಆರಂಭದಿಂದ ಮುಸಲ್ಮಾನರ ಆಳ್ವಿಕೆ ಆರಂಭವಾದ ಮೇಲೆ ಅಗ್ರಹಾರ, ದೇವಾಲಯ, ರಚನೆಗಳು, ಜೀರ್ಣೋದ್ಧಾರಗಳು ಮುಂತಾದ ಕಾರ್ಯಗಳು ಕುಂಠಿತವಾದ್ದರಿಂದ ಶಾಸನಗಳ ರಚನೆ ತೀರ ಕಡಿಮೆ. ಇದರೊಂದಿಗೆ ಷಾಹಿ ಮತ್ತು ಮೊಗಲರ ಆಳ್ವಿಕೆಯಲ್ಲಿ ನಾಶವಾಗಿರಲೂಬಹುದು.

ಈ ಜಿಲ್ಲೆಯಲ್ಲಿ ಮೊದಲು ವಾಕಾಟಕರು ಆಳ್ವಿಕೆ ಮಾಡಿದರೆಂದು ಅಲ್ಲಿ ಸಿಗುವ ಒಂದೆರಡು ಶಾಸನಗಳಿಂದ ತಿಳಿದುಬರುತ್ತದೆ. ಇವರ ನಂತರ ಕಲ್ಯಾಣದ ಚಾಲುಕ್ಯರವರೆಗೆ ಶಾಸನಗಳು ದೊರೆಯುವುದಿಲ್ಲ. ಕಲ್ಯಾಣ ಚಾಲುಕ್ಯರು ಆಳ್ವಿಕೆ ನಡೆಸಿದ್ದರೆಂಬುದಕ್ಕೆ ಇಮ್ಮಡಿ ಜಯಸಿಂಹನ ಶಾಸನಗಳು ದೊರೆತಿವೆ. ಜೊತೆಗೆ ತ್ರೈಲೋಕ್ಯಮಲ್ಲನ ಶಾಸನವೊಂದು ದೊರೆತಿದೆ. ನಂತರ ಕಲಚೂರಿ ವಂಶದವರು ಆಳ್ವಿಕೆ ನಡೆಸಿದರೆಂದು ನಂತರ ಸಿಂದರು, ಕಾಕತೀಯರು ಆಳಿದ ನಂತರ ಮುಸ್ಲಿಂ ದೊರೆಗಳು ಈ ಪ್ರದೇಶವನ್ನು ಆಳಿದರೆಂದು ಶಾಸನಗಳು ತಿಳಿಸುತ್ತವೆ. ಔರಂಗಜೇಬನ ಕಾಲದಲ್ಲಿ ಇಲ್ಲಿಯ ದೇವಾಲಯಗಳು ಮತ್ತಷ್ಟು ನಾಶವಾಗುತ್ತವೆ.

ಧಾರವಾಡ ಜಿಲ್ಲೆಯಲ್ಲಿ ದೊರೆತಿರುವ ಶಾಸನಗಳನ್ನು ಗಮನಿಸಿದಾಗ ರಾಷ್ಟ್ರಕೂಟರು ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ದೇವಗಿರಿಯ ಯಾದವರು, ವಿಜಯನಗರದ ಅರಸರು ಆಳ್ವಿಕೆ ನಡೆಸಿದ ಸಂಗತಿ ತಿಳಿದುಬರುತ್ತದೆ. ಬಿಜಾಪುರ ಜಿಲ್ಲೆಯಲ್ಲಿ ಮೂರು ನದಿಗಳು ಹರಿಯುತ್ತವೆ. ಡೋಣಿ, ಭೀಮಾ ಮತ್ತು ಕೃಷ್ಣಾನದಿ, ಕೃಷ್ಣಾನದಿಯ ಉಪನದಿಗಳಾದ ಮಲಪ್ರಭಾ, ಘಟಪ್ರಭಾ

ನದಿಗಳು ಸಹ ಹರಿಯುತ್ತವೆ. ಈ ಜಿಲ್ಲೆಯ ಶಾಸನಗಳನ್ನು ಗಮನಿಸಿದಾಗ ಅಲ್ಲಿನ ಇತಿಹಾಸ ಪ್ರಾರಂಭವಾಗುವುದು ರಾಷ್ಟ್ರಕೂಟರ ಕಾಲದಿಂದ. ನಂತರ ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ದೇವಗಿರಿಯ ಸೇವಣರು ಆಳ್ವಿಕೆ ನಡೆಸಿದರೆಂದು ತಿಳಿದುಬರುತ್ತದೆ.

ರಾಯಚೂರು ಜಿಲ್ಲೆಯ ಇತಿಹಾಸವು ಮೌರ್ಯರಿಂದಲೇ ಪ್ರಾರಂಭವಾಗುತ್ತದೆ. ಪಾಟಲಿಪುತ್ರವನ್ನು ರಾಜಧಾನಿಯಾಗಿಸಿಕೊಂಡು ಆಳಿದ ಪ್ರಖ್ಯಾತ ರಾಜವಂಶಗಳಲ್ಲೊಂದಾದ ಮೌರ್ಯವಂಶದ ಅರಸರು ಈ ಭಾಗವನ್ನು ಸುಮಾರು ಕ್ರಿ.ಪೂ. ೩೦೦ರಲ್ಲಿ ಆಳುತ್ತಿದ್ದ ಉಲ್ಲೇಖ ಮಸ್ಕಿಯಲ್ಲಿ ದೊರೆತಿರುವ ಅಶೋಕನ ಶಾಸನದಿಂದ ತಿಳಿದುಬರುತ್ತದೆ. ನಂತರ ರಾಷ್ಟ್ರಕೂಟರು ಇಂದಿನ ಗುಲಬರ್ಗಾ ಜಿಲ್ಲೆಯ ಮಳಖೇಡವನ್ನು ರಾಜಧಾನಿಯಾಗಿಸಿಕೊಂಡು ಆಳ್ವಿಕೆ ನಡೆಸಿದರೆಂದು ಇಲ್ಲಿಯ ಶಾಸನಗಳು ಉಲ್ಲೇಖಿಸುತ್ತವೆ. ತದನಂತರ ಕಲ್ಯಾಣಚಾಲುಕ್ಯರು, ದೇವಗಿರಿಯ ಸೇವಣರು, ಕಾಕತೀಯರು, ವಿಜಯನಗರದ ಅರಸರು, ಬಹುಮನಿ ಸಾಮ್ರಾಜ್ಯ, ಕರಡಿಕಲ್ಲು ಕದಂಬರು, ಅಹಿಹಯರು ಮತ್ತು ಸಿಂದರು ಆಳ್ವಿಕೆ ನಡೆಸಿದ್ದಕ್ಕೆ ಶಾಸನಗಳಲ್ಲಿ ಉಲ್ಲೇಖವಿದೆ.

ಕೊಪ್ಪಳ ಜಿಲ್ಲೆಯಲ್ಲಿ ಮೌರ್ಯರು ಆಳ್ವಿಕೆ ನಡೆಸಿದ್ದರೆಂಬುದಕ್ಕೆ ಕೊಪ್ಪಳ ಗ್ರಾಮ ಸಮೀಪದ ಪಾಲ್ಕಿ ಗುಂಡಿನ ಬಂಡೆಯ ಮೇಲೆ ಎರಡು ಅಶೋಕನ ಶಾಸನಗಳ ದೊರೆತಿವೆ. ನಂತರ ಬಾದಾಮಿ ಚಾಲುಕ್ಯರು, ನೊಳಂಬರು, ಕಳಚೂರ‍್ಯರು ಹೊಸಮತಿದುರ್ಗದ ಅರಸರು ವಿಜಯನಗರದ ಅರಸರು ಮತ್ತು ಮರಾಠರು ಆಳ್ವಿಕೆ ನಡೆಸಿದರೆಂದು ಶಾಸನಗಳು ತಿಳಿಸುತ್ತವೆ. ಬಳ್ಳಾರಿ ಜಿಲ್ಲೆಯ ಇತಿಹಾಸವನ್ನು ಶಾಸನಗಳು ಹೀಗೆ ಹೇಳುತ್ತವೆ. ಮೌರ್ಯರು ಆಳ್ವಿಕೆಗೆ ಒಳಪಟ್ಟಿತ್ತೆಂಬುದಕ್ಕೆ ಸಿರುಗುಪ್ಪ ತಾಲೂಕಿನ ಉದೆಗೊಳ ಮತ್ತು ನಿಟ್ಟೂರು ಎಂಬ ಸ್ಥಳದಲ್ಲಿ ದೊರೆತ ಶಾಸನಗಳಿಂದ ತಿಳಿದುಬರುತ್ತದೆ. ಶಾತವಾಹನರು, ಪಲ್ಲವರ ಆಳ್ವಿಕೆ ನಡೆಸಿದರೆಂಬುದನ್ನು ಹಿರೇಹಡಗಲಿಯ ಪ್ರಾಕೃತ ಶಾಸನದಿಂದ ತಿಳಿಯಬಹುದಾಗಿದೆ. ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಳಚೂರ‍್ಯರು, ನೊಳಂಬರು, ಮಹಾಬಲಿವಂಶಿಯರು, ಕೊಟ್ಟೂರಿನ ಕದಂಬರು, ಪಾಂಡ್ಯರು, ಹೊಯ್ಸಳರು, ಯಾದವರು, ವಿಜಯನಗರದ ಅರಸರು, ಬಿಜಾಪುರದ ಸುಲ್ತಾನರು ಆಳ್ವಿಕೆ ನಡೆಸಿದರೆಂದು ಇಲ್ಲಿಯ ಶಾಸನಗಳಿಂದ ತಿಳಿಯುತ್ತದೆ.

ಬಾಗಲಕೋಟೆ ಜಿಲ್ಲೆ, ಬಾದಾಮಿಯನ್ನು ರಾಜಧಾನಿ ಮಾಡಿಕೊಂಡು ಬಾದಾಮಿ ಚಾಲುಕ್ಯರು ಆಳ್ವಿಕೆ ನಡೆಸಿದರು. ತದನಂತರ ಪಲ್ಲವರು, ರಾಷ್ಟ್ರಕೂಟರ, ಕಲ್ಯಾಣ ಚಾಲುಕ್ಯರು, ನೊಳಂಬರು, ಕಳಚೂರ‍್ಯರು, ಸೇವಣರು, ಸಿಂಧರು, ರಟ್ಟರು, ಚೋಳ, ವಿಜಯನಗರದ ಅರಸರು, ಆದಿಲ್ ಷಾಹಿಗಳು ಆಳ್ವಿಕೆ ನಡೆಸಿದರೆಂದು ಶಾಸನಗಳಿಂದ ತಿಳಿದುಬರುತ್ತದೆ. ಗುಲಬರ್ಗಾ ಜಿಲ್ಲೆ ಕಲ್ಯಾಣಚಾಲುಕ್ಯರು, ಮೌರ್ಯರು, ದೇವಗಿರಿಯ ಯಾದವರು, ಬಹುಮನಿ ಸುಲ್ತಾನರು ಆಳ್ವಿಕೆ

ನಡೆಸಿದರು. ಬೆಳಗಾವಿ ಜಿಲ್ಲೆಯಲ್ಲಿ ಶಾಸನ ಪ್ರಕಟಣೆಯ ಕಾರ್ಯ ಹೆಚ್ಚಾಗಿ ನಡೆದಿಲ್ಲ. ಕಲ್ಯಾಣ ಚಾಲುಕ್ಯರು, ರಟ್ಟರು ಮತ್ತು ದೇಸಾಯಿ ಮನೆತನದವರು ಆಳ್ವಿಕೆ ನಡೆಸಿದರೆಂಬುದಕ್ಕೆ ಶಿರಸಂಗಿ, ಸವದತ್ತಿ, ಹೂಲಿ ಮೊದಲಾದ ಶಾಸನಗಳಿಂದ ತಿಳಿದುಬರುತ್ತದೆ. ಅಲ್ಲದೆ ವಿಜಯನಗರದ ಅರಸರ ದಾನನೀಡಿದ್ದರ ಬಗ್ಗೆ ಸೊಗಲ ಶಾಸನದಲ್ಲಿ ಉಲ್ಲೇಖವಿದೆ. ಹಾವೇರಿ ಜಿಲ್ಲೆಯಲ್ಲಿ ಕಲ್ಯಾಣ ಚಾಲುಕ್ಯರು, ರಟ್ಟರು, ವಿಜಯನಗರದ ಅರಸರು ಆಳ್ವಿಕೆ ನಡೆಸಿದ ಉಲ್ಲೇಖಗಳಿವೆ.

ಇಂತಹ ಸಾಕಷ್ಟು ರಾಜಕೀಯ ಮಾಹಿತಿಗಳು ಶಾಸನಗಳಿಂದ ದೊರೆಯುವಂತೆ ಪೌರಾಣಿಕ ಅಂಶಗಳು ಕೂಡ ದೊರೆಯುತ್ತವೆ. ಅಂದರೆ ಶಾಸನಗಳಲ್ಲಿ ಪ್ರಮುಖವಾಗಿ ಅವರ ವಂಶವರ್ಣನೆ, ಅರಸ ಅಥವಾ ಸಾಮಂತ ವ್ಯಕ್ತಿಗಳ ವರ್ಣನೆ ಮತ್ತು ಶಾಸನವಿರುವ ಸ್ಥಳದ ವರ್ಣನೆಯನ್ನು ಹೇಳಬೇಕಾದರೆ ಪೌರಾಣಿಕವಾಗಿ ಚಿತ್ರಿಸಿರುವುದನ್ನು ಕಾಣುತ್ತೇವೆ. ಇಂತಹ ಸ್ಥಳದ ವರ್ಣನೆ ಇರುವ ಶಾಸನವನ್ನು ಚೌಡದಾನಪುರದಲ್ಲಿ ಕಾಣಬಹುದು.

'ಸುರನದಿಯೇ ತುಂಗಭದ್ರಾ
ವರನದಿ ಸುರಸಮಿತಿ ವಿಪ್ರಗಣ ನಿಕರವು ಆ
ಸುರಗಿರಿ ಮಹೇಶಭವನವು
ಧರೆಯೊಳ್ಕವಿಳಾಸವೆನಿಪ ಮುಕ್ತಿ ಕ್ಷೇತ್ರವು'॥[7]

'ದೇವಗಂಗೆಗೆ ಸಮಾನವಾದ ತುಂಗಭದ್ರಾ ನದಿ ದೇವತೆಗಳಿಗೆ ಸಮಾನರಾದ ಬ್ರಾಹ್ಮಣರು, ಕೈಲಾಸಕ್ಕೆ ಸಮಾನವಾದ ಶಿವದೇವಾಲಯ ಇವುಗಳಿಂದ ಕೂಡಿದ ಮುಕ್ತಿಕ್ಷೇತ್ರ (ಚೌಡದಾನಪುರ) ಹೆಸರಿನ ಸ್ಥಳವುಂಟು. ಆ ಮುಕ್ತಿಕ್ಷೇತ್ರದಲ್ಲಿದ್ದು ನೀನು ಮಹಿಮೆಯನ್ನು ತೋರಬೇಕೆಂದು ಶಾಸನ ಉಲ್ಲೇಖಿಸುತ್ತದೆ.'

ಹೀಗೆ ಶಾಸನಗಳಲ್ಲಿ ಪುರಾಣ ಉಲ್ಲೇಖಿತ ಅರಸರು, ವಂಶ, ಬಿರುದಾವಳಿಗಳು, ಪ್ರದೇಶಗಳು, ಯುದ್ಧ, ಸೋಲು-ಗೆಲುವುಗಳ ವರ್ಣನೆಯು ಎಲ್ಲರಿಗೂ ಒಪ್ಪಿತವಾದ (ಇಲ್ಲಿಯವರೆಗೆ ನಂಬಿದ್ದ ಇತಿಹಾಸ) ಇತಿಹಾಸವನ್ನು ಕಟ್ಟಿಕೊಟ್ಟರೆ ಇಂತಹದೇ ಶಾಸನಗಳಲ್ಲಿ ಬರುವ ಸಾಮಂತರ, ತಳಸಮುದಾಯದವರ, ಸ್ತ್ರೀಯರ (ಮಹಾಸತಿಕಲ್ಲು) ಸಾಧುಸಂತರ (ನಿಷಧಿಕಲ್ಲು) ತಮ್ಮ ವೀರತ್ವದಿಂದ (ವೀರಗಲ್ಲುಗಳು) ಮಡಿದ ಶಾಸನಗಳಲ್ಲಿನ ವರ್ಣನೆ, ವಿವರಣೆಗಳು ಇತಿಹಾಸದ ಇನ್ನೊಂದು ಮಗ್ಗಲನ್ನು ನೋಡಲು ಸಹಾಯಕವಾಗಿವೆ.

ಹೀಗೆ ಪ್ರಾಚೀನ ಕಾಲದ ಅವಶೇಷಗಳಿಂದ ಹಿಡಿದು ಪೌರಾಣಿಕವಾಗಿ, ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಸಮೃದ್ಧವಾಗಿರುವ ಕಾರಣಕ್ಕೆ ಉತ್ತರ ಕರ್ನಾಟಕದ ಪ್ರದೇಶವನ್ನು ಮಹಾಪ್ರಬಂಧದ ವ್ಯಾಪ್ತಿಯನ್ನಾಗಿಸಿಕೊಂಡಿದೆ.

**ಅಧ್ಯಯನದ ವೈಧಾನಿಕತೆ:**

ಶಾಸನಗಳಲ್ಲಿರುವ ಇತಿಹಾಸ ಮತ್ತು ಪುರಾಣಗಳ ಅಂತಃಸಂಬಂಧದ ನೆಲೆಗಳನ್ನು ಶೋಧಿಸುವ ಒಂದು ಬಗೆಯ ಅಂತರ್‌ಶಿಸ್ತೀಯ ಅಧ್ಯಯನ ವಿಧಾನವನ್ನು ಇಲ್ಲಿ ಅನುಸರಿಸಲಾಗಿದೆ.

**ಅಧ್ಯಾಯ ೧ – ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆ**

ಈ ಅಧ್ಯಾಯದಲ್ಲಿ ಮಹಾಪ್ರಬಂಧದ ಮುಖ್ಯ ಉದ್ದೇಶ ಹಾಗೂ ವ್ಯಾಪ್ತಿಗೆ ಸಂಬಂಧಿಸಿದಂತೆ ಒಂದು ಚೌಕಟ್ಟು ಹಾಕಿಕೊಳ್ಳಲಾಗಿದೆ. ಪೀಠಿಕಾ ಭಾಗದಲ್ಲಿ ಮಹಾಪ್ರಬಂಧದಲ್ಲಿ ಚರ್ಚಿತವಾಗುವ ವಿಚಾರಗಳನ್ನು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ. ಜೊತೆಗೆ ಅಧ್ಯಯನದ ಸಂದರ್ಭದಲ್ಲಿ ಅಳವಡಿಸಿಕೊಳ್ಳಲಾದ ವಿಧಾನಗಳನ್ನು ಕುರಿತು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

**ಅಧ್ಯಾಯ ೨ – ಇಲ್ಲಿಯವರೆಗಿನ ಅಧ್ಯಯನಗಳ ಸಮೀಕ್ಷೆ**

ಈ ಅಧ್ಯಾಯದಲ್ಲಿ ಶಾಸನಶಾಸ್ತ್ರವನ್ನು ಕುರಿತು ಇಲ್ಲಿಯವರೆಗೆ ನಡೆದ ಅಧ್ಯಯನಗಳ ಸಮೀಕ್ಷೆಯನ್ನು ನೀಡಲಾಗಿದೆ.

**ಅಧ್ಯಾಯ ೩ – ಪುರಾಣ ನಿರ್ವಚನೆ**

ಈ ಅಧ್ಯಾಯದಲ್ಲಿ ಪುರಾಣಕ್ಕೆ ಸಂಬಂಧಿಸಿದಂತೆ ಪುರಾಣ ಎಂದರೇನು? ಪುರಾಣದ ಕುರಿತ ವಿವಿಧ ವ್ಯಾಖ್ಯಾನಗಳು, ಪುರಾಣದ ಹುಟ್ಟು ವರ್ಗೀಕರಣದ ಮೊದಲಾದ ವಿಚಾರಗಳನ್ನು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ.

**ಅಧ್ಯಾಯ ೪ – ಇತಿಹಾಸ ಮತ್ತು ಪುರಾಣಗಳ ಸಂಬಂಧ ಕನ್ನಡ ಶಾಸನಗಳನ್ನು ಅನುಲಕ್ಷಿಸಿ.**

ಈ ಅಧ್ಯಾಯದಲ್ಲಿ ಇತಿಹಾಸ, ಪುರಾಣ ಮತ್ತು ಕನ್ನಡ ಶಾಸನಗಳ ಸಂಬಂಧವನ್ನು ಜೊತೆಗೆ ಶಾಸನಗಳಲ್ಲಿರುವ ಪೌರಾಣಿಕ ಅಂಶಗಳನ್ನು ವಂಶಸಂಬಂಧಿ ಪೌರಾಣಿಕ ಅಂಶಗಳು, ವ್ಯಕ್ತಿಸಂಬಂಧಿ ಪೌರಾಣಿಕ ಅಂಶಗಳು ಮತ್ತು ಸ್ಥಳಸಂಬಂಧಿ ಪೌರಾಣಿಕ ಅಂಶಗಳು ಎಂಬ ಉಪಶೀರ್ಷಿಕೆಯಡಿಯಲ್ಲಿ ಚರ್ಚಿಸಲಾಗಿದೆ. ಯಾವುದೇ ಕಾಲದ ರಾಜಾಶ್ರಯದ ಶಾಸನಗಳನ್ನು ನೋಡಿದರೂ ಮೊದಲು ದೊರೆಯುವುದು ಆ ರಾಜರ ವಂಶ. ಅವರು ತಮ್ಮ ವಂಶವನ್ನು ಪೌರಾಣಿಕ ವ್ಯಕ್ತಿಗಳು ದೈವಾಂಶಸಂಭೂತರೂ ಆದ ಬ್ರಹ್ಮ, ವಿಷ್ಣು, ವಷಿಷ್ಠ, ಇಂದ್ರ, ಚಂದ್ರ, ಸೂರ್ಯ ಮುಂತಾದ ದೇವ–ದೇವತೆಗಳೊಡನೆ ಸಮೀಕರಿಸಿಕೊಂಡಿರುವುದನ್ನು ಕಾಣುತ್ತೇವೆ. ಹಾಗೆಯೇ ಅವರ ವಂಶದ ಮೂಲಪುರುಷರೆಲ್ಲರೂ ದೈವಾಂಶವುಳ್ಳವರು ಎಂದು ಹೇಳಿಕೊಳ್ಳುತ್ತಿದ್ದರು. ಇವುಗಳ ಮೂಲ ಉದ್ದೇಶ ಜನರು ತಮ್ಮನ್ನು ದೇವರಂತೆ ಭಾವಿಸಿ ಅವರುಗಳಿಗೆ ಕೊಡುವ ಗೌರವ, ಭಯ,

ಭಕ್ತಿ, ಧನ, ಆದರಗಳು, ನಮಗೂ ನೀಡಬೇಕೆಂಬುದೇ ಆಗಿತ್ತು. ಹಾಗೆಯೇ ಸ್ಥಳಪುರಾಣಗಳನ್ನು ಕುರಿತು ಚರ್ಚಿಸಲಾಗುವುದು. ಹೀಗೆ ಶಾಸನಗಳಲ್ಲಿರುವ ಪೌರಾಣಿಕ ಅಂಶಗಳನ್ನು ವಿಶ್ಲೇಷಿಸಲಾಗುವುದು.

**ಅಧ್ಯಾಯ ೫ – ಐತಿಹ್ಯ ಮತ್ತು ಕನ್ನಡ ಶಾಸನಗಳು**

ಈ ಅಧ್ಯಾಯದಲ್ಲಿ ಐತಿಹ್ಯಗಳು ಪುರಾಣಗಳ ಜೊತೆಗೂಡಿ ಶಾಸನಗಳಲ್ಲಿ ಯಾವ ರೀತಿಯಲ್ಲಿ ಉಲ್ಲೇಖಗೊಂಡಿವೆ ಎಂಬುದನ್ನು ದೈವಪ್ರಧಾನ ಐತಿಹ್ಯಗಳು ಮತ್ತು ಸ್ಥಳಪ್ರಧಾನ ಐತಿಹ್ಯಗಳು ಎಂಬ ಉಪಶೀರ್ಷಿಕೆಯಡಿಯಲ್ಲಿ ಚರ್ಚಿಸಲಾಗಿದೆ. ಅಂದರೆ ಯಾವ ಊರು ಅಥವಾ ಸ್ಥಳ ಅವುಗಳ ಬಗ್ಗೆ ಇರುವ ಪ್ರಚಲಿತ ಅಥವಾ ಪ್ರಾಚೀನ ಕತೆಗಳನ್ನು ಐತಿಹ್ಯ ಎನ್ನುತ್ತೇವೆ. ಈ ಕತೆಗಳು ವಾಸ್ತವವಾಗಿ ನಡೆದ ಘಟನೆಗಳೆ ಆಗಿದ್ದು ಮುಂದೆ ಕಲ್ಪಿತಾಂಶಗಳು ಮಿಳಿತಗೊಂಡು ಬೆಳೆದುಬಂದಿವೆ. ಎಷ್ಟೋ ವೇಳೆ ಊರಿನ ಹೆಸರನ್ನು, ಉಗಮವನ್ನು ಹೇಳಲು ಐತಿಹ್ಯಗಳಿಗೆ ಮೊರೆಹೋಗಬೇಕಾಗುತ್ತದೆ. ಪುರಾಣಗಳಲ್ಲಿ ರಾಜರುಗಳನ್ನು ದೇವತೆಗೆ ಸಮನಾಗಿ ನಿರೂಪಿಸುವುದನ್ನು ಕಾಣುತ್ತೇವೆ. ಆದರೆ ಐತಿಹ್ಯ ಜನಸಾಮಾನ್ಯರ ನಡುವೆ ಹುಟ್ಟಿ ಬೆಳೆದುದರಿಂದ ಜನಸಾಮಾನ್ಯರ ಮಾಹಿತಿಯನ್ನು ಒದಗಿಸುತ್ತದೆ ಎಂಬುದನ್ನು ನಿರೂಪಿಸಲಾಗಿದೆ.

**ಅಧ್ಯಾಯ ೬ – ಉತ್ತರ ಕರ್ನಾಟಕದ ಕನ್ನಡ ಶಾಸನಗಳಲ್ಲಿ ಪೌರಾಣಿಕತೆ : ವೈಶಿಷ್ಟ್ಯಗಳು**

ಈ ಅಧ್ಯಾಯದಲ್ಲಿ ಉತ್ತರ ಕರ್ನಾಟಕದ ಕನ್ನಡ ಶಾಸನಗಳಲ್ಲಿನ ಪೌರಾಣಿಕತೆಯ ವಿಶೇಷತೆಯನ್ನು ಚರ್ಚಿಸಲಾಗಿದೆ.

**ಅಧ್ಯಾಯ ೭: ಪುರಾಣಗಳನ್ನು ಇತಿಹಾಸಗೊಳಿಸುವ ಶಾಸನಗಳು**

ಇದು ಅಧ್ಯಯನದ ಫಲಿತಗಳನ್ನು ವಿವರಿಸುವ ಸಮಾಪನದ ಅಧ್ಯಯನವಾಗಿದೆ. ಅನುಬಂಧದಲ್ಲಿ ಅಧ್ಯಯನಕ್ಕೆ ಆಕರಗಳಾಗಿ ಬಳಸಿಕೊಂಡ ಶಾಸನ ಸಂಪುಟಗಳು ಮತ್ತು ಪರಾಮರ್ಶನ ಗ್ರಂಥಗಳ ಸೂಚಿಯನ್ನು ಕೆಲವು ಪ್ರಮುಖ ಶಾಸನಗಳ ಛಾಯಾಚಿತ್ರಗಳನ್ನು ಒದಗಿಸಲಾಗಿದೆ.

**ಅಡಿಟಿಪ್ಪಣಿಗಳು**

೧. ಶಾಸನ ಸಂಗ್ರಹ, ಆರ್. ಶೇಷಶಾಸ್ತ್ರೀ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೨. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟಗಳು, ಪೀಠಿಕಾ ಭಾಗದಿಂದ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

# ಅಧ್ಯಾಯ ಎರಡು

# ಇಲ್ಲಿಯವರೆಗಿನ ಅಧ್ಯಯನಗಳ ಸಮೀಕ್ಷೆ

ಶಾಸನಗಳನ್ನು ಮೊಟ್ಟಮೊದಲು ವ್ಯವಸ್ಥಿತವಾಗಿ ಸಂಗ್ರಹಿಸಿದವರು ಎಂದರೆ ಬ್ರಿಟಿಷ್ ವಿದ್ವಾಂಸರಾದ ಬಿ.ಎಲ್. ರೈಸರು, ಫ್ಲೀಟ್ ಅವರು. ತದನಂತರ ಭಾರತೀಯರಾದ ಕೆ.ಬಿ. ಪಾಠಕ್, ರಾವ್‌ಬಹದ್ದೂರು, ಆರ್. ನರಸಿಂಹಾಚಾರ್, ಆರ್. ಶಾಮಶಾಸ್ತ್ರೀ, ಆರ್.ಎಸ್.ಪಂಚಮುಖಿ, ಡಾ. ಎಂ.ಹೆಚ್. ಕೃಷ್ಣ, ಹೆಚ್. ಕೃಷ್ಣಶಾಸ್ತ್ರೀ, ಪಿ.ಬಿ ದೇಸಾಯಿ, ಕೆ.ಜಿ.ಕುಂದಣಗಾರ, ಎಸ್.ಸಿ.ನಂದಿಮಠ, ಮುಂತಾದ ವಿದ್ವಾಂಸರು ರೈಸರ ಗಮನಕ್ಕೆ ಬಾರದ ನೂರಾರು ಶಾಸನಗಳನ್ನು ಪುರಾತತ್ವ ಇಲಾಖೆಯ ವಾರ್ಷಿಕ ವರದಿಗಳಲ್ಲಿ ಮತ್ತು ಪ್ರತಿಯೊಂದು ಜಿಲ್ಲೆಯ ಅನುಬಂಧಗಳಲ್ಲಿ ಪ್ರಕಟಿಸಿದ್ದಾರೆ.

ಆರ್. ನರಸಿಂಹಾಚಾರ್ಯರು 'ಶ್ರವಣಬೆಳಗೋಳದ ಶಾಸನಗಳು' (ರೈಸ್ ಅವರ ಸಂಗ್ರಹದ ಪರಿಷ್ಕರಣೆ) ಆರ್.ಎಸ್. ಪಂಚಮುಖಿ ಮತ್ತು ಎನ್. ಲಕ್ಷ್ಮೀನಾರಾಯಣಯರು ಸಂಪಾದಿಸಿದ "ಬೊಂಬಾಯಿ ಕರ್ನಾಟಕದ ಶಾಸನಗಳು" ಪಂಚಮುಖಿಯವರ ಕರ್ನಾಟಕದ ಶಾಸನಗಳ ಸಂಪುಟಗಳು, ಆರ್ ಶಾಮಶಾಸ್ತ್ರೀ ಮತ್ತು ಎನ್. ಲಕ್ಷ್ಮಿನಾರಾಯಣರಾಯರು ಸಂಪಾದಿಸಿದ 'ದಕ್ಷಿಣ ಭಾರತದ ಶಾಸನಗಳು ಉಲ್ಲೇಖನಾರ್ಹವಾದುದು.

ಈಚಿನ ತಲೆಮಾರಿನವರಾದ ಪಿ.ಬಿ.ದೇಸಾಯಿ, ಎ.ಎಂ. ಅಣ್ಣಿಗೇರಿ, ಎಸ್.ಎಚ್.ರಿತ್ತಿ, ಕೆ.ವಿ. ರಮೇಶ್, ಆರ್.ಎನ್. ಗುರುವಾ, ಎಸ್. ಶೆಟ್ಟರ್, ಬಿ.ಆರ್.ಗೋಪಾಲ್, ಮಾಧವ ಎನ್. ಕಟ್ಟಿ, ಚಿದಾನಂದಮೂರ್ತಿ, ಎಂ.ಎಂ. ಕಲಬುರ್ಗಿ, ಸಿ. ನಾಗಭೂಷಣ ಮುಂತಾದ ಅನೇಕ ವಿದ್ವಾಂಸರೂ ಶಾಸನಗಳನ್ನು ತಾಮ್ರಪಟಗಳನ್ನು ಸಂಗ್ರಹಿಸಿ ಮೌಲ್ಯಯುತವಾದ ಲೇಖನ ಬರೆದಿದ್ದಾರೆ. ಇಲ್ಲಿಯವರೆಗೂ ಶಾಸನಗಳನ್ನು ಕೂಡಿಹಾಕುವ ಅವುಗಳಲ್ಲಿರುವ ರಾಜಕೀಯ ಅಂಶಗಳಿಗೆ ಮಹತ್ವವನ್ನು ನೀಡಿ ಅವುಗಳ ಕಾಲ, ಅವುಗಳನ್ನು ಹಾಕಿಸಿದಂತಹ ರಾಜನ ವಿವರಣೆ, ಅವನ ವಂಶದ ವಿವರಣೆ,

ದಾನ ಕೊಟ್ಟಂತಹ ವಿಷಯ ಹಾಕಿಸಿದ ಸ್ಥಳ, ಶಾಸನ ಯಾರಿಗೆ ಸೇರಿದ್ದು, ಎನ್ನುವಂತಹ ಭೌತಿಕ ಅಂಶಗಳಿಗೆ ಮಾತ್ರ ಪ್ರಾಮುಖ್ಯತೆಯನ್ನು ನೀಡಿದ್ದರು. ಆದರೆ ಎಂ. ಚಿದಾನಂದಮೂರ್ತಿಯವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಗ್ರಂಥವು ಹೊರಬಂದ ನಂತರ ಶಾಸನಗಳನ್ನು ನೋಡುವ ದೃಷ್ಟಿಕೋನ ಬದಲಾಯಿತು. ಇಲ್ಲಿಯವರೆಗೆ ಕೇವಲ ರಾಜಕೀಯ ಇತಿಹಾಸಕ್ಕೆ ಮಾತ್ರ ಬಳಸಿಕೊಂಡ ಶಾಸನಗಳನ್ನು ಅವುಗಳಲ್ಲಿರುವ ಸಾಂಸ್ಕೃತಿಕ ಅಂಶಗಳಾದ ಧರ್ಮ, ವಿದ್ಯಾಭ್ಯಾಸ, ಯುದ್ಧಕಲೆ, ಕಲೆ, ಸಾಮಾಜಿಕ ವ್ಯವಸ್ಥೆ, ಆಡಳಿತ ವ್ಯವಸ್ಥೆಯ ಬಗ್ಗೆ ಆರ್ಥಿಕ ವ್ಯವಸ್ಥೆಗಳ ಬಗ್ಗೆ ಬಿಡಿ ಬಿಡಿ ಅಧ್ಯಯನಕ್ಕೆ ಹೆಚ್ಚಿನ ಒತ್ತುಕೊಟ್ಟು ಅಧ್ಯಯನ ಮಾಡಲು ಪ್ರಾರಂಭಿಸಿದರು.

ನಂತರ ಶಾಸನಗಳಲ್ಲಿ ಬಳಕೆಗೊಂಡಿರುವ ಭಾಷೆಯ ಲಿಪಿ ಕುರಿತು, ಶಾಸನಗಳಲ್ಲಿ ಕೆತ್ತಿರುವ ಶಿಲ್ಪಗಳನ್ನು ಕುರಿತು ಸಂಶೋಧನೆಗಳು ನಡೆದವು. ಆರ್. ಶೇಷಶಾಸ್ತ್ರೀಯವರು 'ಕರ್ನಾಟಕದ ವೀರಗಲ್ಲುಗಳು' ಕುರಿತು ಅಧ್ಯಯನ ನಡೆಸಿದ್ದಾರೆ. ಪ್ರಸ್ತುತ ಕೃತಿಯು ವೀರಗಲ್ಲು, ಪ್ರತಿನಿಧಿಸುವ ವೀರನ ಸಾವಿಗೆ ಕಾರಣವಾದ ಹೋರಾಟವನ್ನು ಪರಿಚಯಿಸಿ ಕೊಡುತ್ತದೆ. ಮಡಿದವನ ಜೀವನ ಮೌಲ್ಯವನ್ನು ತಿಳಿಯುವಲ್ಲಿ ನೆರವಾಗುತ್ತವೆ. ವೀರಗಲ್ಲುಗಳ ವೀರರು ತಮ್ಮ ಅರಸರ ಪರವಾಗಿ ಹೋರಾಡಿ ಮಡಿದವರು ಮತ್ತು ಸಂಘ ಜೀವಿಯಾದ ಮಾನವನ ಕರ್ತವ್ಯಗಳನ್ನು ಸಹಜವೆಂಬಂತೆ ಭಾವಿಸಿ ಪಾಲಿಸಿದ ಮಾನವ ಶ್ರೇಷ್ಠರಾಗಿದ್ದಾರೆ. ಅವರು ಮಾಡಿದ ಹೋರಾಟ ಸಮಾಜದ ಜೀವನ ಮೌಲ್ಯಗಳನ್ನು ಎತ್ತಿಹಿಡಿಯುವುದರಲ್ಲಿ ಸ್ವಾರ್ಥವನ್ನು ಬಗೆಯದೆ, ಜೀವನದ ಹಂಗನ್ನು ತೊರೆದು ಅವರ ಧೀಮಂತಿಕೆ ಮೆಚ್ಚತಕ್ಕದ್ದು. ಅವರ ಪರಾಕ್ರಮ ಕೇವಲ ಬಲಿಪಶುವಾಗಿರದೆ ಸಾಮಾಜಿಕ ನಿಷ್ಠೆ, ಸ್ವಾಮಿನಿಷ್ಠೆ, ಸ್ವಾಭಿಮಾನಗಳಿಂದ ಕೂಡಿದುದಾಗಿದೆ. ಸಣ್ಣಪುಟ್ಟ ಕಾರಣಗಳಿಗಾದರೂ ಹೊಡೆದಾಡುವ ಜನರ ಪ್ರವೃತ್ತಿ ಅಧಿಕಾರದ ಮದದಿಂದ ಕಿರುಕುಳ  ಕೊಡುವ ಅಧಿಕಾರಿಶಾಹಿ ಮನೋಧರ್ಮ, ಅವಕಾಶ ದೊರೆಯಿತೆಂದು ಅಬಲೆಯರ ಮೇಲೆರಗುವ ಕಾಮುಕ ಕಾವನಂತೆ ಮುಂತಾದ ಸಮಾಜ ವಿರೋಧಿ ಚಟುವಟಿಕೆಗಳ ಪರಿಚಯವೂ ಈ ವೀರಗಲ್ಲುಗಳಿಂದ ದೊರೆಯುತ್ತದೆ. ಇಂಥವರನ್ನು ಎದುರಿಸಿ ಮಡಿದವರು ವೀರಗಲ್ಲುಗಳ ವೀರರು ಎಂಬುದನ್ನು ವಿವರವಾಗಿ ಚರ್ಚಿಸಿದ್ದಾರೆ. ಪ್ರಸ್ತುತ ಕೃತಿಯು ಐದು ಅಧ್ಯಯನಗಳನ್ನು ಒಳಗೊಂಡಿದೆ.

ಇತ್ತೀಚಿನ ವಿದ್ವಾಂಸರು ಶಾಸನಗಳನ್ನು ಹಲವಾರು ವಿಧಗಳಲ್ಲಿ ಅಧ್ಯಯನಕ್ಕೊಳಪಡಿಸಿರುವುದು ಕಂಡುಬರುತ್ತದೆ. ಇನ್ನು ಮುಂದುವರೆದು ಜಿಲ್ಲೆಯನ್ನು ಕೇಂದ್ರೀಕರಿಸಿಕೊಂಡು, ನಾಡನ್ನು ಕೇಂದ್ರಿಕರಿಸಿಕೊಂಡು ತಾಲೂಕುಗಳನ್ನು ಕೇಂದ್ರೀಕರಿಸಿಕೊಂಡು ಇತ್ತೀಚಿಗೆ ಸಂಶೋಧನೆ ನಡೆಯುತ್ತಲಿವೆ. ಶಾಸನಗಳಲ್ಲಿ ಕಂಡುಬಂದಿರುವ ಮಹಿಳಾ ಚರಿತ್ರೆಯನ್ನು ಕುರಿತು ಸಾಹಿತ್ಯವನ್ನು ಕುರಿತು ಸಂಶೋಧನೆಗಳು ನಡೆದಿವೆ. ಉದಾಹರಣೆಗೆ ಹಂಪಿ ಶಾಸನಗಳು ಒಂದು ಅಧ್ಯಯನ, ಎಸ್.ಎಸ್. ಭಗವತಿಯವರು ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡಗೆ ಸಂಶೋಧನ ಪ್ರಬಂಧವನ್ನು ಸಲ್ಲಿಸಿ ಪಿಎಚ್.ಡಿ.

ಪದವಿ ಪಡೆದಿದ್ದಾರೆ. ಹಾಗೆಯೇ ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಮತ್ತು ಸಾಹಿತ್ಯಿಕ ಅಧ್ಯನ, ಎಂ.ಬಿ.ಭೋವಿ, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಬಿ.ಆರ್.ಹಿರೇಮಠ, ಆರನೆಯ ವಿಕ್ರಮಾದಿತ್ಯನ ಶಾಸನಗಳು ಜೆ.ಎಂ.ನಾಗಯ್ಯ, ಶಾಸನಗಳಲ್ಲಿ ಸ್ತ್ರೀಸಮಾಜ, ಚನ್ನಕ್ಕ ಎಲಿಗಾರ, ದಾವಣಗೆರೆ ಜಿಲ್ಲೆಯ ಶಾಸನಗಳು ಒಂದು ಸಾಂಸ್ಕೃತಿಕ ಅಧ್ಯಯನ, ಪಾಟೀಲ ಮಂಜುನಾಥ, ಗೋವಾದ ಕಂದಬರು ಮತ್ತು ಅವರ ಶಾಸನಗಳು, ಆರ್.ಎನ್. ಗುರುವಾ, ರಾಷ್ಟ್ರಕೂಟರ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಡಿ.ಕೆ. ಕುಲಕರ್ಣಿ, ಕೊಪ್ಪಳ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೇಲ್ಕರ್ ಸಾಹಿಬಣ್ಣ, ವಿಷ್ಣುಕುಂದ ಮತ್ತು ಅವರ ಶಾಸನಗಳು, ಶಂಕರನಾರಾಯಣ ಎಸ್. ಮುಂತಾದವರು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಶಾಸನಗಳಲ್ಲಿನ ಹಲವಾರು ವಿಷಯಗಳ ಮೇಲೆ ಅಧ್ಯಯನ ನಡೆಸಿ ಪಿಎಚ್.ಡಿ. ಪದವಿ ಪಡೆದಿದ್ದಾರೆ.

ಭಾರತೀ ಅಳವಂಡಿಮಠ ಅವರು 'ಬಾಗಳಿ ಶಾಸನಗಳು ಮತ್ತು ಸಂಸ್ಕೃತಿ' ಎಂಬ ಸಂಶೋಧನಾ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಸಲ್ಲಿಸಿ ಪಿಎಚ್.ಡಿ. ಪದವಿ ಪಡೆದಿದ್ದಾರೆ. ಈ ಗ್ರಂಥದಲ್ಲಿ ಸಂಶೋಧಕರೆ ಹೇಳಿಕೊಳ್ಳುವಂತೆ 'ಶಾಸನಗಳ ಹಿನ್ನೆಲೆಯಲ್ಲಿ ಬಾಗಳಿಯ ಇತಿಹಾಸ ಮತ್ತು ಸಂಸ್ಕೃತಿಯನ್ನು ನೋಡುವ ಉದ್ದೇಶವನ್ನು ಹೊಂದಿದ್ದು ರಾಜಕೀಯ ಇತಿಹಾಸದ ಜೊತೆಗೆ ಸಾಮಾಜಿಕ, ಆರ್ಥಿಕ, ಆಡಳಿತ, ಶೈಕ್ಷಣಿಕ ಇತಿಹಾಸ ಹಾಗೂ ಆಚರಣೆ ಪದ್ಧತಿಗಳನ್ನು ವಿವರಿಸಿದ್ದಾರೆ. ರಾಜರು ಅವರ ಪತ್ನಿಯರು ನೀಡಿದ ದಾನಗಳು, ಇವರ ಯುದ್ಧಗಳು, ದಿಗ್ವಿಜಯಗಳು, ಆ ಕಾಲದ ಸಾಮಾಜಿಕ ವಿಚಾರಗಳನ್ನು ಚರ್ಚಿಸಿದ್ದಾರೆ. ಪ್ರಸ್ತುತ ಅಧ್ಯಯನಕ್ಕೆ ಶಾಸನಗಳ ಮೂಲ ಆಕರಗಳಾಗಿದ್ದರಿಂದ ಬಾಗಳಿಯನ್ನೇ ವ್ಯಾಪ್ತಿಯಾಗಿಸಿಕೊಂಡಿದ್ದರೂ ಬಳ್ಳಾರಿಯಾದ್ಯಾಂತ ಬರುವ ಎಲ್ಲ ಶಾಸನಗಳನ್ನು ಒಂದೆಡೆ ಸಂಗ್ರಹಿಸಿ ಅಧ್ಯಯನ ಮಾಡಿದ್ದಾರೆ. ಈ ಶಾಸನಗಳಲ್ಲಿ ಬಾಗಳಿಯ ಶಾಸನಗಳ ಜೊತೆಗೆ ಇದಕ್ಕೆ ಪೂರಕ ಮಾಹಿತಿಯನ್ನೊದಗಿಸುವ ಇತರೆ ಶಾಸನಗಳನ್ನು ಅಧ್ಯಯನಕ್ಕೆ ಬಳಸಿಕೊಂಡಿದ್ದಾರೆ.

ಜೆ.ಎಂ.ಶಿಲ್ಪ ಅವರು 'ರಾಯಚೂರು ಜಿಲ್ಲಾ ಶಾಸನ ಸಾಹಿತ್ಯದಲ್ಲಿ ಮಹಿಳೆಯರು ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿ ಎಂ.ಫಿಲ್ ಪದವಿ ಪಡೆದಿದ್ದಾರೆ. ಪ್ರಸ್ತುತ ಪ್ರಬಂಧದಲ್ಲಿ ರಾಯಚೂರು ಜಿಲ್ಲಾ ಶಾಸನ ಸಾಹಿತ್ಯದಲ್ಲಿ ಮಹಿಳೆಯರಿಗೆ ಸಂಬಂಧಿಸಿದಂತೆ ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯ ಪಾತ್ರವನ್ನು ತಿಳಿದುಕೊಳ್ಳುವ ಉದ್ದೇಶವನ್ನು ಹೊಂದಿದ್ದು, ಈ ಅಧ್ಯಯನಕ್ಕೆ ಶಾಸನಗಳ ಸಾಹಿತ್ಯಿಕ ಕೃತಿಗಳನ್ನು ಮತ್ತು ಮೌಖಿಕ ಸಾಹಿತ್ಯವನ್ನು ಮೂಲ ಆಕರಗಳಾಗಿ ಬಳಸಿಕೊಂಡಿದ್ದಾರೆ. ಕರ್ನಾಟಕದಲ್ಲಿ ಶಾಸನೋಕ್ತ ಮಹಿಳೆಯರ ಇತಿಹಾಸ ಕದಂಬರ ಕಾಲದಿಂದ ಪ್ರಾರಂಭವಾಗುತ್ತದೆ. ಅಂದಿನಿಂದ ಸಾಮಾನ್ಯವಾಗಿ ಶಾಸನಗಳ ಒಡಲಲ್ಲಿ

ಮೂಡಿನಿಂತವರು ಪ್ರಭುವರ್ಗದ ಮತ್ತು ಉನ್ನತ ವರ್ಗದ ಮಹಿಳೆಯರು ಮಾತ್ರ ಇವರಲ್ಲಿ ಚಕ್ರಾಧಿಪತಿಗಳ ರಾಣಿಯರಿಗಿಂತ ಸಾಮಂತ, ಮಾಂಡಳಿಕ, ದಂಡನಾಯಕ, ವಾಳ್ಗಾವುಂಡ ಮತ್ತು ಗಾವುಂಡ ಮನೆತನದ ಮಹಿಳೆಯರೆ ಹೆಚ್ಚು ಸಂಖ್ಯೆಯಲ್ಲಿ ಕಂಡುಬರುತ್ತಾರೆ. ರಾಯಚೂರು ಜಿಲ್ಲೆಯಲ್ಲಿ ವಿವಿಧ ರಾಜಮನೆತನಗಳು ಆಳ್ವಿಕೆ ನಡೆಸಿದ್ದರೂ ಆಳ್ವಿಕೆ ನಡೆಸಿದವರಲ್ಲಿ ಚಾಲುಕ್ಯ ಅರಸರ ರಾಣಿಯರು ರಾಜ್ಯದ ಸಾಮಾಜಿಕ, ಧಾರ್ಮಿಕ, ರಾಜಕೀಯ ಕ್ಷೇತ್ರಗಳಲ್ಲಿ ಆಸಕ್ತಿ ತೋರುವುದರ ಜೊತೆಗೆ ಸಾಮ್ರಾಜ್ಯದ ವಿವಿಧ ಭಾಗಗಳಲ್ಲಿ ಆಳ್ವಿಕೆ ನಡೆಸುತ್ತಿದ್ದರು ಎಂಬುದನ್ನು ರಾಣಿಯರ ಪ್ರಶಸ್ತಿ ಮತ್ತು ಬಿರುದುಗಳನ್ನು ಶಾಸನಗಳ ಉಲ್ಲೇಖಿತ ಅಧ್ಯಯನಗಳಿಂದ ವಿವರಿಸಿದ್ದಾನೆ. ಹಾಗೂ ಸಾಮಾನ್ಯ ವರ್ಗದ ಮಹಿಳೆಯರಲ್ಲಿ ವೃತ್ತಿಕಾರರಾಗಿ ಅವರು ನಿರ್ವಹಿಸಿದ ಕೆಲಸ ಕಾರ್ಯಗಳು, ಗ್ರಾಮೀಣ ಮಹಿಳೆ ಮತ್ತು ಕೆಳವರ್ಗದ ಮಹಿಳೆಯರ ಸ್ಥಿತಿಗತಿಗಳನ್ನು ಜಾತಿಯಾಧಾರಿತ ವರ್ಗದ ನೆಲೆಯಲ್ಲಿ ವಿವರಿಸಿದ್ದಾರೆ. ಜೊತೆಗೆ ಮಹಿಳೆಯರ ಸ್ಥಿತಿಗತಿಗಳಲ್ಲಿ ಮಹಿಳೆಯರ ಸಾಮಾಜಿಕ ಸೇವೆ, ಶಿಕ್ಷಣ, ಮಹಾಸತಿಯರು, ವೀರಮಣಿಯರು, ವೇಶ್ಯೆಯರು ಈ ಭಾಗದಲ್ಲಿ ವಿವರಿಸಿದ್ದಾರೆ. ಇಂಥ ಸಾಕಷ್ಟು ಅಧ್ಯಯನಗಳು ನಡೆಯಲು ಪ್ರಾರಂಭವಾದವು. ಭಾರತಿ ಬಿ.ಆರ್. ಅವರ ರಾಷ್ಟ್ರಕೂಟರ ಶಾಸನಗಳು : ಸಾಂಸ್ಕೃತಿಕ ಅಧ್ಯಯನ, ಜಯಮ್ಮನವರ ನೊಳಂಬರ ಶಾಸನಗಳು : ಸಾಂಸ್ಕೃತಿಕ ಅಧ್ಯಯನ, ಮುನಿರಾಜು ಅವರ ದೊಡ್ಡಬಳ್ಳಾಪುರ ತಾಲೂಕಿನ ಶಾಸನಗಳು ಮತ್ತು ಸ್ಮಾರಕಗಳು ಒಂದು ಅಧ್ಯಯನ, ಮಹಾನಂದ ಎಂ. ಅವರ ಕಲ್ಯಾಣ ಚಾಲುಕ್ಯರ ಶಾಸನಗಳು, ಆರ್ಥಿಕ ಸಾಮಾಜಿಕ ಸ್ಥಿತಿ : ಒಂದು ಅಧ್ಯಯನ, ವೀರೇಶ ಎನ್. ಅವರ ಶಾಸನ ಮತ್ತು ಕನ್ನಡ ಸಾಹಿತ್ಯ ಕೃತಿಗಳಲ್ಲಿ ಹಂಪಿ ಪರಿಸರದ ವೀರಶೈವ ಧರ್ಮ, ಚವಣರವಿ ಮುಕ್ಕುಂದಿ ಅವರ ಕುಷ್ಟಗಿ ತಾಲೂಕಿನ ಶಾಸನಗಳು ಮತ್ತು ಸ್ಮಾರಕಗಳು, ತಿರುಪತಿ ಜಿ. ಅವರ ಇತಿಹಾಸ ಶಾಸನ ಮತ್ತು ದೇವಾಲಯಗಳನ್ನು ಅನುಲಕ್ಷಿಸಿ, ವೆಂಕಟೇಶ ಬಿ. ಅವರ ಗಂಗಾವತಿ ತಾಲೂಕಿನ ಶಾಸನಗಳು ಸಮಾಜೋಧಾರ್ಮಿಕ ಅಧ್ಯಯನ, ನಿವೇದಿತಾ ಅವರ ಚಿತ್ತಾಪುರ ತಾಲೂಕಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಅಸಂಗಪ್ಪ ಬಿಕೋಸಲ ಅವರ ಮಹಾಕೂಟದ ಶಾಸನಗಳು ಮತ್ತು ದೇವಾಲಯಗಳು, ಗುಂಡಮ್ಮ ಅವರ ಮಾನ್ವಿ ತಾಲೂಕಿನ ಶಾಸನಗಳು : ಸಾಂಸ್ಕೃತಿಕ ಅಧ್ಯಯನ, ಶಶಿಧರ ಡಿ. ಅವರ ಕುರುಗೋಡು ಪರಿಸರದ ಶಾಸನಗಳು ಮತ್ತು ದೇವಾಲಯಗಳು, ಸುರೇಶ ಕರಿಬಸಪ್ಪ ಹಾನಗಲ್ಲ ಅವರ ಹುಬ್ಬಳ್ಳಿ ತಾಲೂಕಿನ ಶಾಸನಗಳು ಮತ್ತು ದೇವಾಲಯಗಳು, ಗೋವಿಂದಪ್ಪ ಜಿ. ಅವರ ಕೂಡ್ಲಿಗಿ ತಾಲೂಕಿನ ಶಾಸನಗಳು ಮತ್ತು ಸ್ಮಾರಕಗಳು, ನಾಯಕರ ಹುಲಗಪ್ಪ ಅವರ ಕನ್ನಡ ಶಾಸನಗಳಲ್ಲಿ ಪುರಾನ ಪರಿಕಲ್ಪನೆ (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ).

ಹನುಮಾಕ್ಷಿ ಗೋಗಿಯವರ 'ಕಲಬುರ್ಗಿ ಜಿಲ್ಲೆಯ ಶಾಸನಗಳು' ಮಹಾಪ್ರಬಂಧವನ್ನು ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿ ಪಿಎಚ್.ಡಿ. ಪದವಿ ಪಡೆದಿದ್ದಾರೆ. ಈ ಕೃತಿಯಲ್ಲಿ

ಕಲಬುರ್ಗಿ ಜಿಲ್ಲೆಯ ಶಾಸನಗಳನ್ನು ಸಂಪಾದಿಸಿ ಅವುಗಳನ್ನು ಪ್ರಕಟಿಸಿದ್ದಾರೆ. ಲಕ್ಕುಂಡಿಯ ಶಾಸನಗಳು ಕೃತಿಯಲ್ಲಿ ಲಕ್ಕುಂಡಿಯ ಶಾಸನಗಳು ಮತ್ತು ಸ್ಮಾರಕಗಳನ್ನು ಅಧ್ಯಯನ ನಡೆಸಿ ಅವುಗಳನ್ನು ರಾಜಕೀಯ ಆಡಳಿತ, ಸಾಮಾಜಿಕ, ಆರ್ಥಿಕ, ಧಾರ್ಮಿಕ ವ್ಯವಸ್ಥೆಗಳನ್ನು ವರ್ಗೀಕರಿಸಿ ವಿವರಣೆ ನೀಡಿದ್ದಾರೆ. ಅನುಶಾಸನ ಕೃತಿಯಲ್ಲಿ ಹಲವಾರು ಶಾಸನಗಳನ್ನು ಸಂಪಾದಿಸಿ ವಿವರವಾದ ವಿವರಣೆ ನೀಡಿದ್ದಾರೆ. ಹಾಗೆಯೇ ಹುಬ್ಬಳ್ಳಿ ತಾಲೂಕಿನ ಶಾಸನಗಳು ಕೃತಿಯಲ್ಲಿ ಹುಬ್ಬಳ್ಳಿ ತಾಲೂಕಿನಲ್ಲಿ ಬರುವ ಶಾಸನಗಳನ್ನು ಪ್ರಕಟಿತ ಮತ್ತು ಅಪ್ರಕಟಿತ ಶಾಸನಗಳ ಪಠ್ಯವನ್ನು ನೀಡಿದ್ದಾರೆ. ಮುದನೂರು ಮತ್ತು ಯಡ್ರಾಮಿ ಶಾಸನಗಳು ಡಾ. ಬಿ.ಆರ್. ಹಿರೇಮಠ ಮತ್ತು ಹನುಮಾಕ್ಷಿ ಗೋಗಿಯವರು ಸಂಪಾದಿಸಿದ್ದಾರೆ. ಇದರಲ್ಲಿ ಮುದನೂರು ಮತ್ತು ಯಡ್ರಾಮಿ ಶಾಸನಗಳನ್ನು ಸಂಪಾದಿಸಿ ಅವುಗಳ ಪಠ್ಯ ಮತ್ತು ವಿವರಣೆಯನ್ನು ಕೊಟ್ಟಿದ್ದಾರೆ.

ಡಂಬಳ : ಸಾಂಸ್ಕೃತಿಕ ಅಧ್ಯಯನ ಹನುಮಾಕ್ಷಿ ಗೋಗಿ ಮತ್ತು ಪಿ.ಕೆ.ರಾಠೋಡ ಅವರು ಸಂಪಾದಿಸಿದ್ದಾರೆ. ಈ ಕೃತಿಯಲ್ಲಿ ಡಂಬಳ ಗ್ರಾಮದಲ್ಲಿ ಬರುವ ಶಾಸನಗಳು ಮತ್ತು ಸ್ಮಾರಕಗಳನ್ನು ಅಧ್ಯಯನ ನಡೆಸಿದ್ದಾರೆ. ಅದರ ಜೊತೆಗೆ ಡಂಬಳ ಗ್ರಾಮದ ರಾಜಕೀಯ ವ್ಯವಸ್ಥೆ, ಸಾಮಾಜಿಕ, ಆರ್ಥಿಕ, ಧಾರ್ಮಿಕ ವ್ಯವಸ್ಥೆ, ಪ್ರಾಚೀನ ದೇವಾಲಯಗಳು, ಮೂರ್ತಿಶಿಲ್ಪಗಳು, ಇಂದಿನ ಡಂಬಳ, ಸ್ವಾತಂತ್ರ್ಯ ಹೋರಾಟಗಾರರು, ಆಧುನಿಕ ದೇವಾಲಯಗಳು, ಮೊದಲಾದ ವಿಷಯಗಳ ಬಗ್ಗೆ ಅಧ್ಯಯನ ನಡೆಸಿದ್ದಾರೆ. ಡಾ. ಆರ್.ಎಸ್. ಗುರುವ ಅವರ ಶಾಸನ ಸಂಶೊಧನ ಪ್ರಬಂಧಗಳು, ಡಾ. ಎಂ.ಎಂ.ಕಲಬುರ್ಗಿಯವರ ಧಾರವಾಡ ತಾಲೂಕಿನ ಶಾಸನಗಳು. ಇಂಥ ಒಂದು ಅಧ್ಯಯನವನ್ನು ಹೊರತುಪಡಿಸಿದರೆ ಪ್ರಸ್ತುತ ಶಾಸನಗಳಲ್ಲಿ ಪೌರಾಣಿಕ ಅಂಶಗಳನ್ನು ಹುಡುಕುವಂತಹ ಅಧ್ಯಯನಗಳು ನಡೆದಿಲ್ಲ. ಆದ್ದರಿಂದ ಪ್ರಸ್ತುತ ಅಧ್ಯಯನವನ್ನು 'ಉತ್ತರ ಕರ್ನಾಟಕದ ಕನ್ನಡ ಶಾಸನಗಳಲ್ಲಿ ಪುರಾಣ ಪರಿಕಲ್ಪನೆ' ಎಂಬ ಶೀರ್ಷಿಕೆ ಅಡಿಯಲ್ಲಿ ಶಾಸನಗಳಲ್ಲಿನ ಪೌರಾಣಿಕ ಅಂಶಗಳನ್ನು ಹೆಚ್ಚಿನ ಅಧ್ಯಯನಕ್ಕೊಳಪಡಿಸಲಾಗುವುದು.

# ಅಧ್ಯಾಯ ಮೂರು

# ಪುರಾಣ ನಿರ್ವಚನೆ

ಪುರಾಣ ಎಂಬ ಪದವನ್ನು ನಾವು ಇಂದು ಇಂಗ್ಲೀಷ್‌ನ Myth ಎಂಬ ಪದಕ್ಕೆ ಸಂವಾದಿಯಾಗಿ ಬಳಸುತ್ತಿದ್ದೇವೆ. ಇದು ಗ್ರೀಕ್‌ನ mothos ('word' of 'speech'ಎಂಬುದರಿಂದ ಬಂದುದಾಗಿದೆ. "Muthos in its meaning of 'myth' is the word for a story concerning gods and super human beings. A myth is an expenession of the saced in words it reports realities and events from the origin of the world that remain valid for the basis and puspose of all there is consequently, a myth functions as a model for human activity. Society, wisdom and knowledge. The word mythology is rised for the entire body of myths found in a given tredition. It is also insed as a term for the study of myths"[೧]

ಜನಸಾಮಾನ್ಯರು, ಬಹಳ ಹಳೆಯದು ಕಟ್ಟುಕಥೆ ಅತಿಲಂಬಿತವಾದುದು. ಸುಳ್ಳಿನ ಕಂತೆ, ಬೇಸರ ತರಿಸುವಂಥದು ಎಂಬ ರೀತಿಯಲ್ಲೂ ಪುರಾಣ ಶಬ್ದವನ್ನು ಬಳಸುವುದುಂಟು. ಕಾಳಿದಾಸ ಕವಿಯು ತನ್ನ 'ಮಾಳವಿಕಾಗ್ನಿಮಿತ್ರ' ನಾಟಕದಲ್ಲಿ "ಪುರಾಣ ಮಿತ್ಯೇವ ನಸಾಧು ಸರ್ವಂ ನಚಾಪಿ ಕಾವ್ಯಂ ನವಮಿತ್ಯವದ್ಯಂ" ಎನ್ನುವಾಗ ಪ್ರಾಚೀನವಾದುದು ಮತ್ತು ವಿನೂತನವಾದುದು ಎಂಬ ಅರ್ಥಗಳನ್ನೆ ಉದ್ದೇಶಿಸಿದ್ದನೆಂಬುದು ಸ್ಪಷ್ಟ. ದೇವತೆಗಳು ಮತ್ತು ರಾಕ್ಷಸರನ್ನು ಕುರಿತ ಕತೆಗಳು ಎಂಬ ಅರ್ಥದಲ್ಲಿ ಮಹಾಭಾರತವು ಪುರಾಣವನ್ನು ಬಳಸಿದೆ. ಸಂಸ್ಕೃತ ವಿದ್ವಾಂಸರಾದ ರಾಘವಚಾರ್ಯರು ಪುರಾಣವನ್ನು ಪುರಾಣ+ನವ ಎಂದು ಬಿಡಿಸಿ ಪ್ರಾಚೀನವಾದರೂ ಸದಾ ನೂತನವಾದುದು ಎಂದು ಅರ್ಥೈಸಿದ್ದಾರೆ.

"ಸಂಸ್ಕೃತದಲ್ಲಿ ಪುರಾಣಗಳನ್ನು 'ಸ್ಮೃತಿ' ಎಂದು ಕರೆಯುತ್ತಾರೆ. ಗ್ರೀಕರು ಮಿಥ್ ಅನ್ನುತ್ತಾರೆ. ಮಿಥೋಸ್ ಅಂದರೆ ಪದ, ಮಾತು ಎಂದು ಅರ್ಥ. ಆಡಿ ಮುಗಿಸಿದ ಮಾತನ್ನು ಮಾತ್ರ ವಿಶ್ಲೇಷಿಸಬಹುದು. ಸ್ಮೃತಿ ಎಂದರೆ ನೆನಪು ಸಂಗತಿಯೊಂದು ಸಂಭವಿಸಿ ನೆನಪಿಗೆ ತಂದ ಮೇಲೆ ಮಾತ್ರ ಅದರ ಗೊತ್ತು ಗುರಿಗಳನ್ನು ವಿವೇಚಿಸಬಹುದು. ನೆನಪು ಇರುವಷ್ಟು ಕಾಲ ವರ್ತಮಾನವನ್ನು ನಿಯಂತ್ರಿಸುತ್ತದೆ. ನೆನಪಿನ ಹಂಗು ಹರಿದ ಮೇಲೆ ಅದು ನಿರ್ಲಿಪ್ತವೋ ಪಾಂಡಿತ್ಯಪೂರ್ಣವೋ ಆದ ಅಧ್ಯಯನದ ವಸ್ತುವಾಗುತ್ತದೆ."[೨]

ಎಲ್ಲ ಸಮಾಜಗಳಲ್ಲಿ ಪುರಾಣಗಳಿವೆ. ಪುರಾಣಗಳು ಮನುಷ್ಯ ಸಂಸ್ಕೃತಿಯ ಮುಖ್ಯ ಅಂಶ ಎಂದು ಬೇಕಾದರೂ ಹೇಳಬಹುದು. ಆದರೆ ಪುರಾಣಗಳ ಸಂಖ್ಯೆ ಮತ್ತು ವೈವಿಧ್ಯತೆ ಎಷ್ಟಿದೆಯೆಂದರೆ ಎಲ್ಲ ಪುರಾಣಗಳಿಗೂ ಸರಿಹೊಂದುವಂತೆ ಸಾಮಾನ್ಯ ಲಕ್ಷಣಗಳನ್ನು ಹೇಳುವುದೇ ಕಷ್ಟ. ಯಾವುದೇ ಒಂದು ಜನಾಂಗದ ಪುರಾಣಗಳು ಆಯಾ ಜನಾಂಗ ತನ್ನ ಬಗ್ಗೆ ತಾನು ಇಟ್ಟುಕೊಂಡಿರುವ ಕಲ್ಪನೆಗಳನ್ನು ವ್ಯಕ್ತಪಡಿಸುತ್ತವೆ. ತಾವು ಯಾರು ಯಾಕೆ ಹೀಗಿದ್ದೇವೆ ಎಂಬುದನ್ನು ಆ ಜನ ಕಂಡುಕೊಳ್ಳಲು ಮಾಡಿದ ಪ್ರಯತ್ನಗಳನ್ನು ತೋರಿಸುತ್ತವೆ. ಆದ್ದರಿಂದಲೇ ಯಾವುದೇ ಒಂದು ಸಮಾಜವನ್ನು ಅಧ್ಯಯನ ಮಾಡುವುದಕ್ಕೆ ಅಥವಾ ಮಾನವ ಸಂಸ್ಕೃತಿಯನ್ನು ಅರಿಯುವುದಕ್ಕೆ ಪುರಾಣಗಳನ್ನು ತಿಳಿಯುವುದು ಮುಖ್ಯವಾಗುತ್ತದೆ.

ಪುರಾಣ ಎಂಬುದು ಪುರಾ+ಅನ=ಃಪುರಾತನ ಎಂಬುದರ ಸಾಧಿತ ರೂಪ. ಇಲ್ಲಿ ಪುರಾಣ ಎಂದರೆ ಹಳೆಯದು. ಪ್ರಾಯಶಃ ಅದು ಎಂದೂ ಯಾರು ಕಂಡು ಕೇಳಿ ಅರಿಯದುದು ಎಂದು ಹೇಳಿರುವ ಎ.ಆರ್. ಕೃಷ್ಣಶಾಸ್ತ್ರಿಯವರು (ವಚನ ಭಾರತ, ಪು. ೩೦) ಹಿಂದಿನಿಂದ ಕೇಳಿ ಬಂದುದನ್ನು 'ಪುರಾಣ' ಎಂದು ಕರೆಯಲಾಗುತ್ತಿದೆ ಎಂದಿದ್ದಾರೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಪುರಾಣದ ಬಗ್ಗೆ ಹೇಳಿರುವ ವ್ಯಾಖ್ಯಾನದಲ್ಲಿಯೂ ಅದು ಮನುಷ್ಯನ ಬದುಕನ್ನು ಕಂಡರಿಸುವುದಾಗಿದೆ ಎಂಬ ವಿವರಣೆ ಇದೆ.

ಪುರಾಣಂ ಇತಿವೃತ್ತಂ ಆಖ್ಯಾಯೆಕೋದಾಹರಣಂ।

ಧರ್ಮಶಾಸ್ತ್ರಂ ಅರ್ಥಶಾಸ್ತ್ರಂ ಚೇತಿತಿಹಾಸ।

ಅಂದರೆ ಪುರಾಣದಲ್ಲಿ ಧರ್ಮಶಾಸ್ತ್ರ, ಅರ್ಥಶಾಸ್ತ್ರ, ಇತಿಹಾಸ ಎಲ್ಲವೂ ಅಖ್ಯಾಯಿಕೆಗಳಿಗೆ ಉದಾಹರಣೆಯಾಗಿವೆ. ಈ ಉಲ್ಲೇಖದ ಹಿನ್ನೆಲೆಯಿಂದ ಸ್ಪಷ್ಟವಾಗುವ ಒಂದು ಸಂಗತಿಯೆಂದರೆ ಪುರಾಣ ಮತ್ತು ಇತಿಹಾಸಗಳಿಂದಲೇ ಮಹಾಕಾವ್ಯಗಳಿಗೆ ವಸ್ತುವನ್ನು ಆರಿಸಿಕೊಳ್ಳಬೇಕು ಎಂಬುದು ಭಾರತೀಯ ಲಾಕ್ಷಣಿಕರ ಅಭಿಪ್ರಾಯ. ಬಹುಶಃ ಆ ಹೊತ್ತಿಗೆ ನಮ್ಮ ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತಗಳು ಪುರಾಣ ಮತ್ತು ಇತಿಹಾಸವೆಂದು ಪ್ರಕೀರ್ತಿತವಾಗಿದ್ದವು.

ಅಲ್ಲದೆ ಆಗ ಪುರಾಣ ಮತ್ತು ಇತಿಹಾಸಗಳನ್ನು ಒಂದು ದೃಷ್ಟಿಯಿಂದ ಸಮನಾರ್ಥಗಳಾಗಿಯೇ ಭಾವಿಸಿದ್ದಂತೆಯೂ ಕಾಣುತ್ತದೆ. ಇಲ್ಲಿ ಗಮನಿಸಬಹುದಾದ ಮತ್ತೊಂದು ಅಂಶವೆಂದರೆ ಭಾರತೀಯರ ದೃಷ್ಟಿಯಲ್ಲಿ ಮಹಾಕಾವ್ಯ ಎಂಬುದು ಮಹಾಪುರುಷರ ಚರಿತ್ರೆ, "ಉಪದೇಶಾತ್ಮಕವಾಗಿರದೆ ಮಹಾಪುರುಷನ ಚರಿತ್ರೆಯಾಗಿರುವ ಗ್ರಂಥ ಕಾವ್ಯ ಎನಿಸುತ್ತದೆ. ಅಂಥ ಕಾವ್ಯದಲ್ಲಿ ನಾಯಕ ಮತ್ತು ಪ್ರತಿನಾಯಕನು ವರ್ಣಿತರಾಗಿರುತ್ತಾರೆ.

ಕೆ.ಎಸ್. ರಾಮಸ್ವಾಮಿಯವರು ಪುರಾಣಗಳ ಒಟ್ಟು ಸ್ವರೂಪವನ್ನು ಕುರಿತಂತೆ ಹೇಳಿರುವ ಮಾತುಗಳಿಂತಿವೆ. "ಪುರಾಣಗಳು ಹಿಂದೂಶಾಸ್ತ್ರಗಳ ಅತಿಮುಖ್ಯವಾದ ಭಾಗವಾಗಿವೆ. ಅವು ವೇದದಲ್ಲಿ ಪ್ರಣೀತವಾದ ಆಧ್ಯಾತ್ಮಿಕ ಸತ್ಯಗಳ ಮೂರ್ತ ಚಿತ್ರಣಗಳು ಅವು ವೈದಿಕ ಭಾವನೆಗಳನ್ನು ಹೆಚ್ಚು ವಿಸ್ತಾರವಾಗಿಯೂ ಪುಷ್ಟಿದಾಯಕವಾಗಿಯೂ ಪ್ರತಿಪಾದಿಸುವುವು. ಹೊರಗಿನವರು ಇಂದು ಪ್ರಚಲಿತವಿರುವ ಕಟ್ಟುಕತೆಯಂತೆ, ಕಾಲ್ಪನಿಕ ಕತೆಯೆಂದು ಕರೆಯಬಹುದು. ಕೆಲವು ಭಾರತೀಯರು ಕೂಡ, ದ್ರಾಷ್ಟಾಂತಿಕ ಕಟ್ಟುಕತೆಗಳೆಂದು ಅಥವಾ ರೂಪಕ ಕಥೆಗಳೆಂದೋ ಅಥವಾ ಬಾಹ್ಯ ಜಗತ್ತಿಗೆ ಸಂಬಂಧಿಸಿದ ಯಾವುದೋ ಯೌಗಿಕ ಸತ್ಯಗಳೆಂದೋ ಅವನ್ನು ಪರಿಗಣಿಸಬಹುದು. ಆದರೆ ಸಾಂಪ್ರದಾಯಿಕ ಹಿಂದೂಗಳು ಪುರಾಣಗಳಿಗೆ ಮುಖ್ಯವಾಗಿ ಎರಡು ಲಕ್ಷಣಗಳನ್ನು ಆರೋಪಿಸುತ್ತಾರೆ. ದ್ರಾಷ್ಟಾಂತಿಕ ಮೌಲ್ಯ ಮತ್ತು ಪರಿಣಾಮಕಾರಕ ವಾಸ್ತವಿಕತೆ, ನಮ್ಮ ದೇಶದ ಸಾರ್ವತ್ರಿಕ ಜೀವನ, ನಂಬಿಕೆ ಮತ್ತು ನಡತೆ ಇವುಗಳನ್ನು ರೂಪಿಸುವಲ್ಲಿ ಅವುಗಳ ಪಾತ್ರವು ಪ್ರಧಾನವಾದುದು. ಸಾವಿರಾರು ವರ್ಷಗಳಿಂದ ಅವುಗಳ ಪ್ರಭಾವ ನಮ್ಮ ಜನಾಂಗದ ಮೇಲೆ ನಿಂತಿದೆ. ಹಾಗೂ ವೈದಿಕ ಸತ್ಯಗಳನ್ನು ಅರ್ಥಮಾಡಿಕೊಳ್ಳಲು ನಾವು ಅವುಗಳ ಪೂರ್ಣ ಉಪಯುಕ್ತತೆಯನ್ನು ಪಡೆದುಕೊಳ್ಳಬೇಕು. ಇದರಲ್ಲಿಯೇ ಅವುಗಳ ಶಾಶ್ವತ ಮತ್ತು ಶ್ರೇಷ್ಠ ಮೌಲ್ಯವು ಅಡಗಿದೆ.

ಪುರಾಣಗಳು ಉಪನಿಷತ್ತಿನ ಸೂಕ್ಷ್ಮ ಭಾವನೆಗಳನ್ನು ಋಷಿಮುನಿಗಳ ಮತ್ತು ರಾಜರುಗಳ ಕಥೆಗಳ ಮೂಲಕ ಜನಸಾಮಾನ್ಯರಿಗೆ ಅರ್ಥವಾಗುವ ರೀತಿಯಲ್ಲಿ ಚಿತ್ರಿಸುವುವು. ಇವುಗಳಲ್ಲಿ ಕೆಲವು ಕಥೆಗಳು ಎಲ್ಲಾ ಪುರಾಣಗಳಿಗೂ ಸಾಮಾನ್ಯವಾಗಿದೆ. ಆದರೂ ವಿವರಣೆಯಲ್ಲಿ ಮತ್ತು ಅವುಗಳು ನಿರೂಪಿಸಿರುವ ವಿಧಾನದಲ್ಲಿ ಅವುಗಳಲ್ಲಿ ತುಂಬಾ ಪ್ರಭೇದವಿದೆ. ಪುರಾಣಗಳಲ್ಲಿ ಕಂಡುಬರುವ ಅತಿಮುಖ್ಯ ಅಂಶವೆಂದರೆ ಅವು ಜ್ಞಾನ ಮತ್ತು ಭಕ್ತಿ ಇವುಗಳನ್ನು ಸಾಮರಸ್ಯಗಳಿಸಿವೆ.

ಸಂಕ್ಷಿಪ್ತ ಕನ್ನಡ ನಿಘಂಟುವಿನಲ್ಲಿ ಪುರಾಣ ಎಂದರೆ ಹಳೆಯದು. ಪುರಾತನವಾದುದು, ಪೂರ್ವಕಾಲದಲ್ಲಿ ನಡೆದು ಹೋದ ಕಥೆ, ಪ್ರಾಚೀನವಾದ ಚರಿತ್ರೆಯನ್ನು ಹೊಂದಿದ ಸಾಹಿತ್ಯ, ಹಳೆಯ ಕಥೆ, ಪೂರ್ವಕಥೆ, ಅನವಶ್ಯಕವಾದ ವಿವರಣೆ, ಹರಟೆ, ರಗಳೆ, ಹಳೆಯ ಪ್ರಾಚೀನವಾದ, ದೀರ್ಘವಾದ ಎಂಬ ಅರ್ಥವನ್ನು ಕೊಡಲಾಗಿದೆ. ರಾಜಪ್ಪ ದಳವಾಯಿಯವರ ಕನ್ನಡ ಸಾಹಿತ್ಯ

ಕೋಶದಲ್ಲಿ ಪುರಾಣವನ್ನು ಹಳೆಯ ಅಥವಾ ಪ್ರಾಚೀನ ಸಾಹಿತ್ಯ ಎಂದರ್ಥ. ಪ್ರಾಚೀನ ಮತ್ತು ಮಧ್ಯಕಾಲೀನ ಭಾರತದ ಆದ್ಯಾತ್ಮ ಖಗೋಳಶಾಸ್ತ್ರ, ರಾಜರು ಮತ್ತು ಋಷಿಗಳ ದಾಖಲೆಗಳು ಮತ್ತು ಇತರ ಅಂಶಗಳನ್ನು ಒಳಗೊಂಡಿರುವ ಒಂದು ಗ್ರಂಥ ಎಂದಿದ್ದಾರೆ.

ಹರೆಸ್ಕೋವಿಟ್ಸ್ ಎನ್ನುವ ವಿದ್ವಾಂಸ ತನ್ನ 'Culturl Anthropology' ಕೃತಿಯಲ್ಲಿ ನಂಬಿಕೆಗೆ ಬರೆದ ಶಾಸನವನ್ನೇ ಪುರಾಣ ಎನ್ನುತ್ತಾರೆ. ಒಂದು ಕಾಲಘಟ್ಟದಲ್ಲಿ ಯಾವುದೇ ಒಂದು ಸಮಾಜದಿಂದ ಅಥವಾ ಸಮುದಾಯದಿಂದ ಮನ್ನಣೆ ಪಡೆದ ನಂಬಿಕೆಯೊಂದು ಸಾರ್ವಕಾಲಿಕ ಸತ್ಯ ಎನ್ನುವ ರೂಪ ಪಡೆಯುತ್ತದೆ. ಅಂತಹ ನಂಬಿಕೆಗಳಿಗೆ ಪುರಾಣವು ಶಾಸನಬದ್ಧವಾದ ಧಾರ್ಮಿಕ ಮುದ್ರೆಯನ್ನೊತ್ತುತ್ತದೆ. ಎ.ಎಚ್. ಕ್ರಾಪೆಯವರು "ಪುರಾಣವು ಒಂದು ಕಥೆ, ಕವಿಗಳಿಂದ ಹೊಸ ರೂಪ ಪಡೆದದ್ದು, ಸಿದ್ಧಾಂತಗಳೊಡನೆ ಬೆರೆಯದೆ ಮತದೊಡನೆ ಶಿಥಿಲ ಸಂಬಂಧ ಹೊಂದಿದೆ" ಎಂದು ಹೇಳಿದ್ದಾರೆ. ಪುರಾಣವು ಮತೀಯ ಗುಣವುಳ್ಳದ್ದು. ಅಂದರೆ ಮನುಷ್ಯನ ಮೂಲ ಸತ್ವಕ್ಕೆ ಸಂಬಂಧಿಸಿದುದು. ಮಾನವನ ನಂಬಿಕೆ, ಶ್ರದ್ಧೆ, ನಡತೆ, ಮೌಲ್ಯ, ಆದರ್ಶಗಳನ್ನು ಕುರಿತು ನಿರ್ದೇಶಿಸಿ ಅವನ ಆತ್ಮವನ್ನು ಎಚ್ಚರಿಸುವ ಗುಣವನ್ನು ಹೊಂದಿದೆ.

ಪುರಾಣ ಎಂಬ ಶಬ್ದವನ್ನು ಸಾಂಪ್ರದಾಯಿಕವಾದ ಪುರಾತನ ಕಥೆಗಳು ಎನ್ನುವ ಅರ್ಥದಲ್ಲಿ ಬಳಸುವುದು ರೂಢಿಯಾಗಿದೆ. ಪ್ರಪ್ರಾಚೀನವಾದ ನಂಬಿಕೆಗಳು, ಆದಿಮ ಜನರ ನಡವಳಿಕೆಗಳು, ಅತಿಮಾನುಷ, ಅಮಾನುಷ ಸಂಗತಿಗಳ ಬಗೆಗೆ ಬಹು ಹಿಂದಿನ ಕಲ್ಪನೆಗಳು, ಪ್ರಕೃತಿಯ ಗೋಚರ ಮತ್ತು ಅಗೋಚರ ಶಕ್ತಿಗಳ ಬಗೆಗೆ ಜನಜನಿತ ಅಭಿಪ್ರಾಯಗಳು ಇವೆಲ್ಲವನ್ನು ತಿಳಿದುಕೊಳ್ಳುವುದಕ್ಕೆ ಪುರಾಣಗಳು ಪ್ರಮುಖ ಸಾಧನಗಳಾಗಿವೆ.

ಪುರಾಣದ ಹುಟ್ಟು: ಪುರಾಣದ ಹುಟ್ಟನ್ನು ಕುರಿತು ಅನೇಕ ಸಿದ್ಧಾಂತಗಳಿರುತ್ತವೆ. ಇವು ತಮಗೆ ತಾವೇ ಸಿದ್ಧಾಂತಗಳು. ಪುರಾಣದ ಹುಟ್ಟು ಮಾನವನ ಹುಟ್ಟಿನ ಮೂಲದಷ್ಟೇ ನಿಗೂಢವಾಗಿದೆ. ಪುರಾಣದ ಬೆಳವಣಿಗೆ ಸ್ವರೂಪದ ಬಗ್ಗೆ ಕೆಲವು ಸಂಗತಿಗಳನ್ನು ಹೇಳಿದರೆ, ಅವು ಭಾಗಿಯಾಗಿಯಾದರೂ ಸರಿಹೊಂದುತ್ತವೆ. ಹುಟ್ಟನ್ನು ಕುರಿತ ತಿಳುವಳಿಕೆಯೂ ನಮ್ಮ ನಮ್ಮ ತಿಳುವಳಿಕೆಯ ಮಟ್ಟದಲ್ಲಿಯೇ ನಿಂತುಬಿಡುತ್ತದೆ.

**ವಿದ್ವಾಂಸರು ಹೇಳುವಂತೆ ಪುರಾಣದ ಹುಟ್ಟಿಗೆ ಇರುವ ಕಾರಣಗಳು**

ಪ್ರೊ. ಭದ್ರಾಪುರ ಅವರು ಹೇಳುವಂತೆ ಆದಿಮಾನವ ಸೂರ್ಯ, ಚಂದ್ರ ಮತ್ತು ಇತರ ಆಕಾಶಕಾಯಗಳಿಗೆ ವ್ಯಕ್ತಿತ್ವ ಆರೋಪ ಮಾಡುವ ಮೂಲಕ ಅವುಗಳನ್ನು ಕಂಡದ್ದೆ ಪುರಾಣದ ಹುಟ್ಟಿಗೆ ಕಾರಣವಾಯಿತು. ಅವುಗಳ ಅಲಂಕಾರಿಕ ವರ್ಣನೆ ಪುರಾಣವನ್ನು ಬೆಳೆಸಿತು. ಈ ವಾದವನ್ನು ಮುಂದಿಟ್ಟವರು ಸೂರ್ಯ, ಪುರಾಣ, ಚಂದ್ರಪುರಾಣ ಮತ್ತು ನಕ್ಷತ್ರ ಪುರಾಣಗಳ ಬಗ್ಗೆ

ವಾದ ಮಾಡಿದವರೇ ಇದರಲ್ಲಿ ಪ್ರಮುಖರೆಂದರೆ ತಾನೇ ಒಂದು ದೊಡ್ಡ ಪುರಾಣವೆಂದು ಕರೆಸಿಕೊಂಡ ಮಹಾವಿದ್ವಾಂಸ ಮಾರ್ಕ್ಸ್‌ಮುಲ್ಲರ್.

೧. ಭೌತಿಕವಾದ: ವಸ್ತುಪ್ರಜ್ಞೆಯ ಮೇಲೆ ಮತ್ತು ಅವುಗಳಿಗೆ ಸಂಬಂಧಿಸಿದ ಘಟನೆಗಳನ್ನು ಕಂಡು ಸೃಷ್ಟಿಸಿದ ಕಥೆಗಳು ಪುರಾಣಗಳು ಎಂಬುದು ಇದರ ವಾದ.

೨. ಆಚರಣೆ ಪರವಾದ: ಜಗತ್ತಿನಲ್ಲಿ ಕಂಡುಬರುವ ಆಚರಣೆಗಳಿಗೂ ಪುರಾಣಗಳಲ್ಲಿ ಕಂಡುಬರುವ ಆಚರಣೆಗೂ ಸಾಮ್ಯತೆ ಇದೆ. ಕಾರಣ ಇಂತಹ ಆಚರಣೆಗಳೇ ಬೆಳೆದು ಪುರಾಣಗೊಂಡವು ಎಂಬುದು ಈ ವಾದಿಗಳ ಅಭಿಪ್ರಾಯ. 'ಲಾರ್ಡ್ಸ್‌ರ್ಯಾಗ್ಲಾನ್' ನಂತಹ ಅನೇಕರು ಈ ವಾದದ ಜೊತೆಗಿದ್ದಾರೆ.

ಯುಹೇಮರಸ್: ಈತನು ಒಬ್ಬ ತತ್ವಜ್ಞಾನಿ ಕ್ರಿ.ಪೂ. ೪ನೇ ಶತಮಾನಕ್ಕೆ ಸೇರಿದವನು. ಪುರಾಣಗಳೆಲ್ಲ ಪೂರ್ವಚರಿತ್ರೆಗೆ ಸಂಬಂಧಿಸಿದವು ಎಂದು ಈತ ವಾದಿಸಿದ. ಗ್ರೀಕ್ ಪುರಾಣದಿಂದ ಈತ ತನ್ನದೇ ಆದ ಉದಾಹರಣೆ ಒದಗಿಸಿದನು.

ಕಲಾತ್ಮಕ: ವಿವಿಧ ಕಲಾತ್ಮಕ ಮಾದರಿಗಳಿಗಾಗಿ ಪುರಾಣಗಳು ಹುಟ್ಟಿಕೊಂಡವು. ಪುರಾಣವನ್ನು ವೀಕ್ಷಿಸಿದರೆ ಅನೇಕ ವರ್ಣನಾತ್ಮಕ, ಚಿತ್ರಾತ್ಮಕ ಮತ್ತು ಅಭಿವ್ಯಕ್ತಾತ್ಮಕ ಅಂಶಗಳು ಕಾಣುತ್ತವೆ.

ನಿತ್ಯಾತ್ಮಕ: ಏನು ಇಲ್ಲದ ಸ್ಥಿತಿ ಮತ್ತು ಸಮಾಜ ಪುರಾಣವನ್ನು ಪಡೆದ ರೀತಿಯ ಮಧ್ಯೆ ವ್ಯಕ್ತಿ ಸಮಾಜಕ್ಕೆ ತನ್ನನ್ನು ಸಮರ್ಥಿಸಿಕೊಳ್ಳುವ ರೀತಿ ಮತ್ತು ಆ ಮೂಲಕ ನಿತ್ಯಾತ್ಮಕ ಹುಟ್ಟು ಎಂಬುದು ಇಲ್ಲಿಯ ವಾದ ಸರಣಿ.

ದೈವಸಂಬಂಧಿ ಅಥವಾ ಸಾಂಕೇತಿಕ: ಪುರಾಣಗಳ ಪ್ರಾಧಾನ್ಯವೆಂದರೆ ಅದರಲ್ಲಿ ದೈವಗಳು ಇರುವುದು. ಸಾಂಸ್ಕೃತಿಕ ವ್ಯಕ್ತಿ, ಆಶಯ ಅಥವಾ ದೈವದ ಪ್ರಾಮುಖ್ಯ ಇಲ್ಲದಿದ್ದರೆ ಅದು ಪುರಾಣವೆನಿಸಿಕೊಳ್ಳಲಾರದು ಎಂಬ ವಾದವೇ ಇದೆ. ಹಾಗೆ ಪುರಾಣಗಳು ದೈವ ಸಂಬಂಧಿಗಳಾಗಿ ಮೂಡಿ ಬಂದ ಸಾಂಕೇತಿಕ ವಿವರಣೆಗಳು ಎಂಬುದು ಇಲ್ಲಿಯ ತಿರುಳು. ವ್ಯಾಸ–ಕುಮಾರವ್ಯಾಸ ಹೀಗೆ ಒಬ್ಬರಿಂದ ಒಬ್ಬರಿಗೆ ಪುರಾಣ–ಪೌರಾಣಿಕ ಪಾತ್ರಗಳು ಬೆಳೆದಂತೆ ಪುರಾಣ ಹುಟ್ಟಿ ಬಂದಿತೆಂದು ತಿಳಿಯಲಾಗಿದೆ.

ಹುಟ್ಟನ್ನು ಕುರಿತ ಈ ವಾದಗಳು ಕೊನೆಗೆ ಪುರಾಣದ ಹುಟ್ಟಿನ ಮೂಲ ಕೂಡ ಅಸ್ಪಷ್ಟ ಎಂಬುದನ್ನು ಸೂಚಿಸುತ್ತವೆ. ಆದರೆ ಪುರಾಣಗಳು ಪುರಾತನ ಮಾನವನು ಸಾಂಸ್ಕೃತಿಕ ಮಾನವನಾಗಲು ಬಯಸಿದ ಅಪೇಕ್ಷೆಗಳ ಸ್ಪಂದನಗಳು ಎಂದು ಭಾವಿಸಬಹುದು.

## ಪುರಾಣದ ವರ್ಗೀಕರಣ

ಪುರಾಣಗಳ ವರ್ಗೀಕರಣವನ್ನು ಮಾಡುವುದು ಕಷ್ಟದ ಕೆಲಸ. ಸಾಮಾನ್ಯ ಸ್ವಭಾವದ ಪುರಾಣಗಳು ದೊರೆಯುತ್ತಿದ್ದರೂ ಅವುಗಳ ಹುಟ್ಟಿನ ಮೂಲ ಬೇರೆಯೇ ಆಗಿರುತ್ತದೆ. ಕೇವಲ ಸಂಖ್ಯೆಯ ದೃಷ್ಟಿಯಿಂದ ಅಧಿಕವಾಗಿ ಕಾಣುವ ಗುಣಗಳ ಮೇಲಿಂದ ಸಮಾನತೆಯನ್ನು ಗುರುತಿಸುವುದು, ಸರಿಯಾಗುವುದಿಲ್ಲ. ಒಂಟಿಯಾಗಿ ಅಚಲವಾಗಿ ನಿಲ್ಲುವ ಗುಣಗಳು ಪುರಾಣದ ಮೂಲ ಸ್ವರೂಪವನ್ನು ತೋರಿಸುವ ಸಾಧ್ಯತೆ ಇರುತ್ತದೆ. ಹೆಚ್ಚಿನ ಗುಣಗಳು ಕಾಲದ ಬೆಳವಣಿಗೆಯಲ್ಲಿ ಸೇರಿಕೊಂಡವು ಆಗಿರಬಹುದು. ಎಲ್ಲಕ್ಕಿಂತ ಹೆಚ್ಚಾಗಿ ಪುರಾಣದ ಮೂಲ ದೃಶ್ಯ ಅದು ಹುಟ್ಟಿದ ಜನಾಂಗ–ಸಂಸ್ಕೃತಿ ಮತ್ತು ಪರಿಸ್ಥಿತಿಯನ್ನು ಅವಲಂಬಿಸಿರುತ್ತದೆ. ಅದಕ್ಕೆ ಆರೋಪಿತವಾಗುವ ನಿರುಕ್ತಿಗಳು, ಕಾಯಗಳು, ನಂತರದವೇ ಆಗಿರಬಹುದು. ಇಷ್ಟೆಲ್ಲ ಪರಿಮಿತಿಗಳ ಜೊತೆಗೆ ಮಾನವನ ಪೌರಾಣಿಕ ಮನಸ್ಸು ವಿಪರೀತಿಯದು. ವಸ್ತು ಸ್ವೀಕಾರದಲ್ಲಿ ವ್ಯತ್ಯಾಸಗಳು ಕಂಡುಬಂದರು ಮೂಲಕಲ್ಪನೆಯಲ್ಲಿ ಸಮಾನತೆ ಕಂಡುಬರುತ್ತದೆ. ಆ ಪುರಾಣದ ಮನಸ್ಸಿನ ಮೂಲಪ್ರವೃತ್ತಿ ಮತ್ತು ಅವಶೇಷಗಳು ಯಾವ ರೀತಿ ಕೆಲಸ ಮಾಡಿವೆ, ಯಾವ ವಸ್ತುಗಳ ಮೇಲೆ ಕೆಲಸ ಮಾಡಿವೆ ಎಂಬುದರ ಮೇಲೆ ಪುರಾಣಗಳ ವೈವಿಧ್ಯತೆ ಕಂಡುಬರುತ್ತದೆ. ಜಗತ್ತಿನಲ್ಲಿ ಕಂಡುಬರುವ ವಸ್ತುಗಳೆಲ್ಲ ಪುರಾಣಕ್ಕೆ ಏಕೆ ವಸ್ತುವಾಗಲಿಲ್ಲ ಎಂಬ ಗುಣಾತ್ಮಕ ಚಿಂತನೆ ಕೂಡ ಇದಕ್ಕೆ ಸಹಾಯವಾಗುತ್ತದೆ.

ವಿದ್ವಾಂಸರು ವಿವೇಚಿಸುವಂತೆ ಪುರಾಣಗಳು ಪ್ರಮುಖವಾಗಿ ಹತ್ತು ಅಥವಾ ಹನ್ನೆರಡು ವರ್ಗಗಳಿಗೆ ಸೇರುತ್ತವೆ. ಹೆಚ್ಚಿನ ವಿವೇಚನೆಯ ಮೇಲೆ ಅವುಗಳ ವರ್ಗೀಕರಣ ಸಂಖ್ಯೆ ಕಡಿಮೆಯಾಗಬಹುದು. ಅಂಥ ಪುರಾಣಗಳು ಯಾವುವೆಂದರೆ:

೧. ಋತುಮಾನ ಬದಲಾವಣೆಗೆ ಸಂಬಂಧಿಸಿದ ಪುರಾಣಗಳು

೨. ವಿಶಿಷ್ಟ ನೈಸರ್ಗಿಕ ಸಂಬಂಧಗಳು ಕುರಿತ ಪುರಾಣಗಳು

೩. ನಿಸರ್ಗದ ಹುಟ್ಟನ್ನು ಕುರಿತ ಪುರಾಣಗಳು

೪. ದೇವತೆಗಳ ಹುಟ್ಟನ್ನು ಕುರಿತ ಪುರಾಣಗಳು

೫. ಪ್ರಾಣಿ ಮತ್ತು ಮನುಷ್ಯನ ಹುಟ್ಟನ್ನು ಕುರಿತ ಪುರಾಣಗಳು

೬. ರೂಪಾಂತರ ಕುರಿತ ಪುರಾಣಗಳು

೭. ಸಾಂಸ್ಕೃತಿಕ ನಾಯಕರು, ಸಂಸಾರ ಮತ್ತು ದೇಶಗಳ ಸೃಷ್ಟಿ ಕುರಿತು

೮. ಸಾಮಾಜಿಕ ಸಂಸ್ಥೆಗಳು ಮತ್ತು ಅನ್ವೇಷಣೆಗಳನ್ನು ಕುರಿತ ಪುರಾಣಗಳು.

೯. ಸಾವಿನ ನಂತರದ ಸ್ಥಳಗಳ ಕುರಿತ ಪುರಾಣಗಳು

೧೧. ಚಾರಿತ್ರಿಕ ಘಟನೆಗಳ ಕುರಿತ ಪುರಾಣಗಳು

೧೨. ಇತರೆ ಪುರಾಣಗಳು

ಪುರಾಣ ಮತ್ತು ಧರ್ಮಗಳ ಸಂಬಂಧ ಅನ್ಯೂನ್ಯವಾಗಿದೆ ಎಂಬುದು ಅಂತಧರ್ಮೀಯ ಶಾಸ್ತ್ರಜ್ಞರ ಅಭಿಪ್ರಾಯ. ಪುರಾಣ ಎಂಬುದು ಒಂದು ಮುಖ ಧಾರ್ಮಿಕ ಸಂದೇಶಗಳನ್ನು ಪ್ರಕಟಿಸುವುದೇ ಪುರಾಣಗಳ ಕಾರ್ಯ, ಪುರಾಣ ಮತ್ತು ಧರ್ಮಗಳ ನಡುವಿನ ಸಂಬಂಧಗಳ ಬಗೆಗೆ ತಜ್ಞರು ಅನೇಕ ಪ್ರಮೇಯಗಳನ್ನು ಮಂಡಿಸಿದ್ದಾರೆ. "ಪುರಾಣಗಳು ಧರ್ಮದ ಅವಿಭಾಜ್ಯಾಂಗ ಹಾಗೂ ಅದಕ್ಕೆ ಅನಿವಾರ್ಯವೆಂದು ಬುದ್ದಿವಾದಿಗಳು ಅಭಿಪ್ರಾಯಪಟ್ಟರೆ, ಭಾವಪಂಥದವರು ಈ ಅಭಿಪ್ರಾಯವನ್ನು ಅಲ್ಲಗೆಳೆಯುತ್ತಾರೆ. ಈ ಎರಡೂ ಅಭಿಪ್ರಾಯಗಳು ದೋಷಯುಕ್ತವಾಗಿವೆ.[೨]

ಪುರಾಣ ಮತ್ತು ಐತಿಹ್ಯಗಳು ಕಾಲ ಮತ್ತು ಸ್ಥಳಕ್ಕೆ ಬದ್ಧವಾಗಿರುತ್ತವೆ. ಜನಪದ ಕಥೆಗೆ ಈ ರೀತಿಯ ಬದ್ಧತೆ ಇರುವುದಿಲ್ಲ. ಪುರಾಣ ಮತ್ತು ಐತಿಹ್ಯಗಳು ವಾಸ್ತವ ಜಗತ್ತಿಗೆ ಸೇರಿದವುಗಳು ಇರುತ್ತವೆ. ಇವುಗಳಲ್ಲಿ ಕಲ್ಪಿತ ಅಥವಾ ಅಲೌಕಿಕ ಅಂಶಗಳು ಸೇರಿಕೊಂಡರೂ ಇವು ಜನಪದ ವಾಸ್ತವ ಜಗತ್ತಿನ ವ್ಯಕ್ತಿ, ಸ್ಥಳ, ಘಟನಗೆಳ ಮೂಲಕವೇ ಪ್ರಕಟಗೊಳ್ಳುತ್ತವೆ. ಕಾಲವನ್ನು ಒಂದು ರೇಖೆಯ ರೂಪದಲ್ಲಿ ಕಲ್ಪಿಸಿಕೊಂಡರೆ ಜನಪದ ಕಥೆಗಳು ಕಾಲದ ರೇಖೆಯಿಂದ ಆಚಗಿನವು ಪುರಾಣಗಳು ಕಾಲದ ರೇಖೆಯ ಆರಂಭದ ಐತಿಹ್ಯಗಳು ಕಾಲದ ರೇಖೆಗಳ ಅನಂತರದ ಹಂತದವುಗಳು. ಈ ರೀತಿ ಪುರಾಣ ಮತ್ತು ಐತಿಹ್ಯಗಳು ಒಂದೇ ಕಾಲದ ರೇಖೆಯಲ್ಲಿ ಇದ್ದುಕೊಂಡರೂ ಕೂಡ ಬೇರೆ ಬೇರೆ ಅಂತರದಲ್ಲಿ ಚಲಿಸುತ್ತವೆ. ಉದ್ದೇಶದ ದೃಷ್ಟಿಯಿಂದಲೂ ಜನಪದ ಕಥೆಯು ಐತಿಹ್ಯ ಮತ್ತು ಪುರಾಣಗಳಿಂದ ಬೇರೆ ಆಗಿರುತ್ತದೆ. ಮನೋರಂಜನೆ ಕೆಲವೊಮ್ಮೆ ನೀತಿ ನಿರೂಪಣೆ ಜನಪದ ಕಥೆಗಳ ಉದ್ದೇಶವಾದರೆ ಸಮಾಜದ ಆದರ್ಶ ಮೌಲ್ಯಗಳನ್ನು ರೂಪಿಸುವುದು ಪುರಾಣ ಮತ್ತು ಐತಿಹ್ಯಗಳ ಹೊಣೆಗಾರಿಕೆ ಆಗಿರುತ್ತದೆ.

ಸಮಾಜವನ್ನು ರೂಪಿಸುವ ನಿಯಂತ್ರಿಸುವ ಶಕ್ತಿಯನ್ನು ಈ ಐತಿಹ್ಯಗಳು ಹಾಗೂ ಪುರಾಣಗಳು ಹೊಂದಿರುತ್ತವೆ. ಸಮಾಜದ ಬದುಕಿನ ಇತಿಹಾಸದ ವಿವಿಧ ಘಟ್ಟಗಳಲ್ಲಿ ಇವು ರೂಪುಗೊಂಡಿರುತ್ತವೆ. ಬಾಲ್ಯದಲ್ಲಿ ಜನಪದ ಕಥೆಗಳು, ನಡುವಯಸ್ಸಿನಲ್ಲಿ ಐತಿಹ್ಯಗಳು ಹಾಗೂ ಇಳಿವಯಸ್ಸಿನಲ್ಲಿ ಪುರಾಣಗಳು ಹೀಗೆ ಮನುಷ್ಯನ ಬದುಕಿನ ಈ ಮೂರು ಹಂತಗಳಲ್ಲಿ ಈ ಮೂರು ಪ್ರಕಾರಗಳು ತಮ್ಮ ಪ್ರಭಾವ ಬೀರುತ್ತವೆ.

"ಈ ಬಗೆಯ ಮತಾಚರಣೆಗಳು ಮಧ್ಯಂತರ ಜಗತ್ತೊಂದನ್ನು ಪ್ರತಿನಿಧಿಸುತ್ತವೆ. ಈ ಮಧ್ಯಂತರ ಜಗತ್ತು ತಾತ್ಕಾಲಿಕವಾದುದು. ಅದರ ಮುಂದುಗಡೆ ಅಲೌಕಿಕ ಜಗತ್ತಿದ್ದರೆ, ಹಿಂದುಗಡೆ ಲೌಕಿಕ

ಜಗತ್ತಿರುತ್ತದೆ. ಅಲೌಕಿಕ ಜಗತ್ತಿಗೆ ಸೇರಿದ ಸಂಸ್ಕೃತಿ ವೀರರು ಅಥವಾ ಪುರಾಣವೀರರು ಮತಾಚರಣೆಯ ಸಂದರ್ಭದಲ್ಲಿ ಈ ಮಧ್ಯಂತರ ಜಗತ್ತಿಗೆ ಇಳಿದು ಬರುತ್ತಾರೆ"[೪] ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಂಡುಬರುವ ಭೂತಾರಾಧನೆಯ ಕುರಿತಾದ ಆಚರಣೆಯನ್ನು ಇಟ್ಟುಕೊಂಡು ಈ ವಿವರವನ್ನು ಕೊಟ್ಟಿದ್ದಾರೆ. ಇಲ್ಲಿ ಮಧ್ಯಂತರ ಜಗತ್ತು ಯಾವುದೆಂದರೆ ಭೂತಾರಾಧನೆಯ ಸಂದರ್ಭದಲ್ಲಿ ಭೂತ ಕಟ್ಟಿದ ವ್ಯಕ್ತಿ ಆ ಜಗತ್ತಿಗೆ ಸಂಬಂಧಿಸಿದವನಾಗುತ್ತಾನೆ. ಭೂತ ಕಟ್ಟಿದ ವ್ಯಕ್ತಿಯ ಮುಂದೆ ನಿಂತು ಜನರು ತಮ್ಮ ಕಷ್ಟಗಳಿಗೆ ಪರಿಹಾರವನ್ನು ಕೇಳಿದಾಗ, ಭೂತ ಕಟ್ಟಿರುವ ವ್ಯಕ್ತಿಯು ಆಕಾಶದೆಡೆಗೆ ಮುಖ ಮಾಡಿ, ಅಲ್ಲಿಂದ ಏನೋ ವರ ಪಡೆದಂತೆ ವರ್ತಿಸುತ್ತಾ ನಂತರ ಜನರೆಡೆಗೆ ತಿರುಗಿ ಯಾವುದೋ ಒಂದು ಪರಿಹಾರವನ್ನು ಅವರಿಗೆ ಸೂಚಿಸುತ್ತಾನೆ. ಆ ಸಂದರ್ಭದಲ್ಲಿ ಆತನೇ ಜನರ ಪಾಲಿಗೆ ವಿಶಿಷ್ಟ ವ್ಯಕ್ತಿಯಾಗಿ ಕಾಣಿಸಿಕೊಳ್ಳುತ್ತಾನೆ. ಇದನ್ನೆ ಜನರು ಪೌರಾಣಿಕವಾಗಿಸಿಕೊಳ್ಳುತ್ತಾರೆ.

ಪುರಾಣಗಳು ಭರತಖಂಡದಲ್ಲಿನ ಹಿಂದೂ ಮತದ ಉಚ್ಚ್ರಾಯವನ್ನು ಇಲ್ಲಿನ ದೇವ ಸಮೂಹ ಸದಸ್ಯರ ಪೈಕಿ ಒಬ್ಬಾನೊಬ್ಬ ದೇವಪುರುಷನ ಏಳುಬೀಳುಗಳನ್ನು ಪ್ರಧಾನವಾಗಿ ಕಥಿಸುತ್ತವೆ. ಅತಿರೇಕವೆನ್ನುವಂಥ ಪಂಥಾಭಿಮಾನವು ಅವುಗಳಲ್ಲಿ ಕಾಣಿಸುವುದಿಲ್ಲವಾದರೂ ಶಿವ ಅಥವಾ ವಿಷ್ಣು ಇವರಲ್ಲಿ ಒಬ್ಬರ ಮಹಿಮೆಯನ್ನು ವರ್ಣರಂಜಿತವಾಗಿ ಚಿತ್ರಿಸಿರುವುದು ಆಯಾ ಪುರಾಣಗಳಲ್ಲಿ ಸಾಮಾನ್ಯ ಅನೇಕ ಸಂದರ್ಭಗಳಲ್ಲಿ ಸ್ವಯಂ ದೇವತೆಗಳೇ ತಮ್ಮ ಕಥೆಯನ್ನು ನಿರೂಪಿಸುತ್ತಾರೆ.

"ಪುರಾಣಗಳನ್ನು ಸಾಮಾನ್ಯ ದರ್ಜೆಯ ಸಂಸ್ಕೃತ ಭಾಷೆಯಲ್ಲಿ ಬಹುತೇಕ ಶ್ಲೋಕಗಳಲ್ಲಿ ಕೆಲವೊಮ್ಮೆ ತ್ರಿಷ್ಟುಬ್ ಛಂದಸ್ಸಿನಲ್ಲಿ ಅಥವಾ ಗದ್ಯದಲ್ಲಿ ರಚಿಸಲಾಗಿದೆ. ಬಹುಮಟ್ಟಿನ ಪುರಾಣಗಳು ಪ್ರಶ್ನೋತ್ತರ ರೂಪದಲ್ಲಿವೆ. ಹಿಂದೂ ದೇವಾನುದೇವತೆಗಳು ಮತ್ತು ಅತಿಮಾನುಷ ಜೀವಿಗಳ ಚರಿತೆಯು ಪುರಾಣಗಳ ಮುಖ್ಯ ವಸ್ತು ವಿಷಯ"[೫] ಅಲ್ಲಲ್ಲಿ ಪ್ರಖ್ಯಾತ ಋಷಿಮುನಿಗಳ ಮತ್ತು ಮಾನವ ಸ್ತ್ರೀಪುರುಷರ ಕಥೆಗಳನ್ನು ಪೋಣಿಸಿರುವುದು ಉಂಟು. ಅವುಗಳನ್ನು ನಿರೂಪಿಸುವ ದಾಟಿಯು ಒಂದು ಬಗೆಯ 'ಪುನರ್‌ಕಥನ' ರೂಪದ್ದು ಅಂದರೆ ನಿರೂಪಕರು ಒಂದಾನೊಂದು ಕಾಲದಲ್ಲಿ ಕೇಳಿದ್ದನ್ನು ಅಸ್ಪುಟವಾಗಿ ನೆನಪಿಟ್ಟುಕೊಂಡು ಹೇಳುತ್ತಿರುವಂತೆ ಅಥವಾ ಕೇವಲ ಸ್ಥೂಲರೇಖೆಗಳನ್ನು ಮಾತ್ರ ಬಲ್ಲವನಾಗಿದ್ದು, ತನ್ನ ಕಲ್ಪನಾಶಕ್ತಿಯಿಂದ ಅವುಗಳಿಗೆ ಬಣ್ಣ ತುಂಬಿ ಕಥಿಸುತ್ತಿರುವಂತೆ ತೋರುತ್ತದೆ.

ಈ ಪುರಾಣಗಳಿಗೆ ಒಂದು ವಿಶೇಷ ಗುಣವಿದೆ. ಯಾವುದೇ ಪುರಾಣ ತಾನು ಹೇಳುತ್ತಿರುವುದು ಸತ್ಯ ಎಂದು ಸಮರ್ಥಿಸುವ ಪ್ರಯತ್ನ ಮಾಡುವುದಿಲ್ಲ. ತಾನು ಹೇಳುತ್ತಿರುವುದು ನಂಬುವಂತಿರಬೇಕು ಎಂದು ತಾರ್ಕಿಕವಾಗಿ, ವೈಚಾರಿಕವಾಗಿ ಒಪ್ಪಿಸಲು ಪ್ರಯತ್ನಿಸುವುದಿಲ್ಲ. ಪುರಾಣವು ಹೇಳುವ ಘಟನೆ ಎಷ್ಟೇ ಅದ್ಭುತವಾಗಿರಲಿ, ನಮಗೆ ಗೊತ್ತಿರುವ ಪ್ರಕೃತಿಯ ನಿಯಮಗಳಿಗೆ ವಿರೋಧವಾಗಿರಲಿ,

ಪುರಾಣ ಮಾತ್ರ ಅದನ್ನು ಸುಮ್ಮನೆ ಹೇಳುತ್ತದೆ. ಸುಮ್ಮನೆ ಇರುತ್ತದೆ. ಪುರಾಣಕ್ಕೆ ಅದರದೇ ಆದ ಅಧಿಕಾರ ಹೀಗೆ ಸಮರ್ಥಿಸಿಕೊಳ್ಳದೆ ತಾನೇ ಸತ್ಯ ಎಂಬಂತೆ ಇರುವುದರಿಂದ ಪ್ರಾಪ್ತವಾಗುತ್ತದೆ. ಆದ್ದರಿಂದಲೇ ನಮ್ಮ ಕಾಲಕ್ಕಿಂತ ತುಂಬಾ ಹಿಂದಿನ ಪುರಾಣಗಳನ್ನು ಅಥವಾ ಬೇರೆ ಸಮಾಜದ ದೇಶದ ಪುರಾಣವನ್ನು ಸುಲಭವಾಗಿ ಗುರುತಿಸಬಹುದು. ಸುಮ್ಮನೆ ಇದ್ದು ಬದುಕಿನ ಮೇಲೆ ಅಧಿಕಾರ ಚಲಾಯಿಸುವ ನಮ್ಮದೇ ಕಾಲದ ಪುರಾಣಗಳನ್ನು ಗುರುತಿಸುವುದು ಕಷ್ಟ. ಪುರಾಣ ಎಂದ ಮಾತಿಗೆ ಹಳೆಯದು ಎಂಬ ಅರ್ಥವೂ ಇದೆ. "ಸಂಸ್ಕೃತದಲ್ಲಿ ಪುರಾಣಗಳನ್ನು ಸ್ಮೃತಿ ಎಂದು ಕರೆಯುತ್ತಾರೆ. ಗ್ರೀಕರು ಮಿಥ್ ಅನ್ನುತ್ತಾರೆ. ಮಿಥೋಸ್ ಅಂದರೆ ಪದ, ಮಾತು ಎಂದು ಅರ್ಥ. ಆಡಿ ಮುಗಿಸಿದ ಮಾತು ಮಾತ್ರ ಎಂದು ವಿಶ್ಲೇಷಿಸಬಹುದು."[೬] ಸ್ಮೃತಿ ಎಂದರೆ ನೆನಪು ಸಂಗತಿಯೊಂದು ಸಂಭವಿಸಿ ನೆನಪಿಗೆ ಸಂದ ಮೇಲೆ ಮಾತ್ರ ಅದರ ಗೊತ್ತು ಗುರಿಗಳನ್ನು ವಿವೇಚಿಸಬಹುದು. ನೆನಪು ಇರುವಷ್ಟು ಕಾಲ ವರ್ತಮಾನವನ್ನು ನಿಯಂತ್ರಿಸುತ್ತ ಇರುತ್ತದೆ. ನೆನಪಿನ ಹಂಗು ಹರಿದ ಮೇಲೆ ಅದು ನಿರ್ಲಿಪ್ತವೋ ಪಾಂಡಿತ್ಯ ಪೂರ್ಣವೋ ಆದ ಅಧ್ಯಯನದ ವಸ್ತುವಾಗುತ್ತದೆ.

ಪುರಾಣಗಳ ನಿರೂಪಣೆ ಒಂದು ಕಥೆಯಾಗಿರುತ್ತದೆ. ಆದರೆ ಅದರ ಒಳ ಅರ್ಥ ಬೇರೆಯೇ ಆಗಿರುತ್ತದೆ. ಈ ಒಳ ಅರ್ಥ ಪ್ರಕೃತಿಯ ಒಂದು ವ್ಯಾಪಾರವನ್ನೋ ಮನುಷ್ಯರ ಬದುಕಿನ ಒಂದು ಮೌಲ್ಯವನ್ನೋ ಕುರಿತದ್ದಾಗಿರುತ್ತದೆ. ಪುರಾಣಗಳಲ್ಲಿ ಎದುರಾಗುವ ದೇವತೆಗಳು, ರಾಕ್ಷಸರು ಅತಿಮಾನುಷ ವ್ಯಕ್ತಿಗಳ ನಿಜವಾಗಿ ಸಾಮಾನ್ಯ ಮನುಷ್ಯರಲ್ಲದೆ ಬೇರೇನೂ ಅಲ್ಲ. ಮನುಷ್ಯ ಕುಲಕ್ಕೆ ಅವರಿಂದಾದ ಸಹಾಯವನ್ನೇ ಅಪಕಾರವನ್ನೇ ಕಥೆಯ ರೂಪದಲ್ಲಿ ಪುರಾಣಗಳು ಹೇಳುತ್ತವೆ. ಹಳೆಯ ಕಾಲದ ಮನುಷ್ಯ ಪ್ರಕೃತಿಯನ್ನು ಕಂಡ ರೀತಿಯನ್ನು ವಿವರಿಸುತ್ತದೆ. ಹೀಗೆ ಪುರಾಣಗಳನ್ನು ಅವುಗಳ ಧಾರ್ಮಿಕ ಅಂಶ ಅದ್ಭುತದ ಅಂಶಗಳನ್ನೆಲ್ಲ ಕಳೆದು ತುಂಬ ವೈಚಾರಿಕವಾಗಿ ಅರ್ಥಮಾಡಿಕೊಳ್ಳುವ ದಾರಿ ಇದು.

ಇಂತಹ ಸಂಗತಿಗಳನ್ನು ಬರ್ಕ್‌ಕ್ಟ್ ತನ್ನ "ಸ್ಟ್ರಕ್ಚರ್ ಅಂಡ್ ಹಿಸ್ಟರಿ ಇನ್ ಗ್ರೀಕ್ ಮೈಥಾಲಜಿ" ಎಂಬ ಪುಸ್ತಕದಲ್ಲಿ ಹೀಗೆ ಹೇಳುತ್ತಾನೆ. ಗ್ರೀಕ್ ಪುರಾಣ ಕಥೆಗಳಲ್ಲಿ ಕಾಣುವ ಕ್ರಿಯೆಯ ಸರಣಿ ಮೂಲಭೂತವಾದ ಜೈವಿಕ ಅಥವಾ ಸಾಂಸ್ಕೃತಿಕ ಕ್ರಿಯಾ ಸರಣಿಯನ್ನೇ ಆದರಿಸಿದ್ದು ಎಂಬ ಪ್ರತಿಪಾದನೆ ಅವನದ್ದು ಅವನ ಪ್ರಕಾರ ಗ್ರೀಕ್ ಪುರಾಣಗಳಲ್ಲಿ "ಕನ್ನೆಯ ದುರಂತ" ವಿನ್ಯಾಸವನ್ನು ನಾವು ಕಾಣಬಹುದು. ಹುಡುಗಿಯೊಬ್ಬಳು ಮನೆಬಿಟ್ಟು ಹೋಗುತ್ತಾಳೆ ಏಕಾಂತವನ್ನು ಅನುಭವಿಸುತ್ತಾಳೆ. ದೇವತೆಯೊಬ್ಬ ಅವಳ ಮೇಲೆ ಲೈಂಗಿಕ ಆಕ್ರಮಣ ನಡೆಸುತ್ತಾನೆ. ಹುಡುಗಿಯ ಮನೆಯವರು ಅವಳನ್ನು ತಿರಸ್ಕರಿಸಿ ಆಕೆ ತಳಮಳ ಪಡುತ್ತಾಳೆ. ಗಂಡು ಮಗುವನ್ನು ಹೆರುತ್ತಾಳೆ. ಅವಳಿಗೆ ಸುರಕ್ಷೆ

ಲಭಿಸುತ್ತದೆ. ಮಗುವಿಗೆ ಉಜ್ವಲ ಭವಿಷ್ಯ ಈ ಸರಣಿ ಕಾಮಾರ್ಯ, ಕಂದಿಹರೆಯ, ಕನ್ಯತ್ವಭಂಗ, ಗರ್ಭಧಾರಣೆ, ಹೆರಿಗೆಯ ಜೈವಿಕ ವಿನ್ಯಾಸದ ವ್ಯಕ್ತರೂಪವಾಗಿದೆ. ಬಲಿಪಶುವಿನದ್ದು ಇನ್ನೊಂದು ವಿನ್ಯಾಸ ತಮ್ಮನ್ನು ಕಾಡುವ ಶಕ್ತಿಯಿಂದ ಪಾರಾಗಲು ತಮ್ಮಲ್ಲಿನ ಒಂದು ಜೀವವನ್ನು ಆ ಕಾಡುವ ಶಕ್ತಿಗೆ ಬಲಿಯಾಗಿಸುವುದು ಅನೇಕ ಕಥೆಗಳಲ್ಲಿ ಕಾಣುತ್ತದೆ. ಬದುಕಿ ಉಳಿದ ಹಂಬಲ ಇಂಥ ಪುರಾಣ ಕಥೆಗಳಲ್ಲಿ ಕಾಣುತ್ತದೆ. ಬದುಕಿ ಉಳಿದ ಹಂಬಲ ಇಂತ ಪುರಾಣ ಕಥೆಗಳಲ್ಲಿ ವ್ಯಕ್ತವಾಗುತ್ತದೆ ಎನ್ನುತ್ತಾನೆ.

ಉತ್ತರ ಅಮೆರಿಕೆಯ ಅಬ್ನಾಕಿ ಇಂಡಿಯನ್ನರ ಒಂದು ಪುರಾಣ ಕಥೆ ಜೋಳದ ತೆನೆ ಹೇಗೆ ಹುಟ್ಟಿತು ಅನ್ನುವುದನ್ನು ಹೇಳುತ್ತದೆ. "ಒಬ್ಬಂಟಿಗ ಒಂದು ಸಾರಿ ಒಬ್ಬ ಉದ್ದ ಕೂದಲು ಚೆಲುವೆಯನ್ನು ಕಂಡ. ನಾನು ಹೇಳಿದಂತೆ ನಡೆದುಕೊಂಡರೆ ನಿನ್ನೊಡನೆಯೇ ಇರುತ್ತೇನೆ ಎಂದಳು ಅವಳು. ಬೆಂಕಿ ಮಾಡುವುದನ್ನು ಕಲಿಸಿದಳು. ಬೆಂಕಿಯಿಂದ ಸುಟ್ಟು ಕರಕಲಾದ ನೆಲದ ಮೇಲೆ ತನ್ನನ್ನು ಎಳೆದಾಡುವಂತೆ ಹೇಳಿದಳು. ಅದರಿಂದ ಅವಳ ಕಪ್ಪು ಕೂದಲು ಬಂಗಾರ ಬಣ್ಣದ್ದಾಗುವುದೆಂದೂ ಅವನಿಗೆ ತಿನ್ನಲು ಜೋಳದ ಕಾಳು ಸಿಗುತ್ತದೆಂದೂ ಹೇಳಿದಳು. ಅವತ್ತಿನಿಂದ ಅಬ್ನಾಕಿ ಜನ ಜೋಳದ ಕಾಳನ್ನು ಕಂಡಾಗೆಲ್ಲ ಆ ಜೋಳದ ಹೆಣ್ಣು ತಮ್ಮನ್ನು ಮರೆತಿಲ್ಲ ಎಂದು ತಿಳಿಯುತ್ತಾರೆ."[೭]

ಇಂತಹ ಅನೇಕ ಪುರಾಣ ಕಥೆಗಳು ನಮ್ಮಲ್ಲಿ ಸಿಗುತ್ತವೆ. ಈ ಇಡೀ ವಿಶ್ವ ಈ ಭೂಮಿ ಹೇಗೆ ಹುಟ್ಟಿತು ಎಂಬುದನ್ನು ವಿವರಿಸುವ ಪುರಾಣಗಳಿವೆ. ಇದನ್ನು ಸಂಸ್ಕೃತ ಪದ ಬಳಸಿ ಸೃಷ್ಟಿ ಪುರಾಣಗಳೆನ್ನಬಹುದು. ಆದರೆ ಸೃಷ್ಟಿ ಎಂಬ ಮಾತು ಸೃಷ್ಟಿಕರ್ತ ಒಬ್ಬನಿದ್ದಾನೆ. ಅಷ್ಟೇ ಅಲ್ಲ ಸೃಷ್ಟಿಗಿಂತ ಆತ ಬೇರೆ ಎಂಬ ಕಲ್ಪನೆ ಮೂಡಿಸಿತು. ಇಂಥ ಕಲ್ಪನೆಯನ್ನು ಒಪ್ಪದ ಪುರಾಣಗಳೂ ಇವೆ. ಈ ಭೂಮಿಯ ಸೃಷ್ಟಿ ಕ್ರಿಯೆಯಿಂದ ಹುಟ್ಟಿದ್ದಲ್ಲ ಮೊದಲೇ ಇತ್ತು. ಅಥವಾ ಬೆಳೆಯಿತು. ತನ್ನಿಂದ ತಾನೇ ಉದ್ಭವ ಆಯಿತು ಎಂದೆಲ್ಲ ಹೇಳುವ ಪುರಾಣಗಳಿವೆ.

ಹಾಗೆಯೇ ಆಳುವ ವರ್ಗಗಳು, ಆಳುವ ಕುಟುಂಬಗಳು ತಮ್ಮ ವಂಶದ ಉಗಮ ಪುರಾಣ ಕಾಲದಲ್ಲಿ ಆದದ್ದೆಂಬ, ದೈವಿಕವಾದದ್ದೆಂಬ ಸಂಗತಿಯನ್ನು ಒತ್ತಿ ಹೇಳುತ್ತಿದ್ದವು. ಚೀನಾ, ಈಜಿಪ್ಟ್, ಭಾರತ ಪಾಲಿನೇಷಿಯಾ ಇಲ್ಲೆಲ್ಲ ಮತ್ತು ಇಂಡೋ ಯುರೋಪಿಯನ್ ಸಮಾಜಗಳಲ್ಲಿ ಆಳುವವರು, ಪೂಜಿಸುವವರು, ಯೋಧರು ಮತ್ತು ಉತ್ಪಾದಕ ವರ್ಗದವರು ತಾವು ಮಾಡುತ್ತಿರುವ ಉದ್ಯೋಗ ನಿರ್ವಹಿಸುತ್ತಿರುವ ಕರ್ತವ್ಯ ತಮ್ಮ ತಮ್ಮ ವಂಶಗಳಿಗೆ ಪುರಾಣ ಕಾಲದಲ್ಲಿ ನಿರ್ಧಾರವಾದವು ಎಂದು ಸ್ಥಾಪಿಸಲು ಯತ್ನಿಸುತ್ತಾರೆ. ಹಾಗೆಯೇ ಪ್ರತಿಯೊಂದು ಸಮಾಜವು ಒಪ್ಪಿರುವ ವಿವಾಹ ಪದ್ಧತಿ ಶವಸಂಸ್ಕಾರ ವಿಧಾನಗಳ ಸಮರ್ಥನೆಗೆ ಪುರಾಣದ ಆಧಾರಗಳನ್ನು ಒದಗಿಸುವುದನ್ನು ಕಾಣಬಹುದು.

ಮನುಷ್ಯನ ಹುಟ್ಟಿಗೂ ವಿಶ್ವದ ಹುಟ್ಟಿಗೂ ಪುರಾಣಗಳ ಸಂಬಂಧ ಕಲ್ಪಿಸುತ್ತವೆ. ವಿಶ್ವಸೃಷ್ಟಿಯ ಪುರಾಣ ಕಥೆಗಳು ಮನುಷ್ಯನ ಹುಟ್ಟಿನೊಂದಿಗೆ ಸಾಮಾನ್ಯವಾಗಿ ಮುಗಿಯುತ್ತವೆ. ಹೀಗಾಗಿ ಮನುಷ್ಯ ಕಾಣಿಸಿಕೊಳ್ಳುವ ಮುನ್ನ ಇದ್ದ ವಿಶ್ವ ಮನುಷ್ಯ ಕಾಣಿಸಿಕೊಂಡ ನಂತರ ಬದಲಾಯಿತೆಂದು ಸೂಚನೆಯನ್ನು ಈ ಕಥೆಗಳಲ್ಲಿ ನಾವು ಕಾಣುವುದು ಸಾಧ್ಯ. ಮನುಷ್ಯ ಹುಟ್ಟುವ ಮೊದಲಿನ ವಿಶ್ವವೇ ಬೇರೆ, ಮನುಷ್ಯ ಹುಟ್ಟಿದ ನಂತರ ವಿಶ್ವವು ಸಂಸ್ಕೃತಿಯ ತಾಣವಾಗಿ ಬೆಳದದ್ದೇ ಬೇರೆ, ಎರಡು ಘಟ್ಟಗಳು ಎಂಬ ಧೋರಣೆ ಈ ಪುರಾಣಗಳಲ್ಲಿ ಕಾಣುತ್ತವೆ. ಸಾಮಾನ್ಯವಾಗಿ ಈ ಎಲ್ಲಾ ಪುರಾಣಗಳಲ್ಲೂ ಸೃಷ್ಟಿಯ ಕ್ರಿಯೆಯನ್ನು ಮೂರು ಅಂತರಗಳಲ್ಲಿ ಕಲ್ಪಿಸಿಕೊಳ್ಳುವುದನ್ನು ಕಾಣುತ್ತೇವೆ. ದೇವರುಗಳ ಲೋಕ ಅಥವಾ ಆದಿ ಶಕ್ತಿಗಳ ಲೋಕ ಮೊದಲ ಹಂತದ್ದು, ಮನುಷ್ಯನ ಪೂರ್ವಿಕರೆನ್ನಬಹುದಾದ ಲೋಕ ಎರಡನೆ ಹಂತದ್ದು, ಮನುಷ್ಯನ ಲೋಕ ಮೂರನೇ ಹಂತದ್ದು. ಈ ಮೂರು ಹಂತಗಳಿಗೂ ಒಳಸಂಬಂಧ ಇರುವುದನ್ನು ಗಮನಿಸಬಹುದು. ದೇವತೆಗಳು ಮನುಷ್ಯನ ಪೂರ್ವಿಕರೆಂದೋ ಅಥವಾ ಮನುಷ್ಯರ ಸೃಷ್ಟಿಕರ್ತರೆಂದೋ ಮನುಷ್ಯನ ಪೂರ್ವಿಕರು ಮನುಷ್ಯರಾಗಿ ಪರಿವರ್ತನೆ ಹೊಂದಿದರೆಂದೋ ಈ ಪುರಾಣಗಳು ಹೇಳುತ್ತವೆ.

ಒಟ್ಟಾರೆ ಹೇಳುವುದಾದರೆ ಎಲ್ಲಾ ದೇಶಗಳಲ್ಲೂ ಎಲ್ಲಾ ಜನಾಂಗಗಳಲ್ಲೂ ಪುರಾಣಗಳಿವೆ. ಈ ಪುರಾಣಗಳು ಪ್ರತಿಯೊಂದು ಸೃಷ್ಟಿಗೂ ಒಂದೊಂದು ಕಥೆಯನ್ನು ಹೇಳುತ್ತವೆ. ಮನುಷ್ಯನ ಹುಟ್ಟಿಗೂ ಒಂದು ಕಥೆ. ಅವನು ಕಪ್ಪಾಗಿದ್ದರೂ ಅದಕ್ಕೊಂದು ಕಥೆ, ಅವನ ಬೆಳ್ಳಗಿದ್ದರೂ ಮತ್ತೊಂದು ಕಥೆ. ಹೀಗೆ ಪ್ರತಿಯೊಂದಕ್ಕೂ ಒಂದೊಂದು ಪುರಾಣ ಕಥೆಗಳಿವೆ. ಈ ಎಲ್ಲಾ ಪುರಾಣಗಳನ್ನು ಒಂದೆಡೆ ಸೇರಿಸಿ ಅಧ್ಯಯನ ಮಾಡುವುದು ಕಷ್ಟ ಸಾಧ್ಯ. ಆದರೂ ಈ ಅಧ್ಯಯನದಲ್ಲಿ ಪುರಾಣವನ್ನು ನಿರ್ವಚಿಸುವ ಪ್ರಯತ್ನವನ್ನು ಮಾಡಲಾಗಿದೆ.

**ಅಡಿಟಿಪ್ಪಣಿಗಳು**

೧. ಶ್ರೀರಾಮಾಯಣ ದರ್ಶನಂ ಮಹಾಕಾವ್ಯದಲ್ಲಿ ಪೌರಾಣಿಕಥೆ, ಪುಟ ೩೪ ಡಾ.ವಿಠಲರಾವ್ ಟಿ. ಗಾಯಕ್ವಾಡ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಪುರಾಣ, ಕೆ.ಎಲ್. ಗೋಪಾಲಕೃಷ್ಣಯ್ಯ ಪುಟ ೪.

೩. ಉತ್ತರ ಕರ್ನಾಟಕದ ಜನಪದ ಐತಿಹ್ಯಗಳು, ಭದ್ರಾಪೂರ ಅಪ್ರಕಟಿತ ಪಿಎಚ್.ಡಿ. ಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೪. ಕನ್ನಡ ಶಾಸನಗಳಲ್ಲಿ ಪುರಾಣ ಪ್ರಜ್ಞೆ (ಬಳ್ಳಾರಿ ಪರಿಸರವನ್ನು ಅನುಲಕ್ಷಿಸಿ) ಅಪ್ರಕಟಿತ ಪಿಎಚ್.ಡಿ. ಪ್ರಬಂಧ, ನಾಯಕರ ಹುಲುಗಪ್ಪ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫. ಪುರಾಣ, ಕೆ. ಎಲ್. ಗೋಪಾಲಕೃಷ್ಣಯ್ಯ ಪುಟ ೧೬

೬. ಪುರಾಣ, ಕೆ. ಎಲ್. ಗೋಪಾಲಕೃಷ್ಣಯ್ಯ ಪುಟ ೧೨

೭. ಪುರಾಣ, ಓ.ಎಲ್. ನಾಗಭೂಷಣಸ್ವಾಮಿ, ಪುಟ ೧೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

# ಅಧ್ಯಾಯ ನಾಲ್ಕು

## ಇತಿಹಾಸ ಮತ್ತು ಪುರಾಣಗಳ ಸಂಬಂಧ : ಕನ್ನಡ ಶಾಸನಗಳನ್ನು ಅನುಲಕ್ಷಿಸಿ

೧. ವಂಶ ಸಂಬಂಧಿ ಪೌರಾಣಿಕ ಅಂಶಗಳು

೨. ವ್ಯಕ್ತಿ ಸಂಬಂಧಿ ಪೌರಾಣಿಕ ಅಂಶಗಳು

೩. ಸ್ಥಳ ಸಂಬಂಧಿ ಪೌರಾಣಿಕ ಅಂಶಗಳು

# ಅಧ್ಯಾಯ ನಾಲ್ಕು

## ಇತಿಹಾಸ ಮತ್ತು ಪುರಾಣಗಳ ಸಂಬಂಧ : ಕನ್ನಡ ಶಾಸನಗಳನ್ನು ಅನುಲಕ್ಷಿಸಿ

ಭಾರತದಲ್ಲಿ ಇತಿಹಾಸ ರಚಿಸಲು ಯಾವುದೇ ರೀತಿಯ ಆಕರಗಳು ಇಲ್ಲ ಎನ್ನುವ ಕೊರತೆ ಇತಿಹಾಸಕಾರರನ್ನು ಕಾಡಿದಾಗ ಅವರಿಗೆ ದೊರೆತ ಆಕರಗಳೆಂದರೆ ಈ ಶಾಸನಗಳು. ಹಾಗಾಗಿ ಶಾಸನಗಳಿಗೆ ಹೆಚ್ಚು ಮಹತ್ವ ಬಂದದ್ದು ಬ್ರಿಟೀಷ್ ವಸಾಹತುಶಾಹಿ ಆಡಳಿತಾವಧಿಯಲ್ಲಿ. ಅಲ್ಲಿಯವರೆಗೂ ಭಾರತೀಯರಲ್ಲಿ ಚರಿತ್ರೆಯ ಪ್ರಜ್ಞೆಯ ಸ್ವರೂಪ ಪುರಾಣ ಹಾಗೂ ಮೌಖಿಕ ಪರಂಪರೆಯನ್ನು ಅವಲಂಬಿಸಿತ್ತು. ಆದರೆ ವಸಾಹತುಶಾಹಿ ಆಡಳಿತಾವಧಿಯಲ್ಲಿ ಭಾರತಕ್ಕೆ ಬಂದ ಪಾಶ್ಚಾತ್ಯ ವಿದ್ವಾಂಸರು ಇಲ್ಲಿನ ಚರಿತ್ರೆಯನ್ನು ಅಧಿಕೃತ ದಾಖಲೆಗಳ ಮೂಲಕ ನಿರ್ಮಾಣ ಮಾಡಿಕೊಳ್ಳಲು ಪ್ರಾರಂಭಿಸಿದರು. ಅವರು ವಸಾಹತುಶಾಹಿ ರಾಜಕೀಯಕ್ಕೆ ಪೂರಕವಾಗಿ ಇತಿಹಾಸ ನಿರ್ಮಾಣ ಮಾಡಿಕೊಳ್ಳಲು ಶಾಸನಗಳನ್ನು ಬಳಸಿಕೊಂಡರು. ಹೀಗಾಗಿ ಆ ಸಂದರ್ಭದಲ್ಲಿ ಬಹುಕಾಲದಿಂದಲೂ ಉಳಿದುಬಂದ ಶಾಸನಗಳು ಇತಿಹಾಸ ರಚನೆಗೆ ತುಂಬ ಮಹತ್ವದ ದಾಖಲೆಗಳಾದವು. ಅವರು ಮುಖ್ಯವಾಗಿ ಗಮನಹರಿಸಿದ್ದು ರಾಜಕೀಯ ಇತಿಹಾಸದ ಮೇಲೆ. ಏಕೆಂದರೆ ಅವರ ಉದ್ದೇಶವು ಭಾರತೀಯರನ್ನು ಆಳುವುದಾಗಿತ್ತು. ಅದೇನೆ ಇದ್ದರೂ ಶಾಸನಗಳಿಗೆ ಅಂದಿನಿಂದಲೇ ಹೆಚ್ಚು ಮಹತ್ವ ಬಂದು ಶಾಸನಗಳ ಅಧ್ಯಯನ ಕಾರ್ಯ ಪ್ರಾರಂಭವಾಯಿತು.

ಹೀಗೆ ಇತಿಹಾಸವನ್ನು ತಿಳಿಯಲು ಶಾಸನಗಳು ನಮಗೆ ಅತ್ಯಮೂಲ್ಯ ಆಕರಗಳಾಗಿವೆ. ಶಾಸನಗಳು ರಾಜ ಮಹಾರಾಜರುಗಳ ಇತಿಹಾಸವನ್ನು ತಿಳಿಸುವುದರ ಜೊತೆಗೆ ಅಂದಿನ ಸಾಮಾಜಿಕ, ಆರ್ಥಿಕ ಒಟ್ಟಾರೆ ಸಾಂಸ್ಕೃತಿಕ ವಿಚಾರಗಳನ್ನು ತಿಳಿಸುವ ಗಣಿಯಾಗಿವೆ. ಶಾಸನಗಳು ಮೊದಮೊದಲು ರಾಜರ ವಿವರಣೆ, ಅವರು ನೀಡಿದ ದಾನ, ದತ್ತಿ ಮೊದಲಾದ ವಿಚಾರಗಳನ್ನು ಬರೆಯಿಸುತ್ತಿದ್ದರು. ಬರುಬರುತ್ತಾ ಅದರಲ್ಲಿ ದಾನ ನೀಡಿದ ವ್ಯಕ್ತಿ, ತೆಗೆದುಕೊಂಡವರ ವಿವರ, ಕಾಲ, ದೇಶಗಳ

ವರ್ಣನೆಗಳು, ರಾಜರುಗಳು ಮಾಡಿದ ಸಾಮಾಜಿಕ ಕಾರ್ಯಗಳು ಮೊದಲಾದವು ಅವುಗಳಲ್ಲಿ ಸೇರಿಕೊಂಡವು. ಈ ಕುರಿತು ಚಿದಾನಂದಮೂರ್ತಿಯವರು ಹೀಗೆ ಹೇಳುತ್ತಾರೆ. "ಸಾಹಿತ್ಯಕ್ಕೆ ಸಾಹಿತ್ಯ, ಧರ್ಮಕ್ಕೆ ಧರ್ಮ, ಇತಿಹಾಸಕ್ಕೆ ಇತಿಹಾಸವೆನಿಸಿದ ಶಾಸನಗಳು ಪ್ರಾಚೀನ ಕರ್ನಾಟಕದ ಸಾಹಿತ್ಯ, ಧರ್ಮ ಮತ್ತು ಸಮಾಜಗಳಿಗೆ ಹಿಡಿದ ಶಿಲಾದರ್ಪಣಗಳೆನಿಸಿವೆ. ಪ್ರಾಚೀನ ಶಾಸನಗಳಲ್ಲಿ ರಾಜಮನೆತನ, ರಾಜನ ಹೆಸರು, ದತ್ತಿಯ ಕಾಲ, ದತ್ತಿಯ ವಿವರ ಮಾತ್ರವಷ್ಟೆ ಬರೆಯುತ್ತಿದ್ದರು. ಬರುಬರುತ್ತಾ ಶಾಸನಕಾರರು ಹೆಚ್ಚಿನ ವಿಷಯವನ್ನು ಅದರಲ್ಲಿ ಉಲ್ಲೇಖಿಸಹತ್ತಿದರು. ದೇವತಾಸ್ತುತಿ, ದೇಶದ ವರ್ಣನೆ, ಅದರ ರಾಜ, ಅವನ ಅಧಿಕಾರ, ಅದರ ಕಾಲ, ದಾನವನ್ನು ಸ್ವೀಕರಿಸುವವನ ಪಾಂಡಿತ್ಯ, ಜನರ ನೀತಿಯ ಮಟ್ಟ, ಆದರ್ಶ, ಬುದ್ಧಿವಂತಿಕೆ ಇತ್ಯಾದಿ ವಿಷಯಗಳನ್ನು ಶಾಸನಗಳಲ್ಲಿ ಬರೆಯತೊಡಗಿದರು. ಇಂತಹ ಅನೇಕ ಇತಿಹಾಸದ ವಿಷಯಗಳನ್ನು ತಿಳಿಯಲು ಶಾಸನಗಳು ನಮಗೆ ಬಹುಮುಖ್ಯ ಆಕರಗಳಾಗಿವೆ.

ಇಂದಿನ ಆಧುನಿಕ ಯುಗದಲ್ಲಿ ನಮ್ಮ ಮುಂದೆ ಪುರಾಣ ಮತ್ತು ಇತಿಹಾಸಗಳೆರಡು ಇವೆ. ಆದರೆ ಆಧುನಿಕ ಪೂರ್ವ ಕಾಲದಲ್ಲಿ ಇತಿಹಾಸಕಾರರ ಅಥವಾ ಶಾಸನ ರಚನೆಕಾರರ ಮುಂದೆ ಇದ್ದದ್ದು ಪುರಾಣವೊಂದೆ ಹಾಗಾಗಿ ಅವರು ಪುರಾಣವನ್ನೆ ಇತಿಹಾಸವೆಂದು ಹೇಳುತ್ತಿದ್ದರು. ಹೀಗಾಗಿ ಭಾರತೀಯರು ಶಾಸನಗಳನ್ನು ರಚಿಸುವ ಸಂದರ್ಭದಲ್ಲಿ ಇದ್ದ ಪುರಾಣದ ಕಲ್ಪನೆಗೂ, ಶಾಸನಗಳನ್ನು ನಾವಿಂದು ಅಭ್ಯಸಿಸುವ ಸಂದರ್ಭದಲ್ಲಿನ ಇತಿಹಾಸದ ಕಲ್ಪನೆಗೂ ತುಂಬಾ ವ್ಯತ್ಯಾಸವಿದೆ. ಹಾಗಾಗಿ ನಾವು ಆಧುನಿಕ ಪೂರ್ವಕಾಲದ ಇತಿಹಾಸವನ್ನು ನೋಡಿದಾಗ ಅದು ಪುರಾಣವೇ ಎಂಬುದು ಅರ್ಥವಾಗುತ್ತದೆ. ಅಂದರೆ ಆ ಸಂದರ್ಭದಲ್ಲಿ ಪುರಾಣ ಮಾತ್ರವೆ ಇದ್ದದ್ದು ಹಾಗಾಗಿ ಅವರು ಅದನ್ನೆ ಇತಿಹಾಸವೆಂದು ಭಾವಿಸುತ್ತಿದ್ದರು.

ಹಿಂದೆ ಪೌರಾಣಿಕ ವ್ಯಕ್ತಿಗಳು ಮಾಡಿದಂತಹ ಸಾಮಾಜಿಕ ಕಾರ್ಯಗಳನ್ನು ದಾನ, ಧರ್ಮಗಳನ್ನು ರಾಜ ಮಹಾರಾಜರುಗಳು ಮಾಡುವುದು ಅವರಿಗೆ ಸಿಕ್ಕ ಮಾನ ಮನ್ನಣೆ, ಗೌರವ ಆದರಗಳು ನಮಗೂ ಸಿಗಲೆಂದು ಶಾಸನಗಳಲ್ಲಿ ತಮ್ಮನ್ನು ಪೌರಾಣಿಕ ವ್ಯಕ್ತಿಗೆ ಹೋಲಿಸಿಕೊಳ್ಳುತ್ತಿದ್ದರು.

ಪ್ರಪಂಚದ ಎಲ್ಲಾ ಜನಾಂಗದಲ್ಲೂ ಎಲ್ಲಾ ಜಾತಿಯಲ್ಲೂ ಪುರಾಣಗಳಿವೆ. ಭಾರತದಲ್ಲೂ ಸಹ, ಪುರಾಣಗಳು ಮನುಷ್ಯನ ಅವಿಭಾಜ್ಯ ಅಂಶಗಳಾಗಿವೆ. ಪುರಾಣಗಳಲ್ಲಿ ಬರುವ ಪೌರಾಣಿಕ ವ್ಯಕ್ತಿಗಳೆಂದರೆ ಭಾರತೀಯರಿಗೆ ಅತ್ಯಂತ ಗೌರವ. ಅವರನ್ನು ಅತ್ಯಂತ ಗೌರವ ಆದರಗಳಿಂದಲೂ, ಪೂಜ್ಯ ಭಾವನೆಗಳಿಂದಲೂ ಕಾಣುತ್ತಿದ್ದರು. ಇಂತಹ ಪೂಜ್ಯ ಗೌರವ ಭಾವನೆಗಳು ಅರಸರು ತಮ್ಮ ಮೇಲೆ ಬರಲೆಂದು ಶಾಸನಗಳಲ್ಲಿ ತಮ್ಮನ್ನು ಪೌರಾಣಿಕ ವ್ಯಕ್ತಿಗಳಿಗೆ ಹೋಲಿಸಿಕೊಂಡು ಬರೆಸುತ್ತಿದ್ದರು.

ಶಾಸನ ರಚನೆಕಾರರು ಸಹ ವಿಷಯವನ್ನು ಇದ್ದಂತೆಯೇ ಬರೆಯದೆ ಅದನ್ನು ಆಕರ್ಷಕವಾಗಿ, ಅತಿರಂಜಕವಾಗಿ ಹೇಳಿಜನರ ಮನಸ್ಸನ್ನು ಸೆಳೆಯುವ ಪ್ರಯತ್ನ ಮಾಡಿದ್ದಾರೆ. ಅಂತಹ ಸಂದರ್ಭದಲ್ಲಿ ಅವರು ಅನೇಕ ಬಾರಿ ಮೊರೆ ಹೋಗುವುದು ಪೌರಾಣಿಕ ಅಂಶಗಳತ್ತ ಎನ್ನುವುದು ಗಮನಾರ್ಹ. ಬಹುಶಃ ಜನರ ಮನಸ್ಥಿತಿಯನ್ನರಿತು ಅವರು ಇಂತಹ ವಿಷಯಗಳನ್ನು ಆಯ್ಕೆ ಮಾಡಿಕೊಂಡಿರಬಹುದೆನಿಸುತ್ತದೆ. ಜೊತೆಗೆ ಪುರಾಣಗಳ ಬಗ್ಗೆ ಶಾಸನಕಾರರಿಗಿದ್ದ ಸೆಳೆತವೂ ಕೂಡ ಇದಕ್ಕೆ ಮತ್ತೊಂದು ಕಾರಣವಾಗಿರಬಹುದು.

ಭಾರತೀಯರು ಹಿಂದಿನ ಘಟನೆಗಳನ್ನು ಬದುಕಿ, ಬಾಳಿದ ವ್ಯಕ್ತಿಗಳನ್ನು ಕೇವಲ ಘಟನೆ, ವ್ಯಕ್ತಿಗಳನ್ನಾಗಿ ನೋಡದೆ ಅವುಗಳನ್ನು ಹಿಂದಿನ ಮೌಲ್ಯಗಳನ್ನಾಗಿ ಗುರುತಿಸಿ ಅವುಗಳನ್ನು ಅವರುಗಳನ್ನು ವಸ್ತು ಸ್ಥಿತಿಗಿಂತಲೂ ಭಿನ್ನವಾದ ಸ್ತರದಲ್ಲಿರಿಸಿ, ಅದನ್ನು ಕಥಾರೂಪದಲ್ಲಿ ಸಾಂಕೇತಿಕವಾದ ರೀತಿಯಲ್ಲಿ ಹೇಳುವ ಧೋರಣೆಯಿಂದ ಕೂಡಿದ್ದಾಗಿದೆ. ಈ ಪ್ರವೃತ್ತಿಯ ಪರಿಣಾಮದಿಂದಾಗಿಯೇ ಶಾಸನಗಳಲ್ಲಿ ಪೌರಾಣಿಕ ಅಂಶಗಳು ನುಸುಳಲು ಸಹಾಯಕವಾಗಿರಬಹುದು. ಪೌರಾಣಿಕ ಅಂಶಗಳು ಮನುಷ್ಯನ ಅರಿವಿನ ಪ್ರಜ್ಞೆಯನ್ನು ವಿಸ್ತರಿಸುವ ಘಟಕವಾಗಿವೆ. ಅಂತರಂಗವನ್ನು ಹೊಕ್ಕಾಗ ಅನೇಕ ಪವಾಡ ದೃಶ್ಯಗಳು, ದಂತಕಥೆಗಳು, ಪುಣ್ಯಕತೆಗಳು ಕಂಡುಬರುತ್ತವೆ. ಇವು ಪೀಳಿಗೆಯಿಂದ ಪೀಳಿಗೆಗೆ ವಿಸ್ತಾರಗೊಳ್ಳುತ್ತಾ ಮುಂದಿನ ತಲೆಮಾರಿನವರೆಗೆ ದಾಖಲೆಯ ರೂಪದಲ್ಲಿ ಪುರಾಣ ಕಥೆಗಳನ್ನು ಹೇಳುತ್ತವೆ. ಇವುಗಳು ಮಾನವನ ಅರಿವಿನ ಪ್ರಜ್ಞೆಯನ್ನು ವಿಸ್ತರಿಸುವುದರ ಜೊತೆಗೆ ವಂಶ, ವ್ಯಕ್ತಿ, ಸ್ಥಳ ಅಥವಾ ಪ್ರದೇಶಕ್ಕೆ ಸೈದ್ಧಾಂತಿಕ ಮೌಲ್ಯವನ್ನು ಒದಗಿಸುವ ಸೃಜನಶೀಲ ಕ್ರಿಯೆಯಾಗಿದೆ.

ರಾಜತ್ವವು ಆತನಿಗೆ ದೈವದತ್ತವಾಗಿ ಲಭಿಸಿರುವಂಥದ್ದು. ರಾಜನು ಸಾಮಾನ್ಯ ಜನರಿಗಿಂತಲೂ ಶ್ರೇಷ್ಠನಾದವನು. ಇಂತಹ ಅಂಶಗಳನ್ನು ಜನರಲ್ಲಿ ಬೇರೂರುವಂತೆ ಮಾಡುವಾಗಲೂ ಪೌರಾಣಿಕ ಅಂಶಗಳು ಶಾಸನಗಳಲ್ಲಿ ಕಾಣಿಸಿಕೊಂಡಿವೆ. ಅಂತಹ ಸಂದರ್ಭದಲ್ಲಿ ಅರಸನ ಮನೆತನದ ಮೂಲವನ್ನು ಸೂರ್ಯ, ಚಂದ್ರ, ಇಂದ್ರರಿಗೆ ಸಮೀಕರಿಸುವುದು ಸರ್ವವಿಧಿತವಾದುದು. ಇದಕ್ಕೆ ಪೂರಕವಾಗಿ ಅನೇಕ ಪುರಾಣಸಂಬಂಧಿ ಕಥೆಗಳನ್ನು ಸೃಷ್ಟಿಸಿ, ಅವುಗಳನ್ನೆ ವಾಸ್ತವದ ನಿಜ ಸಂಗತಿಗಳೆಂದು ಚಿತ್ರಿಸಲಾಯಿತು. ಈ ಹಿನ್ನೆಲೆಯಲ್ಲಿಯೇ ಅನೇಕ ರಾಜರ ವಿಷಯಗಳು ಪೌರಾಣಿಕ ಅಂಶಗಳೊಂದಿಗೆ ಕನ್ನಡ ನಾಡಿನ ಅನೇಕ ಶಾಸನಗಳಲ್ಲಿ ಕಾಣಿಸಿಕೊಂಡಿರುವುದನ್ನು ನೋಡಬಹುದು.

ಮೊಟ್ಟಮೊದಲನೆಯದಾಗಿ ಪೌರಾಣಿಕ ಅಂಶಗಳನ್ನು ಶಾಸನದಲ್ಲಿ ಬಳಸಿದವರು ಕದಂಬರು. ಕದಂಬರ ಕಾಕುತ್ಸವರ್ಮ ತಾಳಗುಂದ ಕ್ರಿ.ಶ. ೪೫೦ರ ಶಾಸನದಲ್ಲಿ ಮಯೂರಶರ್ಮನನ್ನು ಪೌರಾಣಿಕವಾಗಿ, ಅಂದರೆ ಇವನು ಬ್ರಹ್ಮ, ಮನು ಪುರೂರವ, ಯಯಾತಿ, ಹಾರೀತಿಗಳಿಂದ ಜನಿಸಿದವನೆಂದು ಹೇಳುವುದರ ಮೂಲಕ ತಮ್ಮ ವಂಶದ ಮೂಲ ಪುರುಷ ಸೂರ್ಯ, ಚಂದ್ರವಂಶಗಳಿಂದ ಜನಿಸಿದವನೆಂದು ಈ ಶಾಸನದಲ್ಲಿ ಬರೆಯಿಸಲಾಗಿದೆ.

ಸೂರ್ಯಚಂದ್ರರಿಂದ ಬುಧ, ಬುಧನಿಂದ ಪುರೂರವ. ಇವನ ಮಗ ಆಯು, ಇವನಿಂದ ನಹುಷ ಜನಿಸಿದ. ಹಾರೀತಿಯಿಂದ ಮಯೂರಶರ್ಮ ಹುಟ್ಟಿದನೆಂದು ಶಾಸನದಲ್ಲಿ ಬರೆಯಿಸಲಾಗಿದೆ. ಹೀಗೆ ಬರೆಯಿಸುವುದರ ಮೂಲಕ ಶಾಸನದಲ್ಲಿ ಮೊದಲಿಗೆ ಪೌರಾಣಿಕ ಅಂಶವನ್ನು ಸೇರಿಸಲಾಗಿದೆ.

ಸೂರ್ಯಚಂದ್ರ ವಂಶದಲ್ಲಿ ಮಾನವ್ಯಗೋತ್ರದಲ್ಲಿ ಹಾರೀತಿ ಜನಿಸಿ. ಇವನಿಂದ ಮಯೂರಶರ್ಮ ಜನಿಸಿದನೆಂದು ಇವನು ಸದ್ಗುಣ ಸಂಪನ್ನನಾಗಿದ್ದನೆಂದು ಶಾಸನದಲ್ಲಿ ಉಲ್ಲೇಖಿಸಲಾಗಿದೆ.

'ಅಥ ಬಭೂವ ದ್ವಿಜಕುಲಂ ಪ್ರಮುಖುವಿಚರದ್ಗುಣೇದ್ದ್ವಂಶುಮಣ್ಡಲಮ್ ತ್ರ್ಯಾರ್ಷ ವರ್ತ್ಮ ಹಾರೀತಿಪುತ್ರ ಮೃಷಿಮುಖ್ಯ ಮಾನವ್ಯಗೋತ್ರಜಮ್/ವಿವಿಧ ಯಜ್ಞವ ಭೃಥ ಪುಶ್ಯಾಮ್ಬು ನಿಯತಾಭಿಕ್ಷೇಕಾರ್ದ್ರ ಮೂರ್ಧ್ದಜಮ್ ಪ್ರವ ಚನಾವಗಾಹ ನಿಷ್ಣಾತಂ ವಿಧಿವತ್ಸಮಿದ್ದಾಗ್ನಿ ಸೋಮಪಂ॥ ಪ್ರಣವಪೂ ರ್ವ್ವಷಡ್ವಿಧಾದ್ದೆಯ ನಾನರ್ದ್ಯ ಮಾನಾನ್ತರಾಲಯಮ್ ಅಕೃಶ ಚಾತುರ್ಮ್ಮಾಸ್ಯ ಹೋಮೇಷ್ಟಿ ಪಶುಪಾರ್ವ್ವಣ ಶ್ರಾದ್ದ ಪೌಷ್ಟಿಕಮ್.'

ಅತಿತಿನಿತ್ಯ ಸಂಶ್ರಿತಾವಸಥಂ ಸವನತ್ರಯಾವ್ಧ್ಯ ನೈತ್ಯಕಮ್ ಗೃಹಸಮೀಪದೇಶ ಸುರೂಢ ವಿಕಸತ್ಕದಮ್ಮೈಕಪಾದಪಮ್/ತದುಪಚಾರವತ್ತ ದಾಸ್ಯತರೋಸ್ಸಾ ನಾಮ್ಯ ಸಾಧರ್ಮ್ಮ್ಯಮಸ್ಯ ತತ್ತ ಪ್ರವವೃತೇ ಸತೀರ್ತ್ಥ್ಯ ವಿಪ್ರಣಾಂ ಪ್ರಾಚುರ್ಯ್ಯತಸ್ತದ್ವಿಶೇಷಣಮ್ ॥ ಏವಮಾಗತೇ ಕದಮ್ಬಕುಲೇ ಶ್ರೀಮನ್ಬಭೂವ ದ್ವಿಜೋತ್ತಮಃ ನಾಮತೋ ಮಯೂರಶರ್ಮ್ಮೇತಿ ಶ್ರುತಶೀಲ ಶೌಚಾದ್ಯಲಂಕೃತಃ ॥'[೧]

ಹೀಗೆ ಉಲ್ಲೇಖಿಸುವ ಮೂಲಕ ಈ ಶಾಸನವು ಮೊದಲ ಪೌರಾಣಿಕ ಅಂಶ ಒಳಗೊಂಡ ಶಾಸನವಾಗಿದೆ. ಈ ವಿಷಯವನ್ನು ಹಲವಾರು ವಿದ್ವಾಂಸರೊಡನೆ ಚರ್ಚಿಸಿ ಈ ನಿರ್ಧಾರಕ್ಕೆ ಬರಲಾಗಿದೆ. ಆರ್. ಶೇಷಶಾಸ್ತ್ರೀ, ಡಾ. ಪರಮಶಿವಮೂರ್ತಿ ಮುಂತಾದವರಿಂದ ಮಾಹಿತಿ ಪಡೆಯಲಾಗಿದೆ.

ಶಾಸನಗಳಲ್ಲಿ ಅನೇಕ ಬಗೆಯ ಪೌರಾಣಿಕ ಅಂಶಗಳು ಲಭ್ಯವಿದೆ. ಆದರೆ ಪ್ರಸ್ತುತ ಅಧ್ಯಯನದಲ್ಲಿ ಶಾಸನಗಳಲ್ಲಿ ಕಾಣಿಸಿಕೊಂಡಿರುವ ಪೌರಾಣಿಕ ಅಂಶಗಳನ್ನು ವಂಶಸಂಬಂಧಿ ಪೌರಾಣಿಕ ಅಂಶಗಳು, ವ್ಯಕ್ತಿಗಳಿಗೆ ಸಂಬಂಧಿಸಿದ ಪೌರಾಣಿಕ ಅಂಶಗಳು ಹಾಗೂ ಸ್ಥಳಗಳಿಗೆ ಸಂಬಂಧಿಸಿದಂತಹ ಪೌರಾಣಿಕ ಅಂಶಗಳೆಂದು ವಿಭಾಗಿಸಿಕೊಂಡು ಅಧ್ಯಯನಕ್ಕೊಳಪಡಿಸುವ ಪ್ರಯತ್ನ ಇಲ್ಲಿದೆ.

**ವಂಶಸಂಬಂಧಿ ಪೌರಾಣಿಕ ಅಂಶಗಳು**

ಶಾಸನಗಳಲ್ಲಿ ಅರಸರು ಅಥವಾ ಸಾಮಂತ ಮನೆತನದವರು ತಮ್ಮ ಶ್ರೇಷ್ಠತೆಯನ್ನು ಸಾರುವ ಸಲುವಾಗಿ ವಂಶದ ಹಿನ್ನೆಲೆಯನ್ನು ಮೊದಲು ವೈಭವಯುತವಾಗಿ ಕಟ್ಟುವ ಪ್ರಯತ್ನ ಅನೇಕ ಕಡೆ ನಡೆದಿದೆ. ಅಂದರೆ ವಂಶ ಮತ್ತು ಮೂಲವನ್ನು ಕೀರ್ತಿಸುವ ಸಲುವಾಗಿ ಧಾರ್ಮಿಕ

ಭಾವನೆಗಳನ್ನು ಹಾಗೂ ಪರಂಪರಾಗತವಾಗಿ ರೂಢಿಗೆ ಬಂದ ನಂಬಿಕೆಗಳನ್ನು ಬಳಸಿಕೊಂಡು ಅನೇಕ ಶಾಸನಕಾರರು ಪೌರಾಣಿಕ ಅಂಶಗಳನ್ನು ನಿರೂಪಿಸಿದ್ದಾರೆ. "ಪ್ರತಿಯೊಂದು ಅರಸೊತ್ತಿಗೆಯೂ ತಾನು 'ಸೂರ್ಯ' ಇಲ್ಲವೆ 'ಚಂದ್ರ' ವಂಶದವರೆಂಬುದಾಗಿ ಗುರುತಿಸಿಕೊಳ್ಳುವತ್ತ ಪೈಪೋಟಿ ನಡೆಸಿದವು. ವೃತ್ತಿಯಿಂದ ಕ್ಷತ್ರಿಯರಾಗಿರುವ ತಾವು ತಮ್ಮವರ ಮುಂದೆ ಸಾಮಾನ್ಯರಲ್ಲ ಅಸಮಾನ್ಯರೆಂಬ ಹುಸಿ ಹೆಮ್ಮೆಯನ್ನು ಮೆರೆಯುವ ಸಲುವಾಗಿ ಈ ರೀತಿ ಮಾಡಿದರು. ತಮ್ಮ ವಂಶದ ಹುಟ್ಟಿನ ಬಗ್ಗೆ ಹೆಸರಿನ ಬಗ್ಗೆ ಅಭೂತ ಕಲ್ಪನೆಗಳನ್ನು ಮಾಡುವುದರ ಮೂಲಕ ರಾಜನು ತಮ್ಮ ವಂಶ ಹಾಗೂ ಮೂಲಪುರುಷನನ್ನು ದೈವಾಂಶಸಂಭೂತನೆಂಬ ಭಾವನೆಯನ್ನು ವಂಶಕ್ಕೆ ಮೌಲ್ಯ ಒದಗಿಸುವ ಜನರಲ್ಲಿ ಉನ್ನತ ಭಾವನೆ ಉಂಟುಮಾಡುವಂತೆ ಮಾಡುವುದಾಗಿತ್ತು.'[೨] ಅಂದರೆ ವ್ಯಕ್ತಿ ಅಥವಾ ರಾಜ ಅಸಮರ್ಪಕ ಆಡಳಿತ ಅಥವಾ ದುರ್ಬಲ ಗುಣವನ್ನುಳ್ಳವನಾಗಿದ್ದರೂ ಅವನ ಮೇಲೆ ಪ್ರಜೆಗಳಲ್ಲಿ ಪೂಜ್ಯಭಾವನೆ ಅಥವಾ ಗೌರವ ಬರಲೆಂಬ ಕಾರಣದಿಂದ ಆತನನ್ನು ಪೌರಾಣೀಕರಿಸಿ ಹೊಗಳಿ ರಾಜನನ್ನು ತಮ್ಮ ಹಿಡಿತಕ್ಕೆ ತೆಗೆದುಕೊಳ್ಳುವ ಒಂದು ಒಳಹುನ್ನಾರ ಪುರೋಹಿತಶಾಹಿಗಳಲ್ಲಿ ಅಥವಾ ಅಧಿಕಾರಶಾಹಿಗಳಲ್ಲಿ ಇತ್ತು. ಈ ಕಾರಣದಿಂದಾಗಿ ರಾಜಮಹಾರಾಜರು, ಸಾಮಂತರು, ಪಾಳೆಗಾರರು ಹಾಕಿಸಿದಂತಹ ನೂರಾರು ಶಾಸನಗಳಲ್ಲಿ ಪೌರಾಣಿಕ ಅಂಶಗಳು ಕಂಡುಬರುತ್ತವೆ.

ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲೂಕಿನ ಇಟಗಿ ಗ್ರಾಮದ ಸರಸ್ವತಿ ದೇವಾಲಯದಲ್ಲಿರುವ ಕ್ರಿ.ಶ. ೧೧೧೨ರ ಚಾಲುಕ್ಯರ ಶಾಸನವು ವಂಶವನ್ನು ಕುರಿತು ಹೀಗೆ ಹೇಳುತ್ತದೆ.

"ಕಮಳಾವಲ್ಲಭನಾಭಿ ಹೇಮಕಮಳ ಜನ್ಮೋತ್ಸವ ಸ್ಥಾನಮಾಗೆ
ಮಹಾತ್ಮ ಪರಂ ಪವಿತ್ರನೊಗೆದಂ ಪದ್ಮಾಸನಂ ಭಾರತೀ ರಮಣಂ
ವೇದಮಹಾಪ್ರಭನ್ನ ಕವಿರಾಜಂ ಭೂರ್ಭ್ಬುಜ ಸ್ವಸ್ತಯಿಕ್ರಮ ನಿ
ರ್ಮಾಣ ಪರಾಯಣಂ ನಿಖಿಳ ಲೋಕರಾಧ್ಯ ಪಾದಾಂಬುಜ॥ ಎನಿ
ಸಿರ್ದಂಬುರುಹ ಸ್ವಯಂಭುಗೆ ಸುತಂ ಸ್ವಾಯಂಭುವಂ ಪುಟ್ಟಿದಂ
ಮನುವಾತಂಗೆ ಮಗಂ ಪ್ರಿಯಬ್ರತ ನ್ರಿಪಂ ತತ್ಪುತ್ರನ್ನೀಂದ್ರ
ಮುಖ್ಯನರೇನ್ದ್ರೋತ್ತಮರೇರ್ವ್ವರಂತವರ್ಗ್ಗೆ ಸಪ್ತದ್ವೀಪಮಂ
ಪಚ್ಚುಕೊಟ್ಟನಿಳಾವಲ್ಲಬನಾ ಪ್ರಿಯಬ್ರತನುದಾತ್ತ ಕ್ಷಾತ್ರಗೋ
ತ್ರೋತ್ತಮಂ"[೩]

ಚಾಲುಕ್ಯ ವಂಶದ ಕುರಿತ ಮಾಹಿತಿಯನ್ನು ನೀಡುವ ಶಾಸನವೊಂದರಲ್ಲಿ ವಿಷ್ಣುವಿನ ನಾಭಿ ಕಮಲದಿಂದ ಬ್ರಹ್ಮ ಜನಿಸಿದ. ಈ ಸ್ವಯಂಭುವಿಗೆ ಮನುಗಳು ಹುಟ್ಟಿ ಈ ಧರೆಯನ್ನು ಆಳಿದರು. ನಂತರ ಬುಧ ಜನಿಸಿದ. ಈತನ ಮಗ ಪುರೂರವ ಹೀಗೆ ಸೋಮವಂಶದಲ್ಲಿ ಅನೇಕರು ಆಳ್ವಿಕೆ

ಮಾಡಿದ ಮೇಲೆ ಚಾಲುಕ್ಯ ವಂಶೋದಯವಾಯಿತು ಎಂದು ಹೇಳಲಾಗಿದೆ. ಮುಂದೆ ತೈಲಪನಿಂದ ಹಿಡಿದು ಆರನೆಯ ವಿಕ್ರಮಾದಿತ್ಯನವರೆಗೆ ವಂಶಾವಳಿಯನ್ನು ನೀಡಲಾಗಿದೆ.

**ಸಿಂದಶಾಖೆಯವರ ಶಾಸನ**

ಸಿಂದಶಾಖೆಯವರು ತಮ್ಮ ವಂಶದ ಮೂಲ ಪುರುಷನು ಧರಣೇಂದ್ರೇಶ್ವರ ಮತ್ತು ಆತನ ಪತ್ನಿಗೆ ಭೂಲೋಕದಲ್ಲಿ ಜನಿಸಿದ ನಿಡುದೊಳು ಸಿಂದನೆಂದು ಹೇಳಿಕೊಂಡಿದ್ದಾರೆ.

ಧರಣೇಂದ್ರೇಶ್ವರನು ಒಮ್ಮೆ ಭೂಲೋಕವನ್ನು ನೋಡಲು ತನ್ನ ಪತ್ನಿಯೊಡನೆ ಬಂದಾಗ ಆಕೆಗೆ ಗರ್ಭ ಚಿಹ್ನೆಗಳು ಕಾಣಿಸಿಕೊಂಡು ಅಡಿಚ್ಚತ್ರದ ಸಿಂದು ನದಿ ಕರುವದಲ್ಲಿ ಕುಮಾರನೊಬ್ಬನಿಗೆ ಜನ್ಮ ನೀಡುತ್ತಾಳೆ. ಭಾಸುರ ತೇಜಸ್ಸಿನಿಂದ ಕೂಡಿದ ತನ್ನ ಮಗುವನ್ನು ಪುಲಿಗಣೇಶ್ವರನು ಸುರಕ್ಷಿತವಾಗಿ ನೋಡಿಕೊಳ್ಳುವನೆಂದು ಬಗೆದು ಪನ್ನಗಾಧೀಪತಿಗೆ ಆಜ್ಞಾಪಿಸಿದನು. ಪನ್ನಾಗಧೀಪತಿಯೂ ಅವನನ್ನು ಮಹಾಮಹಿಮನನ್ನಾಗಿ ಮಾಡುವ ಭರವಸೆಯನ್ನು ನೀಡಿ, ಅದರಂತೆ ಬೆಳೆಸಿದನು. ಇಂತಹ ಕುಮಾರನು ಶೌರ್ಯದ ಧೀರ್ಘಬಾಹುವನ್ನು ಪಡೆದಿದ್ದರಿಂದ ಅವನನ್ನು ನಿಡುದೋಳು ಸಿಂದನೆಂದು ಕರೆದರು. "ಸಿಂದ ಶಾಖೆಯವರ ಪ್ರಕಾರ ಶಿವಸಿಂದು ಪ್ರಿಯ ಸಂಗಮದಿಂದ ಜನಿಸಿದ ಕುಮಾರನೇ ನಿಡುದೋಳು ಸಿಂದನಾಗಿದ್ದಾನೆ"[೪]

"ತನ್ನಿಂದ ಜನಿಸಿದ್ದಕ್ಕಾಗಿ 'ಸೈನ್ಯವ' ಎಂಬ ಹೆಸರನ್ನು ಅನ್ವರ್ಥಕವಾಗುವಂತೆ ಅವನಿಗೆ ಇಟ್ಟನಂತೆ."[೫]

ಪುಲಿವಾಲಂಕುಡಿದಲಲ್ಲದೆ
ಕಲಿಯಾಗಂ ಪುತ್ರನಿವನೆನದ್ದು ಗೌರೀಪತಿತ
ನ್ನೊಲವಿಂ ಪುಲಿಯಂ ನಿರ್ಮಿಸೆ
ಪುಲಿವಾಲಂ ಕುಡಿದು ಬೆಳೆದನಾ ಶಿಶುಧರೆಯೊಳು

ಹೀಗೆ ಬೆಳೆದ ತನ್ನ ಮಗನಿಗೆ ಸಂಗ್ರಾಮದಲ್ಲಿ ಸಹಾಯವಾಗಲೆಂದು ಮೊಳತೀದೇವಿಗೆ ಆಜ್ಞಾಪಿಸಿದನು. ಆದ್ದರಿಂದಲೇ ಅವರು ತಮ್ಮನ್ನು 'ಮಾಳತೀದೇವಿಲಬ್ದ ವರಪ್ರಸಾದ'ರೆಂದು ಕರೆದುಕೊಂಡಿದ್ದಾರೆ. ಮುಂದೆ ಶಿವನು ಅವನಿಗೆ ನಿಡುದೋಳು ಸಿಂದನೆಂಬ ಎರಡನೆ ಹೆಸರನ್ನು ಕೊಟ್ಟನು"[೬]

ವಿಜಯನಗರವನ್ನಾಳಿದ ತುಳುವ ವಂಶದ ವಂಶಾವಳಿಯನ್ನು ಶಾಸನದಲ್ಲಿ ಪೌರಾಣಿಕವಾಗಿ ಹೀಗೆ ಹೇಳಲಾಗಿದೆ.

ನೀತಮಿವೋದ್ಭೂತ ಮಪನೀತತಮೋಮಹಃ । ತಸ್ಯಾಸೀತ್ತನಯಸ್ತಪೋಭಿರತುಲ್ಯೈರನ್ವರ್ಥ್ಥ ನಾಮಾ ಬುಧಃ ಪುಣ್ಯೈರಸ್ಯ ಪುರೂರವಾ ಭುಜಬಲ್ಯೈರಾಯುರ್ದ್ವಿಷಾನ್ನಿಘ್ನತಃ । ತಸ್ಯಾಯುರ್ನ್ನಹು

ಷೋಸ್ಯ ತಸ್ಯ ಪರುಷೋಯುಧೇ ಯಯಾತಿಃ ಕ್ಷಿತೌ ಖ್ಯಾತಸ್ತಸ್ಯ ತುರ್ಧುರ್ವ್ವಸುನಿಭಃ ॥
ಶ್ರೀ ದೇವಯಾನೀಪತೇಃ ತದ್ವಂಶೇ ದೇವಕೀಜಾನಿರ್ದ್ದಿದೀಪೇ ತಿಮ್ಮ ಭೂಪತಿಃ । ಯಶಸ್ವೀ ತುಳುವೇಂದ್ರೇಷು[೭]

ಈ ಶಾಸನದಲ್ಲಿ ತುಳುವಂಶದ ವಂಶಾವಳಿಯನ್ನು ಪೌರಾಣಿಕ ವ್ಯಕ್ತಿಗಳೆನಿಸಿದ ಚಂದ್ರನಿಂದ ಹಿಡಿದು ಅವನ ಮಗ ಬುಧ, ಆತನ ಮಗ ಪುರೂರವ, ಅವನ ಮಗ ವಾಯು ಅವನ ಮಗ ನಹುಷ ಆತನ ಮಗ ಯಯಾತಿ ಎಂದು ಹೇಳುತ್ತ, ಯಯಾತಿಯ ಮಡದಿ ದೇವಯಾನಿಯ ಉದರಲ್ಲಿ ತುರ್ವಸು ಜನಿಸಿದ. ಈ ತುರ್ವಸುವಿನ ವಂಶದಲ್ಲಿ ತುಳುವಂಶದ ಪ್ರಸಿದ್ಧ ಅರಸ ತಿಮ್ಮನು ಜನಿಸಿದ ಎಂದು ಹೇಳಲಾಗಿದೆ. ತುಳುವಂಶದ ಹಿನ್ನೆಲೆಯನ್ನು ಕಟ್ಟಿಕೊಡುವ ಶಾಸನಕಾರರ ಪ್ರಯತ್ನವು ಎಷ್ಟು ಪೌರಾಣಿಕವಾಗಿದೆ ಎನ್ನುವುದಕ್ಕೆ ಈ ಶಾಸನವೇ ಸಾಕ್ಷಿ. ಅರಸರು ತಮ್ಮ ವಂಶಕ್ಕೆ ಪೌರಾಣಿಕ ಸಂಬಂಧವನ್ನು ಕಲ್ಪಿಸುವ ಈ ಪ್ರವೃತ್ತಿಯಲ್ಲಿ ಇತಿಹಾಸ ಮತ್ತು ಪುರಾಣದ ಸಮೀಕರಣವಿದೆ. ಇದು ಒಂದರ್ಥದಲ್ಲಿ ಪುರಾಣವನ್ನು ಇತಿಹಾಸವಾಗಿಸುವ ಪ್ರಕ್ರಿಯೆಯು ಹೌದು.

ರಾಜಮಹಾರಾಜರು ತಾವು ಮೂಲತಃ ದೈವಿಪುರುಷನೊಬ್ಬನಿಂದ ಇಳಿದು ಬಂದವರೆಂದು ಹೇಳಿಕೊಂಡಿದ್ದಾರೆ. ರಾಜರು ದೈವದ ಅವತಾರವೆಂಬ ಭಾವನೆ ಬೆಳೆಯಲು ಇದು ಒಂದು ಕಾರಣವಾಯಿತು. ಕದಂಬರು, ಚಾಲುಕ್ಯರು, ಗಂಗರು ಮುಂತಾದವರು ಪೌರಾಣಿಕ ಉಗಮಗಳನ್ನು ಹೇಳಿಕೊಳ್ಳಲು ಆರಂಭಿಸಿದ್ದು ಒಂಭತ್ತನೆಯ ಶತಮಾನದಿಂದೀಚೆಗೆ ಎಂದು ಫ್ಲೀಟರು ಅಭಿಪ್ರಾಯ ಪಡುತ್ತಾರೆ."[೮]

**ನಾಗಾಯಿ ಶಾಸನ**

ನಾಗಾಯಿ ಶಾಸನದಲ್ಲಿ ಕಲ್ಯಾಣ ಚಾಲುಕ್ಯರ ವಂಶಾವಳಿಯನ್ನು ಹೀಗೆ ಹೇಳಿದೆ. ಬ್ರಹ್ಮನ ನಾಭಿಯಿಂದ ಮನು ಹುಟ್ಟಿದ ನಂತರ ಹಾ ರೀತಿ ಹುಟ್ಟಿದ. ಇವನಿಗೆ ಚಾಳುಕ್ಯ ಹುಟ್ಟಿದ ನಂತರ ಇವನಿಂದ ಈ ವಂಶಕ್ಕೆ ಈ ಹೆಸರು ಬಂದಿತೆಂದು ಶಾಸನ ಹೇಳುತ್ತದೆ.

"ನೆಗದ್ದಿನಾದಿ ಬ್ರಹ್ಮಂ ದಿವಿಜ ಮುನಿಜನನುತ ಪದ್ಮವಿಷ್ಟರಂ ತರುಣ
ತರಣಿ ಕಿರಚ್ಚಾಯಂ। ಅಂಭೋಜಾಸನ ಮನಸಂಭವನಾದಂ
ಸಮಸ್ತ ಮುನಿಜನನುತ ಪಾದಾರಿ ಭೋಜನನುಪಂ ಸಾಯಂಭುವ
ಮನವೆಂಬಖಿಲ ಭವನಖ್ಯಾತಂ । ಮಾನವ್ಯ (ನೆಂಬ) ನಾಮನು
ಸೂನು ಜಗತ್ರಯ ಪವಿತ್ರನೊಗೆದಂ ಮುನಿಸಂತಾನಮತಂ
ತನ್ಮನಿಯಿಂ ಮಾನವ್ಯ ಸಗೋತ್ರರಾದರಾ ವಂಶದವರ್॥
ಆತನ ತನೂಜಃನುಪಮಾತೀತಂ ನೆಗದ್ದಿಂ ಹಾರಿತನಾತಂಗೆ ಜಗನ್ನು
ತಪದಾಜ್ಜಿಂ ತ್ರಿಜಗಖ್ಯಾತಂ ಹಾರೀತಿ ಪುಟ್ಟಿದಂ ಪಂಚಶಿಖಿಂ॥

ಅವನ ತನಯಂ ಚಳುಕ್ಯಂ ಭುವನಸ್ತುತ ಕೀರ್ತಿ ನೆಗದ್ದಿನ
ವನಿಂದ ವನಿಸ್ತವ ನೀಯ ಮಾಯ್ತು ಚಾಳುಕ್ಯವಂಶಮಾ
ವಂಶ ಮುಖಿಲ ಭುವನೋತ್ತಂಸಂ॥

ಬೀದರ್ ತಾಲೂಕಿನ ರಂಜೋಳ್ ಗ್ರಾಮದ ಮಾರುತಿ ದೇವಾಲಯದ ಕಲ್ಲಿನ ಮೇಲಿರುವ ಕ್ರಿ.ಶ. ೧೧೧೫ರ ಶಾಸನ ಸಿಂದ ವಂಶದ ಬಗ್ಗೆ ಉಲ್ಲೇಖಿಸುತ್ತದೆ.

ಸಿಂದ ವಂಶದಲ್ಲಿ ಹಜ್ಜರಾಜನಿದ್ದ ಅವನ ವಂಶಾವಳಿಯನ್ನು ಶಾಸನ ಹೀಗೆ ಹೇಳುತ್ತದೆ. ರಿಂಜೇರು ಎಂಬುದು ಸಿಂದ ವಂಶದ ನಾಡಾಗಿತ್ತು. ಅಲ್ಲಿ ಹಜ್ಜರಾಜನಿದ್ದ. ಅವನ ವಂಶಾವಳಿ ಹೇಗೆಂದರೆ ನಾಗರಾಜನು ತನ್ನ ಹೆಂಡತಿ ಪದ್ಮಾವತಿಯೊಡನೆ ಬೋಗಾವತಿ ಪುರದಲ್ಲಿದ್ದರು. ಆಕೆ ಸಿಂದೂ ನದಿಯಲ್ಲಿ ಸ್ನಾನ ಮಾಡಿದ ನಂತರ ಮಗುವೊಂದು ಜನಿಸುತ್ತದೆ. ಆ ಮಗು ಭೂಲೋಕದಲ್ಲಿ ಹುಟ್ಟಿದ್ದರಿಂದ ಭೂಮಿಯನ್ನು ಪಾಲಿಸಲೆಂದು ಕಾಡಿನಲ್ಲಿದ್ದ ಶಾರ್ದೂಳಕ್ಕೆ (ಹುಲಿ) ಅದರ ಪಾಲನೆಯನ್ನು ವಹಿಸಿದರು. ಆ ಮಗು ಮುಂದೆ ಹುಲಿಹಾಲು ಕುಡಿದ ಕಾರಣ ಇವನಿಗೆ ಪುಲಿಸಿಂಧ ಎಂಬ ಹೆಸರು ಬರುತ್ತದೆ.

ಕಾಡಿನಲ್ಲಿದ್ದ ಇವನನ್ನು ಅಹಿಂಛತ್ರದ ಬ್ರಾಹ್ಮಣರು ಸೇಸೆ ಹೂಮಾಲೆ, ಕುಂಭಗಳ ಸಮೇತ ಬಂದು ಕರೆದುಕೊಂಡು ಹೋಗುವರು. ಪಾತಳ ಚಕ್ರವರ್ತಿ ನಾಗರಾಜನು ತಾನು ಹೋಗುವಾಗ ಪಟವೊಂದರಲ್ಲಿ ತನ್ನ ಮತ್ತು ಮಗನ ವಿವರಗಳನ್ನು ಬರೆದು ಮಗುವಿನ ಕೊರಳಿಗೆ ಹಾಕಿದ್ದ. ಅದನ್ನು ಓದಿದ ವಿಪ್ರಜರು ಜಾತಕರ್ಮಗಳನ್ನು ಮಾಡಿಸುತ್ತಾರೆ. ಮುಂದೆ ಇವನು ಬೆಳೆದು ಕದಂಬ ವಂಶದ ಮಯೂರವರ್ಮನ ಮಗಳನ್ನು ಮದುವೆಯಾಗುತ್ತಾನೆಂದು, ಇವನಿಗೆ ನಾಲ್ವರು ಮಕ್ಕಳು ಜನಿಸಿದರೆಂದು ಇವರಿಗೆ ಬಲ, ಇವನ ಮಗ ಬದ್ದ ಇವನ ಮಗ ಗೊನ್ನ ಮತ್ತು ಗೊಂಕರೆಂಬ ಮಕ್ಕಳು ಜನಿಸಿದರೆಂದು ಈ ಗೊಂಕನ ಮಗನೇ ಹಜ್ಜರಾಜನೆಂದು ಹೇಳಲಾಗಿದೆ.

ಧರಣೇಂದ್ರನಗ್ರಮಹಿಷಿ ಪರಮಪದ
ಖ್ಯಾತಿವಡೆದ ಪದ್ಮಾವತಿಯೊಳು ನೆರೆದತಿ
ಶಯ ಭೋಗವತೀಪುರದೊಳು ನಿಜರಾಜಧಾನಿಯೊಳು ಸುಖಮಿರ್ದ್ದ ॥.... ಯಿರೆ
ಕೆಲದೆವಸಕ್ಕಾ ಧರಣೇಂದ್ರನ ಸತಿಗೆ ಗರ್ಭಚಿಂಹ್ನಂಗಳು ಬಿತ್ತರಿಸಿದವತಿಶಯಮನೆ
ಬಿತ್ತರಿಪನ್ತಿರೆ ಸಕಳ ಭುವನ ಜನಪುಣ್ಯಫಳ ॥ ತರಳ ॥
ಕುಳನಗಂಗಳ ಸಾಮನಂದನದೊಳು ವಿನೋದಮನಾಡಲುಂ ಕುಳಿ(ರ್ವ್ವ)ಗಂಗೆ ಯಂದು
ಸಿಂಧುವ ನೀರಲೋಕುಳಿಯಾಡಲುಂ ಬೆಳಗುತಿಪ್ಪ ಸಶಾಂಕ ಸೂರ್ಯ್ಯರನಾದವರ್ತ್ಥಿಯೆ
ನೋಡಲುಂ ಜಳಜವಕ್ತ್ರೆಗಳುಂಬಮಾಗಿರೆ ಗರ್ಬ್ಬದೋಹ

ಳಮಪ್ಪುದು ॥ ಧರಣೀತಳಕೆ ವಿಮಾನಂ ಬೆರಸಾ ದಂಪತಿಗಳೊಗೆದು ಸಿಂಧುಕ್ಷಿತಿಯೊಳು
ಪರಿವ ನದಿ ಸಿಂಧುವಿನೊಳಾ ತರುಣಿ ಜಳಕ್ರೀಡೆಯಾಡಿ ತದನಂತರದೊಳು ॥ವೃ॥
ಉದಯಂಗೆಯ್ವರ್ಕ್ಕನಂ ಪಂನೆಗಪತಿಸತಿ ಕಂಡರ್ಗ್ಗಘಮಮಂ ಕೊ
ಟ್ಟು ನಿಂನಂದದ ಕಂದಂ ವಂಶರತ್ನಂ ಜನೆಯಿಸುಗೆನಗಿಂನೆಂಬುದು ಮಂತ್ರಸಾಮರ್ತ್ಥ್ಯದೆ
ಮಾರ್ತಂಡಪ್ರಸಾದಂ ದೊರೆಕೊಳೆ ತರುಣಾರ್ಕ್ಕಪ್ರಭಂ ನಂದನಂ ಪುಟ್ಟಿದನಾ
ಪದ್ಮಾವತಿದೇವಿಗೆ ಭುವನಜನಾಶ್ಚರ್ಯ್ಯ ಸೌರ್ಯ್ಯ ಪ್ರಭಾವ ॥
ಅನ್ತು ಪುಟ್ಟುವುದು ॥ ಕಂ ॥ ಧರಣಿತಳದೊಳಗಿವನವತರಿಸಿದನೀ ಧರೆಯೊನೊಸೆದು
ಪಾಳಿಸುಗೆಂದಾದರದಿಂ ವನ ಸಾರ್ದ್ದೂಳಿಗೆ ನಿರವಿಸಿ ದಂಪತಿಗಳತ್ತವೋಪುದುಮಿತ್ತ ॥
ಮೊಲೆಯೂಡಿದುದಹಿಸುತನಂ ಪುಲಿ ಸಿಂದು
ಗಿನಡಿಯರ್ಬ್ಭಕಂ ಮಱಿಯೊಡನಾ ಪುಲಿಯ ಮೊಲೆಯುಂಡು ಬಳೆದಂ ಪುಲಿಯುಂ
ಮೊಲೆಯಿತ್ತುದವನ ಪುಣ್ಯೋದಯದಿ ॥ ವೃ ॥ ಅದನಾಗಲು ಕಂಡು ವಿರೋತ್ತಮ
ನೆನಿಪ ತಳಾರಂ ಬರುತತ್ತಂದಹಿಛತ್ರದ ಲೋಕಖ್ಯಾತವಿಪ್ರೋತ್ತಮ
ಗ್ಗ್ಗಱಿಪುವುದುಂ ಶೇಸೆ ಪೂಮಾಲೆ ಕುಂಭಂ ಪುದಿದಿರ್ದುತ್ತುಂಗವೇದಧ್ವನಿ ಗುಡಿ ಪಟಹಂ
ತೋರಣಂ ರಂಜಿಸಲು ಬಂದಿದಿಗ್ಗೊಂಡುಯ್ದಂದಹಿಛತ್ರದೊಳವತರಿಸಿ ಕನತ್ಸೌಧದೊಳು
ವಿಪ್ರಮುಖ್ಯರು ॥ ಕ ॥ ಧರಣೇಂದ್ರನೊಂದು ಪಟಮಂ ಬರೆದುಡೆಯೊಳು
ಕಟ್ಟಿಪೋದಡಂತಾ ಪಟಮಂ ನಿರುತಂ ಬಾಜಿಸಿ ಕಂಡಾದರದಿಂದಂ ಜಾತಕರ್ಮ್ಮಮಂ
ಮಾಡಿಸಿದರು ॥ ಪಾತಾಳಚಕ್ರವರ್ತ್ತಿ ವಿನೂತಗುಣಂ ಭೋಗವತಿಗೆ ಪತಿ
ಧರಣೇಂದ್ರ ತಾತಂ ಪದ್ಮಾವತಿ ತಾಯಿ ಮಾತೇನೀತಂ ಮಹಾತ್ಮನುತ್ತಮ ವಂಶ ॥
ಸಿಂದುಗಿನ
ನೆಳಲೊಳನುನಯದಿಂದಮಿವಂ ಪುಲಿಯ ಮೊಲೆಯನುಣುತಿರ್ದ್ದುದಱಿಂ ಸಿಂದುಗಿ
ಮನೆದೆಯ್ವಂ ಪೆಸರಿಂದಮಿವಂ ಸಿಂದನೆಂದು ನುಡಿದರ್ವ್ವಿಪ್ರರು ॥ ಆ ಶಿಶು
ರತ್ನಕ್ಕಂನಪ್ರಾಶನ ಚೌಲೋಪನಯನಂ ಮಾಡಿಸಿ ವಾಗೀಶನಿವನೆಂಬಿನಂ ನಾನಾಶಾ
ಸ್ತ್ರಂಗಳುಮನಕ್ಕಱಿಂದೋದಿಸಿದರು ॥ ಕರಿತುರಗ ಸ್ಕಂದನ ರಣಪರಿಣತಿಯೊಳು
ಚಾಪಮಾದಿಯಾಗಿರೆ ಮೂವತ್ತೆರಡಱ ಮುಕ್ತಚತುಷ್ಟಯ ಪರಿಣತಿಯೊಳೂ
ತಾನೆ ಭುವನ ಭುಂಭುಕನಾದ
ದೊಳತಿಪರಿಚಿತನಾಗಿರ್ದ್ದಹಿಛತ್ರದೊಳು ಸುಖಸಂಕಥಾನೋದದಿಂ ರಾಜ್ಯಂಗೆಯ್ಯುತ್ತಮಿರ್ದ್ದ
ಸಮಂ ಲಲಾಟಲೋಚನದ ಮಯೂರವರ್ಮ್ಮನಪನಿರ್ದ್ದಪನಲ್ತೆ ಕಡಂಬವಂಶ
ನಾತನ ಸುತೆಯೊಳು ವಿವಾಹಮನೆಡಚ್ಚುಮವಮೀಗಳೆ ಪೋಗಿಮೆಂದುಮಾಜನಮದೆ

ನೃಪಂಗವರೆಂದಮಿಜಸುತೆಯನೊಸೆದು ಲಕ್ಷ್ಮೀಮತಿಯಂ ಸಿಂದಮಹೀಪತಿಗೀವುದು

ಬಂದೆವಹಿಔತ್ರನಿಂದವೆನೆ ಮುನಿದನವ ॥ ಮಣಿವಿಭೂಷಣ ॥ ಅವುದಾರನ ಕುಲಂ

ಬಲಮಾವುದೊ ತಂದೆ ಪೇಲಾವನಂಬಿಕೆಯದಾವಳೊ ಮಂಡಳಮಾವುದಿಂತಾವು

ದೀತೆರವೊ ನೋಡಿರೆ ತಂನುಮನೆಂನುಮಂ ಗಾವಿಲಂ ಬಗೆಯದಟ್ಟಿದನೆಂದು

ಮಹೀಭುಜಂ ॥ ಕ ॥

ಕಡುಮುಳಿದು ನೊಸಲ ಕಣ್ಣಿಂದಡರೆ ನಿರೀಕ್ಷಿಪುದುಮಾಯತಂ ಕರತಳವಾಗದೆ ನಿಮಿರ್ದ

ನಡೆವೊಯ್ಯಲು ಪಡೆದಂ ನಿಡುದೋಳಸಿಂದವೆಸರಂ ಸಿಂದ ॥ ಉಪೇಂದ್ರವಜ್ರ ॥

ಸಾಮರ್ಥ್ಯಮಂ ಕಂಡು ಮಯೂರವರ್ಮ್ಮಂ ರೋಮಾಂಚಿತನಾಗೆ ದ್ವಿಜರ್ಗ್ಗಂದನಾಗಳು

ಸಾಮಾಂನ್ಯನಲ್ಲಂ

ನಿಡುದೋಳಸಿಂದಂ ನೀಮಾತನಾರ್ಗ್ಗಂ ಬುದನೆಯ್ದೆ ಪೇಳಿಂ ॥ ವಚನ ॥ ಎಂಬುದಮವರೊ

ಳಗಭಿನವ ಬ್ಯಾಸನೆನಿಸಿದ ನಂದಾಚಾರ್ಯ್ಯಂ ಪೇಳ್ಗುಂ ಪಾತಾಳದರಸಂ ಧರಣೇಂದ್ರ

ಜನಕನಪ್ಪುದಱಿಂ ಪದ್ಮಾವತೀ ಲಬ್ಧವರಪ್ರಸಾದನುಂ ಭೋಗಾವತೀಪುರಮೇಶ್ವರನ್ವಯ

[ರಾಧೀ]ಶ್ವರನುಂ

ಅಹಿಛತ್ರಪುರ ಧರಾಮರರಂ ರಕ್ಷಿಸಿದನಪ್ಪುದಱಿಂದಹಿಛತ್ರಪುರ ಧರಾಮರ ರಕ್ಷ

ದಕ್ಷದಕ್ಷಿಣ

ಭುಜಾದಂಡನುಂ ಜಗಮೆಲ್ಲಂ ನಚ್ಚಿ ಮೆಚ್ಚಿ ಪೊಗಳ್ವುದಱಿಂ ಜಗಮೆಚ್ಚಿ ಗಂಡನುಂ

ಕನಸಿನಲಪ್ಪಡಂ ಪರವೆಣ್ಣನೊಲ್ಲದುದಱಿಂ ಪರವಧೂಕಂದನುಂ ವಿದಗ್ಧವಿದ್ವಜ್ಜನರ್ಕ್ಕೆ

ಬೇಡಿದುದನಿತ್ತುದಱಿಂ ವಿದಗ್ದವಿದ್ವಜ್ಜನ ಪಾರಿಜಾ

ತನುಂ ಪುಲಿಯ ಮೊಲೆಯುಂಡು ಬಳೆದನಪ್ಪುದರಿಂ ಬ್ಯಾಪುಲಾಂಛನನುಂ ಫಣೀಂದ್ರ

ವಂಶೋದ್ಧವನಪ್ಪುದಱಿಂ ಫಣೀಂದ್ರಕೇತನನುಂ ನಿಂನ ನೊಸಲ ಕಣ್ನಿರ್ದ್ದುರಿಯಂ

ನಿಮಿರ್ದ್ದ ಕರತಳದಿಂ ನಂದೆ ವೊಯ್ದನಪ್ಪುದಱಿಂ ನಿಡುದೋಳಸಿಂದನುಮೆಂಬ ಪೆಸ

ರ್ಗ್ಗಂ ಪೊಗಳ್ವಪೊಗರ್ತ್ತೆಗಂ ನೆಲೆಯಾದನಾತಂ ನಿನಗಳಿಯನಾಗಲು ತಕ್ಕನೆಂಬುದುಂ

ಮಯೂರವರ್ಮ್ಮಂ ಮನದೆಗೊಂಡು ಬಳಿಯನಟ್ಟಿ ಬರಿಸಿ ॥ ಕಂ ॥ ಭುವನ

ಪ್ರಖ್ಯಾತ ಕಡಂಬವಂಶತಿಳಕಂ ಮಯೂರವರ್ಮ್ಮನೃಪನುತ್ಸವದಿಂ ನಿಜ ಪುತ್ರಿಯೊಳೊ

ಸೆದು ವಿವಾಹಂ ಮಾಡೆ ನೆಗಟ್ದ ಲಕ್ಷ್ಮೀಮರಿಯೊಳು ॥ ಶ್ರೀಮತು ಸಂದಾನ್ವಯ

ಚೂಡಾಮಣಿಗಂ ಶ್ರೀ ಕಡಂಬವಂಶೋತ್ತಮೆ ಲಕ್ಷ್ಮೀಮತಿಗಂ ಪುಟ್ಟಿದರುದ್ದಾಮ

ಪರಾಕ್ರಮಿಗಳೆನಿಪ ನಾಲ್ವರ್ತ್ತನೆಯರು ॥ ಅಬ್ಯಾಜಸೌರ್ಯ್ಯರಂ ಪ್ರಭುಸೇಬ್ಯನುಮಂ ಸ೦೦

ಬೀದರ್ ತಾಲೂಕಿನ ಅಣಂದೂರು ಗ್ರಾಮದ ಹಿರೇಮಠದ ಹಿಂದೆ ನಿಲ್ಲಿಸಿರುವ ಕ್ರಿ.ಶ. ೧೧೩೮ರ ಶಾಸನ ಗೋಪದೇವನ ವಂಶಾವಳಿಯನ್ನು ಹೇಳುತ್ತದೆ.

ಗೋಪದೇವನ ವಂಶಾವಳಿಯನ್ನು ಶಾಸನವೊಂದು ಹೀಗೆ ಹೇಳುತ್ತದೆ. ವಿಷ್ಣು-ಬ್ರಹ್ಮ-ವಸಿಷ್ಠ ಇವನ ಗೋತ್ರವನ್ನೇ ಪಡೆದ ಬೋಪ್ಪಣಭಟ್ಟ, ಇವನ ಮಗ ಉಪೇಂದ್ರ, ಇವನ ತಮ್ಮ ಪ್ರಭು ಬಮ್ಮದೇವ, ಉಪೇಂದ್ರನ ಮಗ ಮಹೇಶ್ವರ ಇವನ ಪತ್ನಿ ಚಂಗಣಬ್ಬೆ ಇವನ ಮಗ ಗೋವಿಂದ, ಇವನ ಪತ್ನಿ ಚಾಕಣಬ್ಬೆ ಇವರ ಮಗ ನಾರಾಣದೇವ, ಇವನ ಪತ್ನಿ ಸಿರಿದೇವಿ ಇವರ ಮಗನೇ ಗೋಪದೇವ ದಂಡಾದೀಶ ಎಂದು ತಿಳಿಸುತ್ತದೆ.

ಇನ್ತು ಪೊಗರ್ತ್ತವಡೆದ ಗೋಪದೇವ

ದಂಡನಾಯ

ಕನ ವಂಶಾವತಾರಮೆನ್ತೆದೊಡೆ ॥ ವ್ರಿ ॥ ಶ್ರೀಲತಿಕಾಧಿಕಾರಣ ಸುರೇಂದ್ರ ಮಹೀರು

ಹಮೂರ್ತ್ತಿ ವಿಶ್ವವಿದ್ಯಾಲಲನಾಂಬುಜದ್ಯುಮಣಿ ದುರ್ದ್ಧರ ದೈತ್ಯಮದಾಪಹರಂ ಜಗ

ತ್ಪಾಳನ ರಕ್ಷನತ್ಯಮಳಕೀರ್ತ್ತಿ ಸುಧಾರ್ಣ್ನ[ವ]ದಲ್ಲಿ ಯೋಗ ನಿದ್ರಾಲಸಪಕ್ಷ ಲೋ

ಚನ ಸರೋರುಹನಾಗಿ ಮುಕುಂದನಿರ್ಪ್ಪುದು ॥ ಕ ॥ ತದಮಳ ನಾಭಿಸರೋಜದೊಳು

ದಯಿಸಿದಂ ವೇದಘೋಷವಿಭ್ರಾಜಿ ಚತುರ್ವ್ವೇದನಂ ಸಮಸ್ತ ವಿದ್ಯಾಸದನಂ ಮುದದಿಂ

ಹಿರಣ್ಯಗರ್ಬ್ಭಂ ಬ್ರಹ್ಮ ॥ ಎನಿಸಿದ ಹಿರಣ್ಯಗರ್ಬ್ಭನ ಮನಃಸ್ಸರೋಜಾತನಾಳದಿಂ

ದೋರೆ ಬುಧನಿಕಾಯಮೇರಿರೂಪಾ ಜನಿಯಿಸಿತೆನಲವರೊಳಗಧಿಕನಾಗಿ

ರ್ದವಶಿಷ್ಟ ॥ ಮುನಿ ವಶಿಷ್ಟನಿನಾಯನವದ್ಯ ವಶಿಷ್ಟಗೋತ್ರಮಾ ಗೋತ್ರದೊಳಿಂ

ತನುಪಮಮಾಗಿರೆ ಬಳಿಕಂ ಜನಿಯಿಸಿದಂ ಧಾತ್ರಿ ಪೊಗಳೆ ಬೊಪ್ಪ

ಣಭಟ್ಟ ॥ ಆ ಬೊಪ್ಪಣಭಟ್ಟಂಗೆ ದಬೋಹಿಳೋ ಲಳಿತಲೇಪನ ಚಂದನತಿಳಕಂ ಶ್ರೀ ಬ

ಯಸಿ ನೆರೆಯ ಕೀರ್ತ್ತಿಶ್ರೀ ಬಳಯೆ ಕುಳಾಬ್ಧಿ ಚಂದ್ರನೊಗೆದನುಪೇಂದ್ರ ॥ ವ್ರಿ ॥

ತತ್ತನುಜಂ ತ್ರಿಲೋಚನಧರಾಮರನಾತನ ಸೂನು ಚಕ್ರಮೋದಾತ್ತ ಯಶದ್ವೈರಿ ವಸಿಷ್ಟಂ

ನೆಗಳ್ದಂ ಪ್ರಭು ಬಮ್ಮದೇವತ್ಯುತ್ತಮನಾತನಗ್ರಜನುಪೇಂದ್ರನುಪೇಂದ್ರ ಮ

ಹಾ ದ್ವಿಜಂಗೆ ಲೋಕೋತ್ತಮನಾ ಮಹೇಶ್ವರನೆ ಪುಟ್ಟಿದನಂತೆನಿಪಂ ಮಹೇಶ್ವರ ॥

ವ ॥ ಅನ್ತು ಪ್ರತಾಪದೊಳು ಮಹೇಶ್ವರನೆನಿಸಿದ ಮಹೇಶ್ವರಂಗಂ ಉಮಾದೇವಿ

ಸಮಾನವೆನಿಸಿದ ಚಂಗಣಬ್ಬೆಗಂ ॥ ವ್ರಿ ॥ ಅಕಳಂಕಾಭರಣರ್ಕ್ಕಳಂಕರಣವೆಂ

ದೊರ್ಪ್ಪಿ ಗಡರ್ಪ್ಪಂದುಪೇಂದ್ರ ಕುಳಾಂಭೋನಿಧಿ ವರ್ದ್ಧನಕ್ಕೆ ಸಸಿಯೆಂದುಗ್ರಾರಿ ಕಾಂತಾಪ

ಪಾವಕನೆಂದುಜ್ವಳಕೀರ್ತ್ತಿಯೆಂದು ಗುಣಿಯೆಂದೀ ಭೂತಳಂ ಕೂರ್ತ್ತು ಬಣ್ಣಿಕುವೆಂದ[ಡೇಂ]

ನೆಗರ್ತ್ತವೆತ್ತ ಮಗನಾ ಗೋವಿಂದದಾಧಿಪ ॥ ವ್ರಿ ॥ ಶ್ರೀಮನ್ತ ಭೋಗನಿಳಯಂ ವಿಭು

ಸೋಯಣ ದಂಡನಾಥ ಚೂಡಮಣಿಗಂವ ಸಮಸ್ತ ಗುಣಶೀಳ ಸಮನ್ವಿತೆ ಚಾಕಣಬ್ಬೆಗಂ ಪ್ರೇ

ಮದೆ ಪುಟ್ಟಿದಂ ನೆಗಳ್ದ ನಾರಣದೇವನುಪೇಂದ್ರ ವಂಶಜೋದ್ದಾಮ ಗುಣಾಧಿಕಂ . . . . .

. . . . . . . ಮನು

. . . . . . ಕರ ದಂಡನಾಥನು ॥ ಗ ॥ ಅವರೊಳಗೆ ॥ ವೃ ॥

ಅಪ್ರತಿಮ ಪ್ರತಾಪನಸಹಾಯ ಪರಾಕ್ರಮನಾಶ್ರಿತಾಶ್ರ

ಯಂ ವಿಪ್ರಕುಲಾಂಬರ ದ್ಯುಮಣಿ ಮಂತ್ರಿಸಿಖಾಮಣಿಪೂಜಿತಂ ವಶಿಷ್ಠ ಪ್ರ

ವರ ಪ್ರಭುತನನವದ್ಯ ಚರಿತ್ರನನೂನ ದಾನಕೀರ್ತ್ತಿ ಪ್ರಿಯನೆಂದು ಬಣ್ಣಿ

ಪುದಿಳಾವಳೆಯಂ ವಿಭು ನಾರಣಯ್ಯನ ॥ ಕಂ ॥ ಆತನ ಕುಲವಧು

ಹಿಮಗಿರಿ ಧರೆಗರುಂಧತಿಗೆ ರತಿಗೆ ರಂಭೆಗೆ ಧರಣೀಜಾತೆಗೆ ಸಾವಿತ್ರಿ

ಗೆ ಪಡಿ ಭೂತಳದೊಳು ತಾನೆ ಸಿರಿಯದೇವಿಯೆನಿಪ್ಪಳು ॥ ವ ॥ ಅನ್ತು ಶೌರ್ಯ

ದೊಳು ನಾರಾಯಣನೆನಿಸಿದ ನಾರಾಯಣಂಗಂ ಮಾತೇನೋ ವಿಶಾಳವಕ್ಷಸ್ಥಳ ನಿವಾಸಿನಿ

ಯೆನಿಸಿದ ಸಿರಿಯಾದೇವಿಗೆ ॥ ಕಂ ॥ ಉದೇಯಗಿರೀಂದ್ರ ಸಿಖರದೊಳುದಿಯಿ

ಸುವಾದಿತ್ಯನಂತೆ ನಿಜಕುಳನಳಿನೀಮುದವೊದವೆ ವಂಶವರ್ದ್ಧನನುದಿಯಿಸಿದಂ ಗೋಪ

ದೇವದಂಡಾಧೀಶ"[೧೧]

ಬ್ರಹ್ಮ, ವಿಷ್ಣು, ವಶಿಷ್ಠ, ಗೋತ್ರದಿಂದ ಜನಿಸಿದ ಗೋಪದೇವನು ಸಾಕ್ಷಾತ್ ಈಶ್ವರನ ಅವತಾರವೇ, ಈ ರೂಪದಲ್ಲಿ ಜನಿಸಿದ್ದಾನೆಂದು ನಾರಾಯಣದೇವ ಶಾಸನದಲ್ಲಿ ಹೇಳಿಕೊಂಡಿದ್ದಾನೆ. ಇದನ್ನು ಗಮನಿಸಿದಾಗ ಇದು ತುಂಬ ಅತಿಶಯವೆನಿಸುತ್ತದೆ. ರಾಜರು ತಮ್ಮ ವಂಶಾವಳಿ ದೈವ ಮೂಲದಿಂದ ಬಂದುದೆಂದು ಹೇಳಿಕೊಳ್ಳುವ ಸಲುವಾಗಿ ಈ ರೀತಿ ಬರೆಸುತ್ತಿದ್ದರೆಂದು ತಿಳಿದುಬರುತ್ತದೆ.

**ಹೊಯ್ಸಳರ ಶಾಸನ**

ಹೊಯ್ಸಳ ವಂಶದ ಹುಟ್ಟಿನ ಬಗ್ಗೆ ಶಾಸನವೊಂದು ಹೀಗೆ ಹೇಳಿದೆ. ಸರಳನೊಮ್ಮೆ ಮುನಿಯನ್ನು ನೋಡಲು ಹೋಗುತ್ತಿರುವಾಗ ಪ್ರಾಣಿಗಳು ಕೋಲಾಹಲಾ ಮಾಡುತ್ತಿರಲು, ಅಲ್ಲಿಯೇ ಇದ್ದ ಹುಲಿಯೊಂದನ್ನು ನೋಡಿದ. ಆಗ ಆ ಹುಲಿಯನ್ನು ಸಂಹರಿಸುವಂತೆ ಮುನಿಯು 'ಹೊಯ್‌ಸಳ' ಎಂದು ಹೇಳಿ ಶಲಾಕೆಯನ್ನು ನೀಡಿದನೆಂದು, ಅದರಿಂದ ಸಳನು ಹುಲಿಯನ್ನು ಸಂಹರಿಸಿದನೆಂದು, ಹೀಗಾಗಿ ಆ ವಂಶಕ್ಕೆ ಹೊಯ್ಸಳ ಎಂಬ ಹೆಸರು ಬಂತೆಂದು ಹೇಳಲಾಗುತ್ತದೆ. ಹುಲಿಯನ್ನು ಸಂಹರಿಸುವ ಚಿತ್ರವೇ ಈ ವಂಶದ ರಾಜ್ಯಲಾಂಛನವಾಯಿತು.

"ದೃಂಷ್ಟ್ರಿಕಾ ಪೂರ್ವಪೌತ್ರಿಣಃ ಸಹಾಧ್ಯಾಯಾನು ಭಂದೇನ

ಭುನೋದ್ಧಾರಕರ್ಮಣಿ। ಸಳನೆಂಬ ಯಾದವಂ ಹೊಯ್ಸಳ

ನಾದಂ ಶಶಕಪುರದ ವಾಸಂತಿ ಕೆಯ ಪಳ್ಳುಳಿದು ಪುಲಿ

ಪೊಯ್ಯುದು ಪೊಯ್ಸಳಯೆನೆ ಮುನಿ ಬಳಿಕಮಾಯ್ತು

ಪೊಯ್ಸಳ ವಂಶಂ॥"[೧೨]

### ಬಸವಣ್ಣನವರ ಕುರಿತ ಶಾಸನಗಳು

ಬಸವಣ್ಣನ ವಂಶಜರನ್ನು ಕುರಿತು ಶಾಸನವೊಂದು ಹೀಗೆ ಹೇಳುತ್ತದೆ. ಬಸವಣ್ಣನವರ ವಂಶಜರು ಕವಿಳಾಸಪುರದಲ್ಲಿ ನೆಲೆನಿಂತಿದ್ದರೆಂದು, ಬಸವಣ್ಣನು ಮಾದಿರಾಜನ ಮಗನೆಂದೂ, ಮಾದಿರಾಜನೂ ತರ್ದವಾಡಿ ಪ್ರದೇಶದ ಬಾಗೆವಾಡಿಯ ಪುರವರಾದೀಶ್ವರನಾಗಿದ್ದನೆಂದೂ ಈ ಶಾಸನ ತಿಳಿಸುತ್ತದೆ. ತರ್ದವಾಡಿ ಪ್ರದೇಶ ಎಂದರೆ ಇಂದಿನ ವಿಜಾಪುರ ಜಿಲ್ಲೆಯ ಭೀಮಾ ಮತ್ತು ಕೃಷ್ಣ ನದಿಗಳ ನಡುವಿನ ಪ್ರದೇಶ ಎಂದರ್ಥ. ಇಂದು ಇದು ಇಂಡಿ ತಾಲೂಕಿನ ಒಂದು ಗ್ರಾಮವಾಗಿದೆ.

'ಮತ್ತಂ ತಧವಾಡಿ ಮಧ್ಯಗ್ರಾಮ ಬಾಗವಾಡೀಪುರವರಾಧೀಸ್ವರಂ ಮಾದಿರಾಜನ ತನೂ ಜಂ ಬಸವರಾಜನ ಮಹಿಮೆಯೆಂತೆಂದಡೆ ॥ ಮಂಗಳಕೀರ್ತ್ತಿ ಪುರಾತನ ಜಂಗಮಲಿಂ ಗೈಕಭಕ್ತಿನಿರ್ಭ್ಹರಲೀಲಾಸಂಗಂ ಸಂಗನಬಸವಂ ಸಂಗತಿಯಂ ಮಾಳ್ಕೆ ಭಕ್ತಿಯೊಳು (ಳ) ಗನವರತಂ ॥ ಯಾದವಭೂಮಿಪಾಳರಿಳೆಯಂ ಚತುರದ್ಧಿ(ಬ್ಧಿ) ಪರೀ'[೧೩]

ಬಸವಣ್ಣನವರ ಕುರಿತ ಅನೇಕ ವಿಚಾರಗಳನ್ನು ಈ ಶಾಸನ ತಿಳಿಸುತ್ತದೆ. ಬಹುತೇಕ ವೀರಶೈವ ಪುರಾಣಗಳು ಬಸವಣ್ಣನು ನಂದಿಯ ಅವತಾರವೆಂದೂ, ಅವನ ತಾಯಿ ವ್ರತಮಾಡಿ ಇವನನ್ನು ಹೆತ್ತಳೆಂದು ನಂಬಿಕೆಯನ್ನು ತಾಳಿವೆ. ಆದರೆ ಬಸವಣ್ಣನು ಅವರ ತಾಯಿಗೆ ಮೊದಲನೆಯ ಮಗನಲ್ಲವೆಂದೂ, ಅವನಿಗೆ ದೇವರಾಜನೆಂಬ ಅಣ್ಣನಿದ್ದನೆಂಬ ಐತಿಹಾಸಿಕ ಸಂಗತಿ ಇದರಿಂದ ತಿಳಿದುಬರುತ್ತದೆ. ಅದೇನೇ ಇದ್ದರೂ ಒಬ್ಬ ಚಾರಿತ್ರಿಕ ವ್ಯಕ್ತಿಯನ್ನು ಪೌರಾಣಿಕರಿಸುವ ಮೂಲಕ ಪುರಾಣಕ್ಕೂ, ಚರಿತ್ರೆಗೂ ಅಬೇಧ ಕಲ್ಪಿಸುವ ಕಾರ್ಯ ಇಲ್ಲಿ ನಡೆದಿದೆ.

### ಚಾಲುಕ್ಯರ ಶಾಸನ

ಚಾಳುಕ್ಯ ವಂಶೋದಯದ ಬಗ್ಗೆ ಶಾಸನವೊಂದು ಹೀಗೆ ಹೇಳಿದೆ. ಶ್ರೀರಮಣಿಯ ನಾಭಿಯಿಂದ ಬ್ರಹ್ಮ, ಬ್ರಹ್ಮನಿಂದ ಮನು, ಇವನಿಂದ ಹಾರೀತಿ ಇವನಿಂದ ಚಾಳುಕ್ಯ ವಂಶ ಉದಯವಾಯಿತೆಂದು ಹೇಳುತ್ತದೆ.

"ಶರೀರಮಣೀ ಪ್ರಿಯನಾಭಿ ಸರೋರುಹ ದೊಳ್ಪುಟ್ಟಿದಂ ಜಗತುಸ್ತ
ಷ್ಟಿವ್ಯಾಪಾರಾಭಿಮುಖಂ ಶ್ರುತಿರವಪೂರಿತ ದಿಙ್ಮುಖಂ ಹಿರಣ್ಯಗರ್ಬ್ಭ
ಬ್ರಹ್ಮ! ಎನಿಸಿರ್ದ್ದಂ ಭೋಜಗರ್ಬಂ ಪ್ರಭುಗೆ ಮನುಮುನಿ
ಪ್ರಖ್ಯನಾತಂಗೆ... ಹಾರೀತಿ ತತ್ಪಂಚಶಿಖನೊಗೆದನಾತಂ"[೧೪]

ಚಾಳುಕ್ಯ ತ್ರಿಭುವನಮಲ್ಲದೇವನು ಕಲ್ಯಾಣದಲ್ಲಿದ್ದಾಗ ಅವನ ಮಾಂಡಳೀಕನಾದ ಚಾಚರಸನು ಮುಕ್ಕುಂದೆಯನ್ನು ಆಳುತ್ತಿದ್ದನು. ಇವನ ವಂಶಾವಳಿಯನ್ನು ಶಾಸನವೊಂದು ಹೀಗೆ ಹೇಳುತ್ತದೆ.

ನಾಗೇಂದ್ರ ಮತ್ತು ನಾಗಿಣಿಯರಿಗೆ ಗೋನಭೂಪ ಜನಿಸಿದ. ಇವನ ಮಗ ಕಣ್ಣರಸ, ಇವನ ಪತ್ನಿ ಕಾವಬ್ಬರಸಿ, ಇವನ ಮಗ ಗೋನ ಇವನ ತಮ್ಮ ಬಾಚಭೂಪ ಎಂದು ಹೇಳಿದೆ. ಇವನು ಬಾಚೇಶ್ವರ ದೇವಾಲಯವನ್ನು ಮಾಡಿಸಿದನೆಂದು ಹೇಳುತ್ತದೆ.

"ಶ್ರೀಮನ್ಮಹಾಸಾಮನ್ತ ಬಾಚರಸರ ವಂಸಾವತಾರವ ವಿರಚಿಸುವೆಂ।
ನಾಗೇಂದ್ರಂ ತಂದೆ ತಾಯ್ನಾಗಿಣಿ ವೇಮವಿ ನಿಜೋತ್ಪತ್ತಿಯಿಂ ತಾನ್ಪದಿ
ಪೆಂಪಾರ್ಗ್ಗಂ ತಾನೆಂಬವನಂ ಬೋಗವತೀ ಪುರವರಾಧೀಶ್ವರಂ
ಸಿಂದಭೂಪಂ।"[೧೫]

**ಜಯಸಿಂಹನ ಶಾಸನ**

ಜಯಸಿಂಹನ ಮಗ ತ್ರೈಲೋಕಮಲ್ಲ ಇವನ ಪುತ್ರ ಭುವನೈಕ ಮಲ್ಲರ ವಂಶಾವಳಿಯನ್ನು ಶಾಸನವೊಂದು ಹೀಗೆ ವರ್ಣಿಸುತ್ತದೆ. ಹಿರಣ್ಯಗರ್ಭದಿಂದ ಬ್ರಹ್ಮ, ಬ್ರಹ್ಮನಿಂದ ಹಾರೀತಿ ಹುಟ್ಟಿ ಅವನಿಂದ ಚಾಳುಕ್ಯ ನೃಪೇಂದ್ರ ಇವನಿಂದ ವಿಕ್ರಮಾಂಕ, ಇವನಿಂದ ತೈಲನೃಪ ಇವನಿಗೆ ಸತ್ಯಾಶ್ರಯ ಇವನ ತಮ್ಮ ವಿಕ್ರಮಾನೃಪ ಇವನಿಗೆ ಜಯಸಿಂಹ ಜನಿಸಿ ಮುಂದೆ ಚಾಳುಕ್ಯರ ವಂಶ ಉದಯವಾಯಿತು ಎಂದಿದೆ.

"ಹಿರಣ್ಯಗರ್ಭಂ ಬ್ರಹ್ಮಂ ಚತುರಾಸ್ಯಂ ಸ್ವಯಂಭೂವತಿಯಂ
ತದ್ವತಿವಿನೂತ ಮಾನವ್ಯನಾಯತಿಪತಿ ಹಾರೀತಿತನಂ ತದ್ವತಿಪಂ
ಹಾರೀತನೆಂಬ ಯತಿಯಂ ಪಡೆದಂ ಅಮಳಾತ್ಮನೆನಿಪಂ ಹಾರೀತ
ಮುನೀಂದ್ರನಪ್ಪ ಪಂಚಶಿಖ ಸಾಮಾಖ್ಯನಪ್ಪಾ ಯತಿಯರ
ಕರಚುಳಕ ಜಳದಿಂದ ಮೊಗೆದಂ ನಿಳೆಗೆನಂನಿ ಚಳುಕನೃಪೇಂದ್ರ,
ಆ ವಂಶಾಜಾತನಖಿಳ ಕಳಾವಿದನೆಸೆದ ವಿಕ್ರಮಕರಣೆ"[೧೬]

ಅರಸರು ಸಾಮಂತರು ಮೊದಲಾದವರು ತಮ್ಮ ವಂಶದ ಬಗ್ಗೆ ಗೌರವ ಭಾವನೆಗಳನ್ನು ಹೆಚ್ಚಿಸಿಕೊಳ್ಳಲು, ಇನ್ನು ಕೆಲವರು ತಮ್ಮ ವಂಶಜರು ಮೂಲತಃ ದೈವಮೂಲದಿಂದ ಜನಿಸಿದವರೆಂದು ಹೇಳಿಕೊಳ್ಳಲು ಈ ರೀತಿಯಾಗಿ ಶಾಸನದಲ್ಲಿ ಬರೆಯುಸುತ್ತಿದ್ದರು. ಮತ್ತೆ ಕೆಲವರು ತಮ್ಮ ಬಣ್ಣದ ಬಗ್ಗೆ ಜಾತಿಯ ಬಗ್ಗೆ, ಕಸುಬಿನ ಬಗ್ಗೆಯು ಕೂಡ ಹೇಳುವಾಗ ಪುರಾಣಕ್ಕೂ ಇತಿಹಾಸಕ್ಕೂ ಸಂಬಂಧ ಕಲ್ಪಿಸುವ ಕೆಲಸ ಮಾಡಿರುವುದು ಕೆಳಗಿನ ಶಾಸನದಲ್ಲಿ ಕಂಡಬರುತ್ತದೆ.

ಆನೆಗುಂದಿಯಲ್ಲಿ ಉತ್ತರಕ್ಕಿರುವ ಕಡೆಬಾಗಿಲ ಬಳಿಯ ಹೊಲದಲ್ಲಿ ದೊರೆತ ತಾಮ್ರಶಾಸನ ಕುಂಬಾರ ವಂಶದ ಬಗ್ಗೆ ಪೌರಾಣಿಕ ವಿಷಯವನ್ನು ಹೀಗೆ ಹೇಳುತ್ತದೆ.

ತಿ ಪುಟ್ಟುವೇಳ್ಕುಮೆಂದು । ಗಿರಿರಾಜನಿಗೆ ಪುಟ್ಟಿ ಸುಸಾಸ್ವತನಪ್ಪ ಪುರ್ಷಂ ಬೇಳ್ಕುಮೆಂದು
ಗಿರಿಯನೇರಿ ತಪಸ್ಸಂ ಮಾಳ್ಪನೆಂದು ಬೆಟ್ಟದ ಸಮೀಪಕ್ಕೆ ಬಂದುಪುವಾಗ
ಳಾ ಪರ್ವ್ವತಮ್ಮೆಂತಿರ್ದ್ದುದೆಂದೊಡೆ ಮೊಲ್ಲೆ ಪಾದರಿ ಮರುಗ ಮಲ್ಲಿಗೆ। ಮಾವು ಕಾ....
ಳುಮಾಲೆ ಕೇತಕಿ ಜಾತಿಮಾವಿನ ಚಂದನವನ ಅಸೋಕಯಲಿಯತಾವ .....
ಳನ ತಡಿಯಲೇಕ ಪದೋರ್ದ್ಧಬಾಹು ಪಂಚಾಗ್ನಿಯೆ ವಾದಿಯಾಗನೇಕೊ........
ಂ ಮಾರ್ವ್ವಂ ನಂದನ ವನದಲ್ಲಿ ಹುಲಿಗಂ ನರಿಗಂ ಸಿಹ್ವಕ್ಕಂ । ಮಾನೆಗಂ ಕಾಳೆಕ್ಕಿ
ಂ ಪಾವಿಗಂ ಮುಂಗುರಿಗಂ ಕಾಗೆಗಂ । ಗೂಗೆಂ ಕೇಳಿಯಾಗಿ ದೇವಿಯ ತಪ ಪ್ರಬ್ರ......
ವಿಯತಬಪ ನಿರ್ವ್ವಿಘ್ನದಿಂದುತ್ತರೋತ್ತರ ಮಾಡಿ ನಡೆವುತ್ತಿರಲನಂತಕಾಲಮಾಕೈಳಾ....
ಯೆನಿಸಿದ ಮಹಾದೇವಂ । ಸಿದ್ಧ ವಿದ್ಯಾಧರ ಗರುಡ ಗಾಂದರ್ವ್ವ ಕಿಂನರ ಕಿಂಪು.....
ಸಿ ವಡ್ಡೋಲಗಂಗೊಟ್ಟು ಕುಳಿರ್ದ್ದು ಬೇಂಟ್ಯಯರ್ತ್ಥಿಯಿಂ ಬೇಡನಾಗಿ । ದೇವರ್ಕ್ಕಳಂ ಬೆ...
ಡಿ ಕಾಮಂದೇವಂ ಬೆರೆಸಿ ಪೊರಂಮಟ್ಟು ದೇವಿಯಿರ್ದ್ದ ಬನಂಗಳೊಳ
ಬರಲನೇಕ ವ್ರಿಕ್ಷ ಪಕ್ಷಿಜಾತಿಯಂ [ಂ] ಸೋಬಿಸುವ ಪರ್ವ್ವತಮಂ ಕಂಡಿ
ತಮಂ ನೋಳ್ಪನೆಂದು ನೋಡುತ್ತಂ ಬಪ್ಪಗ । ದೊಂಟಿವೈರಿಗಳಪ್ಪ ಮೃಗಂಧ
ರ್ವ್ವಳು ತಮ್ಮೊಳಗೆ ಕಳೆಯಾಗಿರ್ದ್ದುದಂ ಕಂಡೆನೆಂದುದೊಂದು ಕಾರಣಮಾಗಲೆ
ವೇಳಕುಮೆಂದು । ಶ್ರಮಮನಾರಿಸಿ ಕಾರಣಮಂ ನೋಳ್ಪೆಂದು ಬಪ್ಪಾಗ ಕೊಳನ
ತಡಿಯಲೇಕಪಾದೋರ್ದ್ಧ ಪಂಚಾಗ್ನಿಯ ನಡುವಿರ್ದ್ದ ಮೋನಬ್ರತದಿಂ [ದಿ]ರ್ದ್ದ ಕಂನೆಯಂ
ಕಂಡು ನೀನಾರ್ಗ್ಗೆ[ೕ] ಬನದೊಳ ಏ ನಿಮಿತ್ತಂ ತಪಸ್ಸಂ ಮಾಳೆಯೆಂದು ಬೆಸಗೊ[ಂ]ಡಡೆ ತಂ
ನ ಬ್ರತಂ ಕಿಡುಗುಮೆಂ ನುಡಿಯದಿರಲ । ಮೂರ್ತ್ತಿಮಹಾದೇವಂ ನೀನಾರ್ಗ್ಗೆಯೆ
ಂದು ಬ್ಯಸಗೊಂಡಡೆ । ಯಾಂ ಸಕಳ ಪರ್ವ್ವತಾದೀಶ್ವರನಪ್ಪ ಗಿರಿರಾಜನ ತನೂ
ಜೆಯೆಂದೆನಲು । ಯಕ್ಷರಾಕ್ಷಸ ಗರುಡ ಗಾಂದ(ಧ) ರ್ವ್ವ ಕಿಂನರ ಕಿಂ
ಪುರ್ಷರ್ವ್ವೆರಸಿ । ಸಮಸ್ಯ ರಿಷಿಸಮೂಹಂಗಳುಂ ದೇವರ್ಗ್ಗೆ ಕನ್ನೆಯಂ ವಿವಾ
ಹಂ ಮಾಳ್ಪಮೆ[ಂ]ದು ರಿಶಿಕುಲ ಕಂನ್ನಿಕೆಯಂದು ಕಂಡು ಗಿರಿರಾಜನಲ್ಲಿಗೆಯ
ಟ್ಟಿಮೆಂಬುದುಂ ಕಾಮದೇವನ ಮದನಮೋಹನ ಸಂತಾಪನ ವಶೀಕರಣಮೆಂಬ
ಯಿದರೊಳಂ ಬಿಂಬಿಸದೆ ದೇವಾದಿದೇವಂ ತನಗೊಲ್ದುದನರಿದು ಪರಿದುಂ ಸಂ[ತೋಷಂ]ಬ
ಟ್ಟು ಗಿರಿರಾಜನಲ್ಲಿಗಾನಾರನಟ್ಟುವಮೆಂದಾಳೋಚಿಸುವುದುಂ । ವುಪಾಯದಲ್ಲಿ
ಪಿರಿಯನಪ್ಪ ನಾರಾಯಣನಂ । ಪುರಾಣಪುರುಷನೆನಿಸಿದ ಬ್ರಹ್ಮನುಂ ।
ಬುದ್ದಿಯಲು ಪಿರಿಯನಪ್ಪ ಬ್ರೆಹಸ್ಪತಿಯುಂ ದೇವೇಂದ್ರನೆಂಬ ನಾಲ್ವರಂ ಕರದು
ಕನ್ನೆಯ ಪಿತನಪ್ಪ ಗಿರಿರಾಜನಲ್ಲಿಗೆ ಹೋಗಿ ಮಹಾದೇವಂ ಕೂಸಂ ಬೇಡಿದನೆಂ
ದು ಪೋಗಿಮೆಂಬುದುಂ ಪೊರಮಟ್ಟು ಬಂದು ಗಿರಿಯಂ ಪೊಕ್ಕರಮನೆಯಂ ಬಾಗಿಲ

ಲಿ ನಿಂದಿರ್ಪ್ಪುದುಂ ಪಡಿಹಾರ ಬಂದಿರಿದೇನೆಂಬುದುಂನಿಂಯಾಳ್ದನಪ್ಪ ಗಿರಿರಾ
ಜನಲ್ಲಿಗೆ ಪೋಗಿ ಮಹಾದೇವರ ಬೆಸದಿಂ ಹರಿಬ್ರಹ್ಮ ಬ್ರಹಸ್ಪತಿ ದೇವೇಂದ್ರ
ಬಂದರೆಂದು ಬ(ಬಿ)ನ್ನಪಂ ಮಾಡೆನಲು । ಪಡಿಹಾರಂ ಪೋಗಿ ಕಯ್യಂ ಮುಗಿದು ಗಿರಿರಾ
ಜಂಗೆ ಬಿಂನಪಮನಲು ಕೈಳಾಸ[ವ]ಸನಟ್ಟಿದೊಡೆ ಆ ಹರಿಯುಂ ಬ್ರಹ್ಮನುಂ ಬ್ರ
ಹಸ್ಪತಿಯುಂ ದೇವೇಂದ್ರನುಂ ಬಂದರೆಂದು ಬ(ಬಿ)ನ್ನಪಂಗೆಂಯ್ಯಲು ಸೀಘ್ರಂ ಬನ್ನಿಮ
ಂಬುದು ಪಡಿಹನವ್ವಂನ್ನಿಮಂಬುದು ಗಿರಿರಾಜಂ ಪ್ರತ್ಯುತ್ಥಾನಂಗೆಂಯ್ದು ಅ
ರ್ಘ್ಯಪಾದ್ಯಂಗಳಂ ಕೊಟ್ಟು ಬಸನನೆಂದು ವಿನಯದಿಂದಿರೆ ಸಾಸ್ವತನಪ್ಪೀಶ್ವರ
ಂ ಕೂಸಂ ಬೇಡಿಯಟ್ಟಿದನೆಂಬುದು । ಮಾಕಂನೆ ಸಾಸ್ವತನಪ್ಪಿಸ್ವರನಾ
ಗಲೆ ವೇಳ್ಕುಮೆಂಬುದು ತ[ಪ]ಸ್ಸಂ ಮಾಡುರಿ(ರಿ)ರ್ದ್ದಳೆಂನ ಕ[ಂ]ನ್ನೆಯ ಮನೋರಾಗ
ಮಾದುದೇಂ ಕೂ
ಸಂ ಕೊಟ್ಟನೆಂಬುದುಂ ಗಿರಿಪು[ರ *]ಮಂ ಪೊರಮಟ್ಟು ಕೈಳಾಸವಾಸಿಯಲ್ಲಿ ವಂದು ಪೊ
ಡವಡುವುದುಂ ದೇವಂ ಗಿರಿರಾಜೆನೆನೆಂಬುದುಂ ಕೂಸಂ ಕೊಟ್ಟನೆಂದು ದೇವಾಯ
ನಲು ದೇವಂ ಮದುವೆಯಾಗಲುದ್ಯುಕ್ತಚಿನ್ತಾನಾಗಿ ಕಂನೆತಮ್ಮಯ್ಯನಲ್ಲ(ಲ್ಲಿ)ಗೆ ವೆಂದು ಬ
ಯಸದ ಗ[ಂ *] ಡನಾದನಾಂಗೆ ಕುಡಮೆಂಬುದುಮಂತೆಗೆಯ್ವನೆಂಬುದು ಅಂನೂದೇ
ವರದೇವಂ ನಿಜದಿಂ ಶ್ರಗಾರಂ ಮಾಡಿದಂತಿರಲು ಅಷ್ಟಲೋಕ ಪಾಳಕಾದಿ ತ್ರಯ
ತ್ರಿಂಶದ್ದೇವರು ತಮ ತಮಗೊಪ್ಪೆ ಶ್ರಿಂಗಾರಂ ಮಾಡಿ ನಮರತ್ನಂಗಳ ವಸ್ತುಕಾರ
ಂ ಮಾಡಿ ದೇವಾಂಗವಂಸ್ತ್ರಂಗಳಂ ಪೊಂನ್ನ ಪರ್ಯ್ಯಣದಲಿಕ್ಕಿಸಿದ ವಿದ್ಯಾದ
ರರ್ಪ್ಪಿಡಿದು ದೇವದೇವಂ ನಂದಿನಾಥನನೇರಿಸಿ ಕನ್ನಯ ದೇವದುಂದುಭಿ
ಯಂ ಪೊಯ್ಯುತ್ತ ಪುರಮಂ ಪೊಕ್ಕೂ । ಪುರವೀಥಿಇಯೊಳಗಣಿಂ ಬಂದೆರಮ
ನೆಯಂ ಪೊಕ್ಕು ವಿವಾಹಮಂಟದು(ಪ)ದ ಜಗಲಿಯಲ್ಲಿ ವಸ್ತುಕಾಕಮನಿಳಿಪಿ ವಿವಾ
ಹಮಂಟಪದೊಪ್ಪಮಂ ದೇವಾದಿಸೇವರ್ಕ್ಕಳುಂ ಸೋಭಾಕಾರಮಾದುದೆಂದು ನೋಡುತ್ತಿ
ಪ್ಪೆಂನೆಗಂ ಗಿರಿರಾಜಂ ದೇವಗೆ ಸಾಷ್ಟಾಂಗವೆರಗಿ ಪೊಡೆವಟ್ಟು ಪಟ್ಟವಣಿಯಮ
ಗೆ ಪಸೆಯಂ ಪಾಸಿ ಕುಳ್ಳಿರಿಸಿವುದುಂ ದೇವಂ ಗಿರಿರಾಜಗಿಂತೆಂದೆಂ । ಕಯಿದಾ
ರೆಯನೆರೆಯಲು ಕಳಶವಂ ಜಗಲಿಗ(ಗೆ) ಸೋಭೆಯಪ್ಪ ಹೂಜೆ ಭೃಂಗಾರಿ ಯಾವಡೆಯೆ
ಂಬುದು ಗಿರಿರಾಜಂ ತಂನ ದಿಭ್ಯದ್ಯಾನದಿಂ ನೋಡಿ ನಾರಾಯಣದೇವರ ಕಯ್ಯ ಚಕ್ರ
ಮಂ ತಿಗುರಿಯಂ ಮಾಡಿ ಬ್ರಹ್ಮರ ವೇದಪೊಸ್ತಕದ ಕಂಭಿಯಂ ಬಾಂಬ ಕಂ
ಭಿಯಂ ಮಾಡಿ ಮಹಾದೇವರ ಕಯ್ಯ ಲಾಕುಳಮಂ ಬಾಂಬ ಕೋಲಂ ಮಾಡಿ ದೇವರ ಕ
ಚ್ಚುಟುಮಂ ಬಂನಸಿಲೆಯಂ ಮಾಡಿ ಬ್ರಹ್ಮರ ಕ್ರಿಷ್ಣಾಜಿನಮಂ ಮರ್ಮ್ಮಾಮಾ
ಡಿ ತಂಮ ಕೊರಲ ಯಜ್ಞೋಪವೀತಮಂಕೊರೆದಾರಂ ಮಾಡಿ ಮಹಾದೇವರ

ಜೆಡೆಯ ಸೂತ್ತದ ವುತ್ತರಿಗೆಯಂ ಸ್ಮತಂ ತ್ರಿಪುರಾಂತಕಂ ತ್ರಿಪುರ
ಮಂ ಸುಟ್ಟುಕೊಂಡ ಪೆಸರ ಕರೋಟಿಯಂ ಕರೋಟಿ ಮಾಡಿ । ಆ ರಾಕ್ಷಸರ ಕಂನಡಿ
ಯೆಲ್ವಂ ಸಣುಹಂ ಮಾಡಿ । ಪರಡಿನೆಲ್ವಂ ಗುಂಡಿಗಳಂ ಗುಂಡಂ ಮಾಡಿ ಆ
ಧಾರಾಮನಾಧಾರಂ ಮಾಡಿ ಜಪದಮಣಿಯಂ ಮಣಿ ಮಾಡಿ । ಸೂರ್ಯ್ಯದೇವರ
ರಥದಲೊಂದು ಗಾಲಿಯಂ ಹೊಳೆಯಂ ಮಾಡಿ ಕು[ಂ *]ಡಲಂದಿಂದಿತ್ತ ಸೂರ್ಯದೇವರಿ
ಗಂದಿಂದಿತ್ತ । ಸೂರ್ಯದೇವರ ರಥಕೊಂದೆ ಗಾಲಿಯಾದುದು ಯಮನ ಕೋಣನಿಂ
ವ್ಮಣ್ಣಂ ತರದು ಪದಂ ಮಾಡಿ ಮಿದಿದು ಹ್ರಜೆ ಸೊನ್ನಲಿಗೆಯಂ ಕುಂಭಾವಾದಿಯಾ
ಗಿ ನಾನಾಭಾಂಡಂಗ[ಳ] ಮಾಡಿ । ಪದಂಗೊಳೆ ಸುಟ್ಟು । ಹ್ರಜೆಯನೇಕ ಪ್ರಕಾರಂಗ
ಳಿಂ ಬಂಣ್ಣವಿಟ್ಟು । ತಿಚ್ಚೆಕೊಂಡಿರಲು ರಿಷಿಕಂನೆಚುರುಡೆ ವದುರ ಬೀ
ಯಂ ಪೊಯಿಸ್ಮತಂ ಬಂದು ಪಂಚಬಾಯಿನಂಗಳಂ ಕೊಟ್ಟು ಪೊಂನ
ಪರ್ಯ್ಯಾಣತ(ತು)ಂಬಿದ ತೋರಮುತ್ತಿನ ವಸ್ತುಗಳಂ ಕೊಟ್ಟು । ದೇವಾಂಗವಸ್ತ್ರಮಂ ಪ
ಲವುಂ ತುಡಿಗೆಯನುಡಲುಂ ತುಡುಲುಕೊಟ್ಟು ಹೂಜೆಯಂ ತಂದು ಬ್ರ(ಭೃ)ಂಗಾರಿ
ಯಂ ತಂದು ಕಟ್ಟುವ್ಯದಂ ಗಿರಿರಾಜ ದೇವರ ಪಾದಪ್ರಾಕ್ಷಾಳನಂ ಮಾಡಿ ಯೆಜ್ಞೋ
ಪವೀತಮಂ ಕೊಟ್ಟು ದೂರ್ವ್ವೆಯಂ ಕೊಟ್ಟು ವೇದಮಂತ್ರಮವೋತಂ ಮದುಪ
ರ್ಕ್ಕಂ ಮಾಸೋತ್ರಾಚನಕೆರಡು ದೆವನೊಳಯಿಂಗೆ ಬಿಜಯಂಗೆಯ್ಸಿ ವೇದ
ಮನೋದುತ್ತ ಅಕ್ಕಿಯ ಪೆಡೆಗೆಯನೇರಿಸಿ । ದೇವಿಯ ಮುಂದೆ ಕಯ್ಯಲು ನವ
ರತ್ನಮಂ ಪಿಡಿಯಿಮೆಂದು ಕೊಟ್ಟಡೆ ಸೀರೆವಿಡಿದು ನಿಂದಿರ್ಪ್ಪಂನೆಗಂ ಗರ್ಗ್ಯಾ
ರುಂ ಸಂಕಂಗಿರಿಸಿ । ಬ್ರಹ್ಮರು ಪುಣ್ಯವಹಯಿಮಾಡಲಡ್ಡ ಸೋಸಿವೆಯಂ ಕಳೆಚಿಬ
ಲ್ರೆಡಂ ವೊರ್ವ್ವರೊರ್ವ್ವರ ಮನದಲೊರ್ವ್ವರ ಸೆರೆವಿಡಿವಚಿತಿಟ್ಟು । ಗಿರಿರಾಜ ಕಯಿದಾ
ರೆಯನೆರವುದು ವಿವಾಹಮಂಟಪದ ಜಗಲಿಯಲಿಗೆ ವಂದು ಪಟ್ಟವಣಿಯೆಲು
ಪಾಸಿದ ದೇವರ ಬಲದ ದೆಸೆಯಲು ದೇವಿ ಕುಳ್ಳುರ್ಪ್ಪಂನೆಗೆಂ ವಿಶ್ವಾಮಿತ್ರನಿಂನೆಹಗೆಂದು
ಅಶ್ವತಪತ್ರಂಗಳ ತಂದು ಜಾಜನಲು ಸಮ ಚತುರಶ್ರ ಮಂಡಳಮಂ ಮಾಡಿ
ಅಗ್ರೋದಕವಂ ತೀವಿದ ಕಳಸಮಂ ಮುಂದಿಟ್ಟು ಕುಳ್ಳಿಪಂನೆಗಂ ವಶಿಷ್ಟ ಮಹಾಮನಿ
ಅಗ್ನಿಯಂ ಮುಚ್ಚಿ ತಂದು ಮಂಡಲದ ಮೇಲೆ ತಂದಿಳಿಪಿ ಮುಂದಿಟ್ಟು ಕ(ಕು)ಳ್ಳಿರ್ಪ್ಪಂನೆಗಂ
ವಶಿಷ್ಟ ಮಹಾಮುನಿ ಅಗ್ನಿಯಂ ಮುಚ್ಚಿ ತಂದ(ದು) ಮಂಡಲದ ಮೇಲೆ ತಂದಿ
ಳಿಪುವುದುಂ ವಿಶ್ವಾಮಿತ್ರ ತಾಂಬ್ರದ ಬಟ್ಟಲಲಗ್ರೋದಕಮಂ ಕೊಂಡು ತಾಂಬ್ರ
ದ ಬಟ್ಟಲಲುಲ್ಯೆತಮುಂ ಅಶ್ವತಪತ್ರಮಂ ಕೊಂಡು ತಂವೊಡನೆಯ ರಿಷಿಗೆ
ಳಂ ಸ್ವಾಹಾಯೆಂದು ಮಂತ್ರಗಳಿಂ ಹೇ(ಹೋ)ಮಂಬೇಳ್ವು ಸಂಕಲಿಕಯಂ ಬಿಟ್ಟು ಬದ(ಲ)ದೆ
ಸೆಯ ದೇವಿಯನೆಡಕ್ಕೆ ತಪ್ಪುದುಂ ವಿಸ್ವಾಮಿತ್ರರಿಷಿ ಸಮೂಹಂಗಳುಂ ವೇ

ದಾರ್ತ್ಥದಿಂದಗ್ನಿಯಂ ಸೂತಿಸಿಯಿಂ ನವಗ್ರಹ ಪೂಜೆಯಂ ಕೊಟ್ಟು ನಾಗವ
ಲಿಯಂ ಮಾಡಿ ದೇವರು ಕೆಎಳಾಸಕೆ ಬಿಜಯಂ ಗೆಯ್ಯಲುದ್ಯುಕ್ತಚಿತ್ತರಾಗಿ ದೇವಿ
ಯುಂ ತಾನುಂ ನ[ಂ *]ದಿಕೇಶ್ವರನನೇರಿಕೊಂಡು ಸಮಸ್ತ ದೇವರಿ(ರು)ಷಿ ಸಮುಹಂ ಬೆರ
ಸಿ ನಿಂದಿರ್ದ್ದು ಗಿರಿರಾಜನಂ ಕಲೆದಿಂತಿ ಹೂಜೆ ಸೊನಲಿಗೆಯಂ ಬಿಂಗಾರಿಯಂ ಮಾಡಿ
ತಂದ ಎಟ್ಟಕಿಡಲಾಗದೆಂದು ನೀಂ ಸಾಲೆಸಾಸಿರ್ವ್ವರೆಂಬ ಸಮಯದ ಪೆಸರಂ ಕೊ
ಟ್ಟು ಅಂದಿಂದಿತ್ತ ಚಕ್ರದ ಗಳಯಂ ಕೊಟ್ಟಯಿಸಾವಂತರೆಂಬ ಪೆಸರಂ
ಕೊಟ್ಟು ಚಲಮಂ ಕೊಂಡಡುವುದು ಬಲುಹಂ ಕೊಂಡಾಡುವುದು ಗ್ರಾಮ ನಾ[ಡು ಕೇ]
ಡ ಖರ್ವ್ವಡ ಮದಂಬ ಪಟ್ಟಣ ದ್ರೋಣಾಮುಖ । ಸಂದೋಹನಮೆಂಬಷ್ಟ ವಿದ ಗ್ರಾ[ಮಂಗ]
ಳಲು ಸರ್ವ್ವಪ್ರಾಕಾರಾರಮಾಗೆಂದು ನಿಂಮಾಡಿ ಸ್ವಕುಂಭವೊಳು ಪಂಬೊ . . . . . . .
ದಿಯನಿ ಮೂವತಾರುಂ ಭಂಡಂಗಳ ಪುಟ್ಟಿ ಲೋಕಕ್ಕುಪಕಾನರ ಮಾಡುಗೆ . . . . . .
ರೂಗಿರಾಜಂಗೆ ಸಮಯಬಲುಹಂ ಕೊಟ್ಟು(ಟ್ಟ)ರದಿಂದಿತ್ತ ನರಪಾಳನಾ ದು . . . . . .[೧೭]

ಕುಂಬಾರ ವಂಶದ ಬಗ್ಗೆ ಶಾಸನವೊಂದು ಹೀಗೆ ಹೇಳುತ್ತದೆ. ಕೃತಯುಗದಲ್ಲಿ ಸುಶಾಶ್ವತನಪ್ಪ ಪುರುಷಬೇಕೆಂದು ಗಿರಿಯನೇರಿ ತಪಸ್ಸು ಮಾಡಿದ ಗಿರಿರಾಜನ ಮಗಳನ್ನು ಬೇಟೆಯಾಡಲು ಬಂದ ಶಿವ ಮೆಚ್ಚಿ ವರಿಸಬಯಸುತ್ತಾನೆ. ವಿವಾಹ ಆರಂಭವಾದಾಗ ಮದುವೆ ಮಂಟಪದಲ್ಲಿ ಕೈ ಧಾರೆಯೆರೆಯಲು ಕಲಶ, ಜಗಲಿಗೆ ಶೋಭೆ ತರುವ ಹೂಜೆ. ಭೃಂಗಾದಿಗಳು ಆಗಬೇಕಲ್ಲ' ಎಂದು ಶಿವ ಕೇಳಿದಾಗ ಗಿರಿರಾಜ ತನ್ನ ದಿವ್ಯಧ್ಯಾನದಿಂದ ವಿಷ್ಣುವಿನ ಚಕ್ರವನ್ನು ತಿಗಿರಿಯಾಗಿ ಬ್ರಹ್ಮನ ವೇದ ಪುಸ್ತಕದ ಕಂಭಿಯನ್ನು ಕಂಭಿಯಾಗಿ, ಶಿವನ ಲಾಕುಳವನ್ನು ಕೋಲಮಾಡಿ, ಯಜ್ಞೋಪವೀತವನ್ನು ಕೊರೆದಾರ ಮಾಡಿ, ಯಮನ ಕೋಣನಿಂದ ಮಣ್ಣನ್ನು ತಂದು ಹದಮಾಡಿ, ಮಿಡಿದು ಹೂಜೆ, ಸೊನ್ನಲಿಗೆ, ಕುಂಭಾದಿ ನಾನಾ ಭಂಡಾರಗಳನ್ನು ತಯಾರಿಸಿ, ಹದಗೊಳ್ಳುವವರೆಗೆ ಸುಟ್ಟು ಹೂಜೆಗೆ ಅನೇಕ ಪ್ರಕಾರವಾಗಿ ಬಣ್ಣವಿಟ್ಟು ಶಿವನ ಅಪೇಕ್ಷೆಯನ್ನು ಪೂರೈಸುತ್ತಾನೆ. ವಿವಾಹ ನಡೆದು ಶಿವನು ಗಿರಿಜೆಯೊಂದಿಗೆ ಕೈಲಾಸಕ್ಕೆ ಹೊರಡಲು ವಿದ್ಯುಕ್ತನಾದಾಗ ಗಿರಿರಾಜನನ್ನು ಕರೆದು 'ಹೂಜೆ' ಸೊಂನಲಿಗೆ ಬೃಂಗಾರಿಯನ್ನು ಮಾಡಿ ತಂದ ವೃತ್ತಿ ಕೆಡಲಾಗದು' ಎಂದು ಹೇಳಿ ಅವನ ಸಂತತಿಗೆ 'ಸಾತಿ ಸಾಸಿರ್ವರೆಂಬ ಸಮಯದ ಹೆಸರು ನೀಡಿ ನಂತರ ಚಕ್ರಗಳೆಯನ್ನು ಕೊಟ್ಟು' ಅಯಿಸಾವಂತರೆಂಬ ಹೆಸರು ಕೊಟ್ಟು ಸರ್ವ ಪ್ರಕಾರದ ಗ್ರಾಮಗಳಲ್ಲಿ ಹದಿನೆಂಟು ಪಟ್ಟಣ, ಹದಿನೆಂಟು ಯೋಗಪೀಠ ಹದಿನೆಂಟು ಕಣಿಗಳನ್ನು ಋಷಿಸಮೂಹ ಕೊಂಡಾಡುವುದು, ಕುಂಬಾರಕಾರರ ಹದಿನೆಂಟು ಕಣಿಗಳನ್ನು ಸಪ್ರಶಸ್ತಿ ಹೆಸರಿಸಿ, ಅವುಗಳಿಗೆ ಅಧೀಕ್ಷವೆನಿಸುವ ಮೂವತಿಭಾಸಿರಕೆಲಶಿಯ ಪ್ರಶಸ್ತಿ ನೀಡಿದೆ. ಇಲ್ಲಿಗೆ ಒಂದು ಸಮಯ ಶಾಸನ ಪುರಾಣ ಮುಕ್ತಾಯವಾಗಿ ಇನ್ನೊಂದು ಪುರಾಣ ಪ್ರಾರಂಭವಾಗುತ್ತದೆ.

ದೇವಾಸುರರು ಅಮೃತ ಮಂಥನ ಮಾಡುವುದೆಂದು ನಿರ್ಧರಿಸಿ ಹರಿಯನ್ನು ಅಮೃತ ತರಲು ಅಟ್ಟುತ್ತಾರೆ. ಆದರೆ ಅಮೃತವನ್ನು ಕಡೆಯಲು ಪಾತ್ರೆ ಬೇಕಲ್ಲ ದೇವಾಸುರರು ಶಿವನೆಡೆಗೆ ಓಡುತ್ತಾರೆ. ಅವನಲ್ಲಿ ತಮ್ಮ ಅಳಲನ್ನು ತೋಡಿಕೊಳ್ಳುತ್ತಾರೆ. 'ಗಿರಿಜಾ ಕಲ್ಯಾಣ' ಸಂದರ್ಭದಲ್ಲಿ ಗಿರಿರಾಜ–ಕುಂಭಾಕಾರ ಕಲೆಯಲ್ಲಿ ನೈಪುಣ್ಯ ತೋರಿದ್ದಾನೆ. ಆದ್ದರಿಂದ ಶಿವ ದೊಡ್ಡ ಕುಂಭವನ್ನು ತಯಾರಿಸಿ ತರಲು ಗಿರಿರಾಜನಿಗೆ ಆದೇಶಿಸುತ್ತಾನೆ. ಆಗ ಆತ ಹಾಗೆ ಮಾಡಿದ ಮೇಲೆ ಅಮೃತವನ್ನು ಕಡೆದಾಗ ಹಲವು ವಸ್ತು ವಿಶೇಷಗಳು ಹುಟ್ಟಿದವು. ಅವುಗಳಲ್ಲಿ ಹದಿನೆಂಟು ಪಟ್ಟಣ, ಹದಿನೆಂಟು ಜಾತಿಗಳು ಸೇರಿದ್ದವು. ದೇವತೆಗಳಿಗೆ ತಂತಮ್ಮ ಪಾಲನ್ನು ಶಿವ ಹಂಚಿದ, ಹದಿನೆಂಟು ಜಾತಿಗಳನ್ನು ಭೂಮಿಯ ಮೇಲೆ ನಿಲ್ಲಿಸಿದ. ಕುಂಭ ಮಾಡಿಕೊಟ್ಟಿದ್ದಕ್ಕೆ ಪ್ರತಿಫಲವಾಗಿ ಗಿರಿರಾಜ ಭಲ್ಲುಕಗೋಲು, ಮಡಿಕೆ ಬೆಲ್ಲ ಕುಂಚಳಿಕೆ ಮೂವತ್ತಾರು ಭಾಂಡ, ಗುಡಿ (ಧ್ವಜ), ಹಾರೆಯಕೋಲು, ಪಂಚಲೋಹ ಇತ್ಯಾದಿಗಳನ್ನು ಹೇರಲು ಕೋಣವನ್ನು ಶಿವನಿಂದ ಪಡೆದು ಗಿರಿಪುರಕ್ಕೆ ಮರಳಿ ಆಯ್ಸಾವಂತರ್ಗೆ ಕೊಟ್ಟ. ಈ ಶಾಸನವನ್ನು ಹೇಳಿದವನು ಶಿವ. ಅದನ್ನು ಬರೆದುಕೊಂಡವ ಲಿಪಿಕಾರ. ಬ್ರಹ್ಮ ಶಿವನಿಂದ ಶಾಸನವನ್ನು ತೆಗೆದುಕೊಂಡು ವಿಶ್ವಾಮಿತ್ರನು ಕುಂಬಾರರಿಗೆ ಕೊಡುವಂತೆ ಹೇಳಿ ಗಿರಿರಾಜನಿಗೆ ಕೊಟ್ಟನು. ಹೀಗೆ ಕುಂಬಾರ ಕುಲವು ಸಾಕ್ಷಾತ್ ಸೃಷ್ಟಿಕರ್ತನಿಂದಲೇ ಉಗಮವಾದದ್ದು ಎಂದು ಆನೆಗೊಂದಿಯಲ್ಲಿ ದೊರೆತ ತಾಮ್ರಶಾಸನ ಸುದೀರ್ಘವಾದ ಪೌರಾಣಿಕ ಅಂಶವನ್ನು ಹೇಳಿದೆ.

ಈ ಶಾಸನವನ್ನು ಕುರಿತು ಚಿದಾನಂದಮೂರ್ತಿಯವರು ಹೀಗೆ ಹೇಳಿದ್ದಾರೆ. "ವಿವಾಹ ಪುರಾಣವು ಕುಂಬಾರರ ಕುಲವು ಆರಂಭವಾದುದರ ಕತೆಯನ್ನು ನಿರೂಪಿಸುತ್ತ ಅವರನ್ನು ಗಿರಿರಾಜನ ವಂಶದವರೆಂದೂ, ಅವರ ಅಕ್ಕ ಗೌರಿದೇವಿಯೆಂದೂ ಕಲ್ಪಿಸುತ್ತದೆ. ಆ ಮೂಲಕ ಶಿವ ತಮಗೆ ಭಾವನಾಗಬೇಕೆಂದು ಕುಂಬಾರರು ಹೇಳಿಕೊಂಡು ಅನುಭವಿಸುವ ಆತ್ಮವಿಶ್ವಾಸವನ್ನು ಕಲ್ಪಿಸಿಕೊಳ್ಳಬಹುದು. ಜನರಿಗೆ ತಾವು ಇಲ್ಲದೆ ಹೋಗಿದ್ದರೆ ಅವರ ಮದುವೆಗಳಾಗುವ ಮಾತಿರಲಿ. ಅವರಿಗೆ ಸ್ನಾನ, ಊಟಗಳೂ ಇರುತ್ತಿರಲಿಲ್ಲವೆಂದು ಹೇಳುವುದರ ಮೂಲಕ ತಾವು ಸಮಾಜದ ಅತ್ಯಂತ ಮುಖ್ಯ ಭಾಗವೆಂದು ಕುಂಬಾರರು ತಮ್ಮನ್ನು ಪ್ರತಿಷ್ಠಾಪಿಸಿಕೊಳ್ಳುವುದರಲ್ಲಿ ಅರ್ಥವಿದೆ"[೧೮] ಎಂದು ಹೇಳುತ್ತಾರೆ.

ಹೀಗೆ ಅನೇಕ ಅರಸರು ಸಾಮಂತರು ಇನ್ನು ಕೆಲವು ಜನ ತಮ್ಮ ಕುಲದ ಬಗ್ಗೆ ವಂಶದ ಬಗ್ಗೆ ಪೌರಾಣಿಕವಾಗಿ ಹೇಳಿಕೊಳ್ಳುವ ಪರಿಪಾಟ ಬೆಳೆದುಬಂದಿದೆ. ಅರಸರು ಸಾಮಂತರು ತಾವು ಮಾಡಿದ ದಾನ ಧರ್ಮ ಕಾರ್ಯಗಳನ್ನು ಶೌರ್ಯ ಸಾಹಸಗಳನ್ನು ಹೇಳುವಾಗ ಅವರು ತಮ್ಮನ್ನು ಪೌರಾಣಿಕ ವ್ಯಕ್ತಿಗಳಿಗೆ ಸಮೀಕರಿಸಿಕೊಂಡು ಶಾಸನಗಳನ್ನು ಬರೆಸುತ್ತಿದ್ದರು. ಇಂತಹ ಪರಿಪಾಟ ಬೆಳೆಯುವುದಕ್ಕೆ ಕಾವ್ಯಗಳೂ ಕೂಡ ಒಂದು ಬಗೆಯಲ್ಲಿ ಪ್ರೇರಣೆಯನ್ನು ನೀಡಿವೆ ಎನಿಸುತ್ತದೆ.

ಪಂಪಭಾರತದಲ್ಲಿ ಅರ್ಜುನನೊಂದಿಗೆ ಅರಿಕೇಸರಿಯ ಸಮೀಕರಣ, ಗಧಾಯುದ್ಧದಲ್ಲಿ ಭೀಮನೊಂದಿಗೆ ತೈಪಲನ ಸಮೀಕರಣಗಳನ್ನು ಗಮಿಸಿದಾಗ ಕಾವ್ಯಗಳಲ್ಲಿ ಅರಸರ ಸಮೀಕರಣ ಮಾಡುವುದಕ್ಕೆ ರಾಜಾಶ್ರಯ ಕಾರಣವಾದಂತೆ ಶಾಸನಗಳಲ್ಲಿನ ಸಮೀಕರಣವು ಕೂಡ ಪುರಾಣವನ್ನು ಇತಿಹಾಸಗೊಳಿಸುವ ಪ್ರಕ್ರಿಯೆಯೆಂದೇ ಹೇಳಬೇಕಾಗುತ್ತದೆ.

* ವ್ಯಕ್ತಿ ಸಂಬಂಧಿ ಪೌರಾಣಿಕ ಅಂಶಗಳು

ಶಾಸನಗಳಲ್ಲಿ ವ್ಯಕ್ತಿಗಳನ್ನು ಪೌರಾಣಿಕ ವ್ಯಕ್ತಿಗಳಿಗೆ ಹೋಲಿಸಿ ಬರೆಸಿರುವುದು ಕಂಡುಬರುತ್ತದೆ. ಅರಸರು ಸಾಮಂತರು ತಾವು ಮಾಡಿದ ದಾನ ಧರ್ಮ, ಶೌರ್ಯ, ಸಾಹಸಗಳನ್ನು ಮಹಾಕಾವ್ಯಗಳ ಅಥವಾ ಪುರಾಣ ಪುರುಷರಿಗೆ ಸಮೀಕರಿಸಿದ್ದಾರೆ. ಕಾರಣ ಹಿಂದೆ ಪುರಾಣ ಪುರುಷರಿಗೆ ಇದ್ದ ಗೌರವ ಮತ್ತಾರಿಗೂ ಇರಲಿಲ್ಲ. ಹಾಗಾಗಿ ಅರಸರು, ಸಾಮಂತರು ಇಂತಹ ಗೌರವ ನಮಗೂ ಸಿಗಲೆಂದು ಹೀಗೆ ಅವರಿಗೆ ಸಮೀಕರಿಸಿಕೊಂಡಿರಬಹುದು. ಹಾಗೆಂದ ಮಾತ್ರಕ್ಕೆ ಶಾಸನಕಾರರು ಪುರಾಣವನ್ನು ಹೇಳುವ ಉದ್ದೇಶ ಹೊಂದಿದ್ದರೆಂದಲ್ಲ. ಪೌರಾಣಿಕ ವಿಷಯಗಳನ್ನು ಪ್ರಸ್ತಾಪಿಸುವ ಮೂಲಕ ಪುರಾಣದ ವ್ಯಕ್ತಿಗಳನ್ನು ಇತಿಹಾಸದ ವ್ಯಕ್ತಿಗಳ ಜೊತೆ ಸಂಬಂಧ ಕಲ್ಪಿಸುವ ಮತ್ತು ಪುರಾಣವನ್ನು ಇತಿಹಾಸವಾಗಿಸುವ ಕೆಲಸವನ್ನು ಶಾಸನಕಾರರು ನಡೆಸಿದ್ದಾರೆ.

ಶಾಸನವೊಂದರಲ್ಲಿ ಬಿಬ್ಬರಸನನ್ನು ಹೀಗೆ ವರ್ಣಿಸುತ್ತದೆ.

"ಕೊಪಣ ಪುರವರಾಧೀಶ್ವರಂ । ಅಲಂದೆ ವೆಡಂಗಂ । ಮನ್ನೆಯಸಿಂಗಂ।
ಸತ್ಯಯುಧಿಷ್ಠರಂ । ಭಯಲೋಭ ನಿಷ್ಠುರಂ । ಸಂಗ್ರಾಮ ಷಣ್ಮುಖಂ ।
ಪರಿವಾರ ಶ್ರೀಮುಖಂ । ಬಂಡರ ಭಾವಂ । ಮಱೆವುಗೆ ಕಾವಂ।
ದೇವಗುರುದ್ವಿಜ ಪಾದಾರಾಧಕಂ । ವೈರಿ ಬಳಸಾಧಕಂ। ದಾಡಿಗ
ಬೇಂಟೆ ಕಾವಿಂ।"[೧೯]

ಸತ್ಯದಲ್ಲಿ ಯುಧಿಷ್ಠರ, ಭಯಲೋಭ ನಿಷ್ಟುರ ಯುದ್ಧದಲ್ಲಿ ಷಣ್ಮುಖಂ, ಶತ್ರುಗಳಿಗೆ ಯಮನಿದ್ದ ಹಾಗೆ. ಆಶ್ರಯ ಬೇಡಿ ಬಂದವರನ್ನು ಕಾಯುವಂತವನು. ಬೇಟೆಯಲ್ಲಿ ಯಾರು ಇವನಿಗೆ ಸರಿಸಾಟಿ ಇಲ್ಲವೆಂದು ಶಾಸನ ವರ್ಣಿಸುತ್ತದೆ.

ಯುಧಿಷ್ಠರ ಪಾಂಡುರಾಜನ ಹಿರಿಯ ಹೆಂಡತಿಯಾದ ಕುಂತಿಯಲ್ಲಿ ಯಮನ ಮೂಲಕ ಜನಿಸಿದವ. ಅಜಾತಶತ್ರು, ಧರ್ಮರಾಜ, ಧರ್ಮಪುತ್ರ, ಸತ್ಯಮಾರ್ಗದಲ್ಲಿ ರಾಜ್ಯಭಾರ ಮಾಡುತ್ತಿದ್ದ ಎನ್ನಲಾಗಿದೆ. ಅರಸರು ಇಂತಹ ಅನೇಕ ಪೌರಾಣಿಕ ವ್ಯಕ್ತಿಗಳನ್ನು ಸಮೀಕರಿಸಿಕೊಂಡು ಶಾಸನಗಳನ್ನು ಬರೆಸುವುದು ರೂಢಿಯಾಗಿದೆ. ಹೀಗೆ ಮಾಡುವುದರ ಮೂಲಕ ಅವರು ತಮ್ಮನ್ನು ದೈವಸಮಾನರು

ಎಂದು ಬಿಂಬಿಸಿಕೊಳ್ಳುತ್ತಿದ್ದರು. ಜನರು ಇವರನ್ನು ದೈವ ಮೂಲದಿಂದ ಬಂದವರೆಂದು ಹೆಚ್ಚಿನ ಗೌರವ ಕೊಡುತ್ತಿದ್ದರು.

ಯುದ್ಧದಲ್ಲಿ ವೀರರು ತಾವು ಹೋರಾಟ ಮಾಡಿದ ರೀತಿಯನ್ನು ಸ್ಥಳೀಯವಾಗಿ ಪ್ರಚಲಿತದಲ್ಲಿದ್ದ ಪೌರಾಣಿಕ ವ್ಯಕ್ತಿಯೂ ಆದ ಜಮದಗ್ನಿ ಮತ್ತು ಪರಶುರಾಮರನ್ನು ಸಮೀಕರಿಸಿಕೊಂಡಿರುವ ವಿಷಯವನ್ನು ಶಾಸನವೊಂದು ಹೀಗೆ ಹೇಳಿದೆ.

ಸವದತ್ತಿ ತಾಲೂಕು ಕಚೇರಿ ಆವರಣದಲ್ಲಿರುವ ಶಾಸನವು ಜಮದಗ್ನಿಯನ್ನು ಕುರಿತು ಹೀಗೆ ಹೇಳುತ್ತದೆ.



"ದಿಂ ಗಂಧ ಗಜಂಗಳಿಂ ತುಳಿದು ಕೊಂದಂ ಮಾಯಿದೇವೋತ್ತಮಂ। ಮುಂ
ಜಮದಗ್ನಿರಾಮನಖಿಳ ಕ್ಷಿತಿನಾಥರ ನಿಪ್ಪತ್ತೊಂದು ಸೊಳ್ಮಂಜಿನ
ಗಾಳಿಯನ್ನತವೆ ಕೊಂದವೊಲೀ ಮಹಾದೇವನಾಯಕಂ ಕುಂಜರದಿಂದೆ
ವೈರಿಕುಲಮಂ ತವೇಕೊಂದು ಪಿತಂಗೆ ಮಾಡಿದಂ"[೨೦]

ಜಮದಗ್ನಿಯ ಆಶ್ರಮವನ್ನು ಸಹಸ್ತ್ರಬಾಹು ಕಾರ್ತವೀರ್ಯಾರ್ಜುನನು ತನ್ನ ಸೈನ್ಯದ ಮೂಲಕ ದ್ವಂಸ ಮಾಡಿ ಜಮದಗ್ನಿ ಋಷಿಯನ್ನು ಕೊಂದು ಕಾಮದೇನುವನ್ನು ತೆಗೆದುಕೊಂಡು ಹೋದಾಗ ತನ್ನ ಗಂಡನ ಶವವನ್ನು ನೋಡಿ ರೇಣುಕಾದೇವಿಯು ದುಃಖತಪ್ತಳಾಗಿ ಎದೆಯನ್ನು ೨೧ ಸಲ ಬಡಿದುಕೊಳ್ಳುತ್ತಿರುವಾಗ ಅವಳ ಮಗ ಪರಶುರಾಮನು ಅವಳನ್ನು ಸಾಂತ್ವನಗೊಳಿಸಿ, ತಾನು ಸಹಸ್ರಬಾಹು ಕಾರ್ತವೀರ್ಯಾರ್ಜುನ ಮೊದಲಾದ ಎಲ್ಲಾ ಕ್ಷತ್ರಿಯರನ್ನು ೨೧ ಸಲ ಭೂ ಪ್ರದಕ್ಷಿಣೆ ಮಾಡಿ ನಾಶ ಮಾಡುವುದಾಗಿ ಪ್ರತಿಜ್ಞೆ ಮಾಡುತ್ತಾನೆ. ರೇಣುಕಾ ದೇವಿಯು ತನ್ನ ಗಂಡನ ಚಿತೆಯನ್ನು ಏರಿ ಸಹಗಮನ ಮಾಡುತ್ತಾಳೆಂದು ಸ್ಕಂದ, ಮತ್ಸ, ವಾಯು ಪುರಾಣಗಳಲ್ಲಿ ಉಲ್ಲೇಖವಾಗಿದೆ. ಹೀಗೆ ಪರಶುರಾಮನು ತಂದೆಯನ್ನು ಕೊಂದವರನ್ನು ಹೇಗೆ ಕೊಂದನೋ ಹಾಗೆ, ಸ್ಥಳೀಯ ವೀರರು ತಾವು ಹಾಗೆ ಮಾಡಿದೆವೆಂದು ಅವರಿಗೆ ಸಮಿಕರಿಸಿಕೊಂಡಿರುವ ವಿಷಯ ಶಾಸನದಲ್ಲಿ ಹೀಗಿದೆ.

ದೇವಗಿರಿ ಯಾದವ ವಂಶದ ಪ್ರೌಢಪ್ರತಾಪ ಚಕ್ರವರ್ತಿ ಮಹಾದೇವರಾಯನನ್ನು ಶಾಸನವೊಂದು ಪೌರಾಣಿಕ ಸಂಬಂಧವನ್ನು ಹೀಗೆ ವರ್ಣಿಸುತ್ತದೆ. ಸಹಜವಾಗಿ ಇವನು ಸಾಹಸಪ್ರಿಯನು ವಿಜಯಲಕ್ಷ್ಮಿಪ್ರಿಯನು ಜಯದಲ್ಲಿ ವರವನ್ನು ಪಡೆದವನು, ಭೋಗದಲ್ಲಿ ಪುರಂದರನು ಔದಾರ್ಯವುಳ್ಳವನು, ಭೋಗದಲ್ಲಿ ಮಹೇಂದ್ರನು, ಪ್ರತಾಪದಲ್ಲಿ ಲಂಕೇಶ್ವರನಿದ್ದ ಹಾಗೆ ಇದ್ದನೆಂದು ಪ್ರತಿಜ್ಞೆಯಲ್ಲಿ ಪರಶುರಾಮನಂತಿದ್ದನು. ಶಕ್ತಿ ಸಾಮರ್ಥ್ಯದಲ್ಲಿ ಭೀಮನನ್ನು ಹೋಲುತ್ತಿದ್ದನು. ಅರಸುತನದಲ್ಲಿ ನಾರಾಯಣನಂತಿದ್ದನೆಂದು ಶಾಸನ ಉಲ್ಲೇಖಿಸುತ್ತದೆ.

"ಹೊಯಿಸಣರಾಯ ಕೋಳಾಹಳಾ ಮಾಳವರಾಯ ರಾಜ್ಯಲಕ್ಷ್ಮೀ ಸ್ವ
ಯಂವರ ಸಹಜ ಸಾಹಸ ಸಂಪಾದಿತ ವಿಜಯಲಕ್ಷ್ಮೀವರ
ಧೈರ್ಯಜಿತಮಂದರಾ (ರ) ಭೋಗ ಪುರಂದರ ಯೌದಾರ್ಯತತ್ಪರ
ಸಾಂಬ್ರಾಜ್ಯ ಸಂಭೋಗ ಮಾಹೇಂದ್ರ ಪ್ರತಾಪ ಲಂಕೇಶ್ವರ (ಪ್ರ)ತಿಜ್ಞಾಪರಸು
ರಾಮ ರಾಯಭುಜಭಲ ಭೀಮ ರಾಯನಾರಾಯಣಾವತಾರ"[೨೧]

ತ್ರಿಭುವನಮಲ್ಲನು ಜಯಂತೀಪುರದ ನೆಲೆವೀಡಿನಲ್ಲಿದ್ದಾಗ ಇವನ ಪಟ್ಟದರಾಣಿ, ಮಗ ಯುವರಾಜ ಮಲ್ಲಿಕಾರ್ಜುನನು ತರ್ದವಾಡಿ ನಾಡನ್ನು ಆಳುತ್ತಿದ್ದ. ಆಗ ಮೆಂಡೆಯ ಬರ್ಮಣ ಎಂಬುವವನು ನಿಡುವಣಿಯಲ್ಲಿ ವಿಷ್ಣು ದೇವಾಲಯವನ್ನು ಕಟ್ಟಿಸಿದ. ಇವನನ್ನು ಶಾಸನವೊಂದು ಹೀಗೆ ವರ್ಣಿಸಿದೆ.

"ಸಮಸ್ತ ಭುವನವಿಖ್ಯಾತಂ ಚಾಳುಕ್ಯನ್ವಯ ಪ್ರಸೂತಂ
ನಿರ್ದ್ದಳಿತ್ತೈರಿ ಸಂಘಾತಂ। ಪರಿಜನ ಪಾರಿಜಾತಂ। ರಿಪುರಾಯ
ಕೊವರ ಬಂಗಾರಬಂ। ಬಪ್ಪನಂಕಕಾಬಂ ಕೊಮರಂಕಭಿಮಂ।
ನಯನಾಭಿರಾಮಂ। ರಿಪುಕುಮಾರ ವೇಶ್ಯಾಭುಜಂಗನಯ್ಯಸಿಂಗಂ।
ಶರಣಾಗತ ವಜ್ರಪಂಜರಂ। ಕುಮಾರ ದಿಕ್ಕುಂಜರಂ। ವೀರ ವಿದ್ಯಾಧರ
ಸಕಳಕಳಾಧರಂ। ಪದ್ಮನಾಳಗಿರಿ ವಜ್ರದಣ್ಣಂ। ವಿಷಳರಾಯಕುವರ
ಜವಗಣ್ಣಂ।"[೨೨]

ದೇವಾಲಯ ನಿರ್ಮಿಸಿದವರನ್ನು ದಾನ, ದತ್ತಿಗಳನ್ನು ನೀಡಿದವರನ್ನು ಜೀರ್ಣೋದ್ಧಾರ ಮಾಡಿದವರನ್ನು ವರ್ಣನಾತ್ಮಕವಾಗಿ ಚಿತ್ರಿಸಿರುವುದು ಶಾಸನಗಳಲ್ಲಿ ಕಂಡುಬರುತ್ತದೆ. ಪೌರಾಣಿಕ ವ್ಯಕ್ತಿಗಳೊಂದಿಗೆ ತಮ್ಮನ್ನು ಹೋಲಿಸಿಕೊಂಡು ಬರೆಯಿಸುವುದರಿಂದ ತಮ್ಮ ಕೀರ್ತಿ, ಪ್ರತಿಷ್ಠೆ ಹೆಚ್ಚಾಗುತ್ತದೆ ಎಂಬ ಭಾವನೆ ಇದರ ಹಿಂದೆ ಇದ್ದಿರಬಹುದು.

ಚಾಳುಕ್ಯ ಭುವನೈಕ್ಯಮಲ್ಲನು ರಾಜ್ಯಭಾರ ಮಾಡುತ್ತಿದ್ದಾಗ ಅವನ ಗುರು ಸಮಾನವಾದ ಭಾಸ್ಕರಭಟ್ಟನು ಅಗ್ರಹಾರ ಪೊನ್ನವಾಡವನ್ನು ತ್ರಿಭೋಗಾಭ್ಯಂತರ ಸಿದ್ದಿಯಿಂದ ಆಳುತ್ತಿದ್ದಂತೆಯು, ಭುವನೈಕಮಲ್ಲನು ವೊಡೆಪಿಟ್ಟದ ಪಯಣದ ಬೀಡಿನಲ್ಲಿದ್ದಂತೆಯೂ ಹೇಳಿದೆ. ಭಾಸ್ಕರ ಭಟ್ಟನನ್ನು ಶಾಸನದಲ್ಲಿ ಮಹಾಪ್ರಚಂಡ ದಂಡನಾಯಕ ವಿಪ್ರದಿವಾಕರ, ಬಾಣನೇ ಮೊದಲಾದ ಚೋಳ ಸಾಮಂತರಿಗೆ ಸಿಂಹದಂತಿರುವವನೂ, ಶಿವಭಕ್ತನೂ, ಭುವನೈಕಮಲ್ಲನನ್ನು ಆರಾಧಿಸುತ್ತಿದ್ದ ವ್ಯಕ್ತಿಯಾಗಿದ್ದನೆಂದು ವರ್ಣಿಸಿದೆ.

"ಸ್ವಸ್ತಿ ಸಮದಿಗತ ಪಂಚಮಹಾಶಬ್ದ ಮಹಾಸಾಮಂ(ತಾದಿ) ಪತಿ ಮಹಾಪ್ರಚಣ್ಡ ದಣ್ಣನಾಯಕಂ ವಿಬುಧರ ದಾಯಕಂ ಸತ್ಯಾರತ್ನಾಕ(ರಂ) ವಿಪ್ರದಿವಾಕರಂ ನೀತಿಪಾರಾಯಣಂ ಸೌರ್ಯನಾರಾಯಂ ವಾಣರಾಯ ಮುಖಾನೇಕ ಚೋಳಸಾಮಂತ ಕರಿಕಲ ಭಕಣ್ಠೀರವಂ ರಣರಂಗಭೈರವನು ಭಯಬ(ಳ) ಸುಭಟ ಕೀರ್ತ್ತಿತ ಪ್ರತಾಪಂ ವೈರಿಸನ್ತಾಪ ಪಾರ್ವತೀವಲ್ಲಭ"[೨೩]

ಬಿಜ್ಜಳನನ್ನು ಶಾಸನವೊಂದು ಕದನ ಪ್ರಚಂಡ, ಕಲಿಗಳಾಂಕುಶ ಪ್ರತಾಪಲಂಕೇಶ್ವರ ಪರನಾರಿ ಸೋದರ, ಗಿರಿದುರ್ಗಮಲ್ಲ ಮುಂತಾದ ರೀತಿಯಲ್ಲಿ ವರ್ಣಿಸುತ್ತದೆ.

"ಕಳಚುರ್ಯ ಕುಳಕಮಳ ಮಾರ್ತ್ತಂಡಂ ಕದನ ಪ್ರಚಂಣ್ಡಂ ಮಾನಕಳಕಾಚಳಂ ಸುಭಟರಾದಿತ್ಯಂ ಕಲಿಗಳಂಕುಸಂ ಗಜರಾಯ ಸರಣಾಗತ ವಜ್ರಪಂಜರಂ ಪ್ರತಾಪಲಂಕೇಶ್ವರಂ ಪರನಾರೀ ಸಹೋದರಂ ಸನಿವಾರಸಿದ್ಧಿ(ಗಿ)ರಿದುರ್ಗ್ಗಮಲ್ಲ ವೈರೀಭಕಂಠೀರವ"[೨೪]

ಅರಸರುಗಳ ತಮ್ಮ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳಲು ತಾವು ಮಾಡಿದ ಕಾರ್ಯಗಳನ್ನು ಪೌರಾಣಿಕ ವ್ಯಕ್ತಿಗಳಿಗೆ ಹೋಲಿಸಿಕೊಳ್ಳುತ್ತಿದ್ದರೆಂದು ಇದರಿಂದ ತಿಳಿದುಬರುತ್ತದೆ.

ಹಿರೇಹಡಗಲಿ ದೇಮೇಶ್ವರ ದೇವಾಲಯದ ಮುಂದೆ ಇರವ ಕ್ರಿ.ಶ. ೧೦೫೭ರ ದೇಮೇಶ್ವರನ ಶಾಸನವು ಪೌರಾಣಿಕವಾಗಿ ವರ್ಣಿಸುತ್ತದೆ.

"ಸಾಹಸದಿಂ ಕಾರ್ತ್ತಿಕೇಯನಂ ಶೌರ್ಯದಿಂ ವೈನತೇಯನಂ
ಶೌಚದಿಂ ಗಾಂಗೇಯನಂ ಸತ್ಯದಿಂ ರಾಧೇಯನಂ ದಾನದಿಂ
ವರಸುರ ಭೂಜಮಂ
ಚಲದಿಂ ಕುರುರಾಜನಂ ಧರ್ಮದಿಂ ಯುಧಿಷ್ಠರನಂ ಧೈರ್ಯದಿಂ
ಮೇರುವಂ ಗಾಂಭೀರ್ಯ್ಯದಿಂ ರತ್ನಾಕರಮಂ ಕ್ಷಮೆಯಿಂ
ಧರಿತ್ರಿಯಂ।"[೨೫]

ದೇಮರಸನು ತಾನು ದೇಮೇಶ್ವರ ದೇವಾಲಯವನ್ನು ಕಟ್ಟಿಸಿ ದೇವರ ಸೇವಾ ಕಾರ್ಯಗಳಿಗಾಗಿ ಭೂದಾನವನ್ನು ಮಾಡಿದಾಗ ಶಾಸನವೊಂದನ್ನು ಬರೆಯುಸುತ್ತಾನೆ. ಇದರಲ್ಲಿ ತನ್ನನ್ನು ಪೌರಾಣಿಕ ವ್ಯಕ್ತಿಗಳಾದ ಭೀಮ, ಅರ್ಜುನ, ದುರ್ಯೋಧನ, ಭೀಷ್ಮ, ಧರ್ಮರಾಯ ಮೊದಲಾದ ವ್ಯಕ್ತಿಗಳಿಗೆ ಹೋಲಿಸಿಕೊಂಡಿರುವುದನ್ನು ಶಾಸನ ತಿಳಿಸುತ್ತದೆ.

ಚೌಡದಾನಪುರದ ಶಾಸನವು ಶಿವಮುದ್ದ ಮುನಿಯನ್ನು ಪೌರಾಣಿಕವಾಗಿ ವರ್ಣಿಸುತ್ತದೆ.

ಅವನ ಕಂಭರರಾಗಿಯೆ
ದಿವಿಜರ್ಶಿವರಾತ್ರಿ ಮಾಡಿದ ತತ್ವದದೊಳ್

ಧವಳೇಶ್ವರಾಖ್ಯ ಲಿಂಗದೊ
ಳವಿರಳ ಶಿವಮುದ್ದುದೇವ ಮುನಿಪತಿಯಿಪ್ಪನು
ಅಬ್ಯಕ್ತ ಶಂಕರನನತಿ ಸು
ಬ್ಯಕ್ತಂ ಮಾಡಿ ತೋರ್ಪೆನೆನುತೀ ಜಗದೊಳ್
ದಿಬ್ಯ ಧವಳೇಶಲಿಂಗವ
ನಬ್ಯಯ ಶಿವಮುದ್ದುಮುನಿವರಂ ಭಾವಿಸುವನು
ಶಿವಮುದ್ದು ಬ್ರತಿಪತಿಗೀ
ದಿವಿಜೇಂದ್ರ ಪದಗಳೆಂಬವೇಂ ಪಾಸಟಿಯಾ
ಭವನೆ ಕಲಿಕಾಲ ಕಲುಷವ
ತವಿಸುವ ನೆವದಿಂದ ಮೂರ್ತಿಯನ್ತಾಳ್ದಿರ್ದನು
ಕೇಶವ ಜಿನ ಚೌದ್ಧಾದಿಗೆ
ಳೀಶನ ಕಿಂಕರರು (ಬೇ)ದೆ ದೇವತೆಯತ್ತಿಲ್ಲಿಂ
ದಾ ಶಿವಮುದ್ದು ಬ್ರತಿಪ ಮ
ಹೇಶನನೋ(ದೊ)ಲಿಸಿದಂ ಜಗತ್ರಯವರಿಯಲು
ಅಮರಗೂ ಚರೂ ಕೋಮಳ
ವಿಮಳದಳೋ(ತ್ಪು)ಲ್ಲ ಕಮಳಯುಗಳ ಪರಾಗ
ಪ್ರಮುದಿತ ಮನದ್ವಿರೇಪೋ
ಪಮೆಯಿಂ ಶಿವಮುದ್ದುದೇವ ಮುನಿಪತಿಯಿಪ್ಪಂ ॥
ವ॥ ಅನನ್ತರವು ಶ್ರೀಗಿರಿ ನಿವಾಸನಾಜ್ಞೆಯಿಂ ಬಂದ ವೀರವ್ರತಿಯಿಂ ನೋಡಿ
ಹವಣಿಸಬಾರದಗ್ರಕು(ಲದು)ದ್ಭವಾಗಿ ವಿಧಾತ್ರನಿಂದ ಸಂ
ಭವಿಸಿದ ನಾಲ್ಕು ಸ್ರುಷ್ಟಿಯೊಳು ಕೂಡಿದನಲ್ಲ ಭಾವಿಸ
ಲ್ಭವನೊಲವಿದ್ದ ವೀರ ಶಿವದೇವ ಗಣೇಶ್ವರನಾಗಿ ತೋಱಿದನ್
ವ॥ ಎದ್ದು ತನ್ನೊಳ್ಪರಿಭಾವದಿ ಯಿಂತೆನ್ದಂ
ಸುರನದಿಯೆ ತುಂಗಭದ್ರಾ
ವರನದಿ ಸುರಸಮಿತಿ ವಿಪ್ರಗಣ ನಿಕರವು ಆ
ಸುರೂರಿ ಮಹೇಶಭವನವು
ಧರೆಯೊಳ್ಕವಿಳಾಸವೇನಿಪ ಮುಕ್ತಿಕ್ಷೇತ್ರವು
ಆ ಮುಕ್ತಿ ಕ್ಷೇತ್ರದೊಳಿರ್ದ್ದೀ
ಮೈಮೆಯ ಮೆಱೆಯಬೇಕೆಮತ ಗುರು ನುಡಿಯಲ್

ಸ್ವಾಮಿ ಮುಕುಕೇಶನೆ ಪರ(ಂ)

ಧಾಮಶ್ರೀ ಜ್ಯೋತಿ(ಲಿಂಗ)ವೆಂದೊಲವಿದ್ದಂ ॥

ವ॥ ಶಕವರ್ಷ ॥ ೪೮ನೆಯ ಪಾರ್ಥಿವ ಸಂವತ್ಸರದ ಭಾದ್ರಪ(ದ) ಶುದ್ಧ ೧೫

ಸೋಮವಾರ ಚಂದ್ರೋಪರಾಗ ಪುಣ್ಯತಿಥಿಯ ಮಧ್ಯಾಹ್ನ ಸಮಯದೊಳ್

ಬಂದು ಮೂಕ್ತಿಕ್ಷೇತ್ರಮಾ ಪೊಕ್ಕು

ಕಂ। ವಿರಚಿಸಿದಂ ಕೈಳಾಸದ

ಚರಿತ್ರಮಂ ವೀರಭದ್ರನ ಶ್ರೀಪದಮಂ

ಸ್ಮರಿಸುತ ವೀರಬ್ರತಮಂ

ಧರಿಸಿದವತುಳಬಿಳ ವಿಕ್ರಮಂ ಶಿವ(ದೇವ)ನು'[೨೬]

ದೇವತೆಗಳಿಂದ ಪೂಜಿಸಲ್ಪಡುವ ಧವಳೇಶ್ವರ ಲಿಂಗವನ್ನು ಶಿವಮುದ್ದ ಮುನಿ ಭಜಿಸುತ್ತಿದ್ದನು. ಈ ಮುನಿಗೆ ದೇವಪದವಿಗಳ ಸಮಬಾರವು ಇವನು ಶಿವನೇ ಕಲಿಕಾಲದೋಷ ನಿರ್ಮೂಲನೆಗಾಗಿ ವ್ಯಕ್ತಿರೂಪ ಪಡೆದಂತಿದ್ದನು. ಕೇಶವ, ಜಿನ, ಬುದ್ಧ ಮೊದಲಾದವರಿಂದ ಸೇವಿಸಲ್ಪಡುವ ಶಿವನನ್ನು ಈತನು ಪೂಜಿಸುತ್ತಿದ್ದನು, ಹೀಗೆ ಶಿವನ ಪಾದಕಮಲ ಭೃಂಗವಾಗಿ ಶಿವಮುದ್ದುದೇವ ಮುನಿಪತಿ ಇರುತ್ತಿರಲು ಶ್ರೀಗಿರೀಶ(ಶ್ರೀಶೈಲ ಮಲ್ಲಿಕಾರ್ಜುನ)ನ ಆಜ್ಞೆಯಿಂದ ಬಂದ ವೀರವುತಿ(ಶಿವದೇವ)ಯನ್ನು ನೋಡಿ "ಈತನು ಉತ್ತಮ ಜಾತಿಯಲ್ಲಿ ಹುಟ್ಟಿದವನಾಗಿದ್ದಾನೆ. ಬ್ರಹ್ಮನಿಂದ ಹುಟ್ಟಿದವನಾದರೂ ಷಟ್‌ವಿಕಾರಗಳಿಂದ ವಿದೂರನಾಗಿದ್ದಾನೆ. ಶಿವನೇ ಶಿವದೇವನ ರೂಪದಲ್ಲಿ ಅವತರಿಸಿದ್ದಾನೆ" ಎಂದು ಭಾವಿಸಿ ಅವನಿಗೆ ಹೀಗೆ ನುಡಿದನು "ದೇವಗಂಗೆಗೆ ಸಮಾನವಾದ ತುಂಗಭದ್ರ ನದಿ ದೇವತೆಗಳಿಗೆ ಸಮಾನರಾದ ಬ್ರಾಹ್ಮಣರು ಕೈಲಾಸಕ್ಕೆ ಸಮಾನವಾದ ಶಿವದೇವಾಲಯ ಇವುಗಳಿಂದ ಕೂಡಿದ ಮುಕ್ತಿಕ್ಷೇತ್ರ (ಚೌಡದಾನಪುರ) ಹೆಸರಿನ ಸ್ಥಳವುಂಟು ಆ ಮುಕ್ತಿಕ್ಷೇತ್ರದಲ್ಲಿದ್ದು ನೀನು ಮಹಿಮೆಯನ್ನು ತೋರಬೇಕು."

ದೇವಗಿರಿಯ ಶಾಸನ

"ಶ್ರೀ ಕೃಷ್ಣನೃಪ ಪುಣ್ಯಾ ತ್ರೇಣಕದಮ್ಯ ಕುಲಕೇತುನಾ।

ರಣಪ್ರಯೋಣ ದೇವೇನ ದತ್ತಾಭುಮಿಸ್ವಿ ಪರ್ವತೇ।

ದಯಾಮೃತ ಸುಖಸ್ತಾನ ಪೂತ ಪುಣ್ಯಗಣೇಪ್ಸುನಾ।

ದೇವವರ್ಮ್ಮೆಕ ವೀರ್ಯಂದತ್ತ ಜೈನಾಯ್ ಭೂರಿಯಮ್"[೨೭]

ದೇವವರ್ಮ ಇವನು ಒಂದನೆಯ ಕೃಷ್ಣವರ್ಮನ ಎರಡನೆಯ ಹೆಂಡತಿಯ ಮಗ. ಇವನು ಪರಾಕ್ರಮಿಯೂ, ಶೂರನೂ, ಧೀರನೂ ಆಗಿದ್ದನೆಂದು ದೇವಗಿರಿಯ ಶಾಸನವೊಂದು ವರ್ಣಿಸುತ್ತದೆ.

ಇದರಿಂದ ಒಂದನೆಯ ಕೃಷ್ಣವರ್ಮನ ಮಗನಾದ ದೇವವರ್ಮನು ಯುದ್ಧಪ್ರಿಯನೂ ದೇವಸಮಾನನೂ, ದಾನಶೂರನೂ, ಪುಣ್ಯವಂತನೂ, ಕವಿಯೂ ಆಗಿದ್ದನೆಂದು ಸ್ಪಷ್ಟವಾಗುತ್ತದೆ. ಇವನ ರಾಜಧಾನಿ ತ್ರಿಪರ್ವತ (ಮುರುಗೋಡ) ಆಗಿತ್ತೆಂದು ತಿಳಿದುಬರುತ್ತದೆ.

ಲಕ್ಷ್ಮೀದೇವರಸ ವೇಣುಗ್ರಾಮ ಆಳುತ್ತಿದ್ದಾಗ ಕೋಲಾರದ ಪ್ರಭು ಕೇಶರಾಜನ ವಂಶಾವಳಿಯ ಪರಾಕ್ರಮವನ್ನು ತಿಳಿಸುವಾಗ ಇವನ ಅಜ್ಜನಾದ ಮಹಾದೇವನು ತನ್ನ ಪ್ರಭುವಿನ ಶತ್ರುಗಳನ್ನು ಯುದ್ಧದಲ್ಲಿ ಶೌರ್ಯದಿಂದ ಯಮಪುರಿಗೆ ಅಟ್ಟಿದನೆಂದು ಡಾ.ಅ.ಸುಂದರಂ ಅಭಿಪ್ರಾಯಪಟ್ಟಿದ್ದಾರೆ.

"ದಿಂಗಂಧಗಂಜಗಳಂ ತುಳಿದು ಕೊಂದಂ ಮಾಯಿದೇವೋತ್ತಮಂ।
ಮುಂ ಜಮದಗ್ನಿರಾಮನಖಿಳ ಕ್ಷಿತಿನಾಥರ ನಿಪ್ಪತ್ತೊಂದು
ಸೂಳ್ಮಂಜಿನ ಗಾಳಿಯನ್ತೆತವೆ ಕೊಂದವೊಲೀ ಮಹಾದೇವ
ನಾಯಕ ಕುಂದರದಿಂದೆ ವೈರಿಕುಲಮಂತವೇ ಕೊಂದು ಪಿತಂಗೆ ಮಾಡಿದ್ದಾ"೨೮

ಚಾಳುಕ್ಯ ವಿಕ್ರಮಾದಿತ್ಯನ ಆಸ್ಥಾನದಲ್ಲಿ ಒಬ್ಬ ಅಧಿಕಾರಿಯಾಗಿದ್ದ ಬ್ರಾಹ್ಮಣ ಕವಿಯಾದ ಮಲ್ಲಿಕಾರ್ಜುನ ಭಟ್ಟನು ತನ್ನ ಶಾಸನ ಪದ್ಯಗಳಲ್ಲಿ ಪರಶುರಾಮನ ಬಗ್ಗೆ ವರ್ಣಿಸುತ್ತ ಹೀಗೆ ವಿವರಿಸಿದ್ದಾನೆ.

"ಧರಣೀ ಮಂಡಲದೊಳ್ ಧರಾಭುಜರ ನಿರ್ಪತ್ತೊಂದು
ಸೂಳ್ ಕೊಂದು ತಾ ಧರಣಿಮಂಡಲಮಂ ಸಮಸ್ತಧರಣಿದೇ
ವರ್ಗ ಪಾರ್ಧ್ಯಂತಕಂ। ಬರಮಿತ್ತಲ್ಲಿ ಧರಾಮಸ್ವದೊಳಿರಲ್ಕಾಣೆಂದು
ಪೋಗುತ್ತಿ ಸಾ। ನರಮಂ ಚಾಪದ ಕೂರ್ಪಿನೊಳ್ ಬುಧನಾತಂ
ಶ್ರೀ ರೇಣುಕೀನಂದನಂ॥೨೯

ಪುರಾಣಗಳು ಹುಟ್ಟಿಕೊಂಡದ್ದೇ ಆಯಾ ದೈವಗಳ ಬಗ್ಗೆ. ಅವುಗಳ ಆರಾಧನೆಯಿಂದ, ಆರಾಧನೆ ಮಾಡಿದವನಿಗೆ ಒದಗುವ ಪುಣ್ಯ, ಸುಸ್ಥಿತಿ ಕಷ್ಟ ಪರಿಹಾರಗಳನ್ನು ರಂಜನೀಯವಾಗಿ ತಿಳಿಸುವುದಕ್ಕೆ ಈ ಪ್ರವೃತ್ತಿ ಎಲ್ಲಿಯವರೆಗೆ ಮುಂದುವರಿಯಿತೆಂದರೆ ಅವನು ಎಂಥ ಅಧರ್ಮಿಯನೇ ಆಗಿರಲಿ ಎಂಥ ಘೋರ ಕೃತ್ಯಗಳನ್ನು ಎಸಗಿದವನೇ ಆಗಿರಲಿ, ಬುದ್ಧಿ ಪೂರ್ವಕವಾಗಿಯಾಗಲೀ, ಆಕಸ್ಮಿಕವಾಗಿಯಾಗಲಿ, ದೈವಕ್ಕೆ ಶರಣಾದರೆ, ಆ ದೈವದ ನಾಮಸ್ಮರಣೆಯಿಂದಲೇ ಮುಕ್ತಿ ಪಡೆಯುತ್ತಾನೆ ಎಂಬುದಾಗಿ ಹಲವಾರು ಸುಲಭೋಪಾಯಗಳನ್ನು ಒಡ್ಡುವುದರ ಮೂಲಕ ತನ್ನತ್ತ ಸೆಳೆಯುವ ಹಂತಕ್ಕೆ ಹೋದವು. ಈ ತೆರನ ಪ್ರಯತ್ನಗಳಲ್ಲಿ ಶಾಸನಗಳೇನೂ ಹಿಂದೆ ಬಿದ್ದಿಲ್ಲ"೩೦ ಇಂತಹದೇ ವಿಷಯವನ್ನು ಒಳಗೊಂಡ ಕ್ರಿ.ಶ.ಕ ೧೧೩೨ರ ಶಾಸನವೊಂದು ಹೀಗಿದೆ.

"ಬರವೀವ ದೇವ ಚಂಡಿಕರಹೋಮದಾಟು ಸಾವಿದೇವ
ದಂಡಾದೀಶಂ ಧರೆಯೊಳಗೆಂದಡೆ ಮಹೇಶ್ವರನ ಪೆಂಪನಿನ್ನೇ ವರ್ಣ್ನಿಪೆನೋ ॥ ಕುದುರೆ
ಕೂಡಿ ಹೋಗು ಬಾಯಂದೆಡೆಯೋಡಿಪರನ್ಯಹ್ವಾಡೆಯಮಿಟ್ಟಿದು ಭಣ್ಡಕ್ಕು
ಡುವರೆ ಮಹೇಶ್ವರಂ ತಾಂ ಪಿಡಿದವಿನಂವಿರ್ಪ್ಪದಿನಕಾಪತ್ತು ಧನ....ಕಳಸ
ಜ ವಿಷ್ಣು ರುದ್ರ ದಿನಪಂ ಸಸಿ ಕಾರ್ತಿಕನೇಕದನ್ತಪಂಜಯನೆಲಂ
ಸುರಾಧಿಪ ಕುಮಾರಿ ಸರಸ್ವತಿ ಬನದ ಚಣ್ಡಿ ನಿರ್ಮ್ಮ(ಂ)ಳಲಕ್ಷ್ಮಿಕರಂ
ಗೆ ಪರಮೋತ್ಸವದೊಸೆದಿತ್ತು ಸೇಸೆಯಿಂದಳೆಯ ಮಹೇಸ್ವರಂ
ಪಡೆದ ಶ್ರೀಪತಿಭೂಪತಿಯಕ್ಕು ನಿಚ್ಚೆಯಂ"[೨೧]

**ವೆಣ್ಣೆಯಭಟ್ಟನ ಶಾಸನ**

ಮಹಾಸೇನಾಧಿಪತಿ ವೆಣ್ಣೆಯಭಟ್ಟನನ್ನು ಶಾಸನವೊಂದು ಹೀಗೆ ವರ್ಣಿಸುತ್ತದೆ. ಈತನು ಸಪ್ತಗ್ರಾಮಗಳಲ್ಲಿ ಅಗ್ರಗಣ್ಯನು, ಶ್ರೇಷ್ಠವಿದ್ವಾಂಸನು, ಉಭಯ ಕವೀಂದ್ರನ, ಕವಿರಾಜವಲ್ಲಭನು, ರಣರಂಗದಲ್ಲಿ ದುಷ್ಟನಿಷ್ಠುರನು, ಕುಟಿಲಕೌಟಿಲ್ಯನು, ಕಾಲಿಕಾಲಬೃಹಸ್ಪತಿ, ನಂಬಿದವರಿಗೆ ವಜ್ರಪಂಜರನಾಗಿ ರಕ್ಷಣೆ ನೀಡುತ್ತಿದ್ದನು, ಸರಸ್ವತೀವಲ್ಲಭನು, ಪರನಾರಿಯರಿಗೆ ಸಹೋದರನು, ಒಳ್ಳೆಯವರಿಗೆ ಒಳ್ಳೆಯವನು, ದುಷ್ಟರಿಗೆ ದುಷ್ಟನಾಗಿದ್ದನು. ಚತುರರಿಗೆ ಚತುರ್ಮುಖನಾಗಿದ್ದನು. ಪ್ರಾಪಕುಲಕ್ಕೆ ಭಾಸ್ಕರನಂತಿದ್ದನೆಂದು ಮುಂತಾಗಿ ವರ್ಣಿಸುತ್ತದೆ.

"ಸಮಸ್ತ ರಾಜ್ಯಭರನಿರೂಪಿತ ಮಹಾಸೇನಾಧಿಪತಿ ಪತಿಹಿತಾಚರಣಂ
ರಣರಂಗದುಷ್ಟಂ ದುಷ್ಟನಿಷ್ಠುರಂ ಕುಟಿಲ ಕೌಟಿಲ್ಯಂ ಕ್ಷುದ್ರವಿದ್ರಾವಣಂ
ಕಲಿಕಾಲ ಬೃಹಸ್ಪತಿ ಪರಿವಾರ ವಜ್ರ ಪಂಜರನಹಿತಾಹಿ ಗರುಡನುಭಯ
ಕವೀನ್ದ್ರಂ ಕವಿರಾಜವಲ್ಲಭಂ ವಾದೀಭಪಂಚಾನನಂ ಸರಸ್ವತೀ
ವಲ್ಲಭಂ ಪರನಾರೀದುರ್ಲ್ಲಭಂ ಘಟಿಗನ ಗನ್ದವಾರಣಂ ನಯಧಾಮಂ
ಜಲದೋಜನವಿಪಿಲ್ಲದಾತಂ ನಲ್ಲರ್ಗೆ ನಲ್ಲಂ ಚತುರ ಚತುರ್ಮುಖಂ ಕದನವಿನೋದಂ
ಮಲಯ ಮರ್ದ್ದನಂ ವಿಪ್ರಕುಳಕಮಳ ಭಾಸ್ಕರಂ ಪಾರ್ವರೊಳ್ಗಣ್ಡಂ ಸಪ್ತ
ಗ್ರಾಮಾಗ್ರಣ್ಯಂ ಕಮ್ಮಕುಳೋದ್ಭವಂ ಧೀತಗೋತ್ರಂ ದಿಣ್ಣಪಣ್ಡಿತಪುತ್ರಂ
ಛಾತ್ರಕಮಿತ್ರಂ ಪಣ್ಡಿತಮಣ್ಡನಂ ವೆಣ್ಣೆಯ ಭಟ್ಟರುಮೆನಿಸಿದ ಶ್ರೀಮನ್ಮಹಾ
ಪ್ರಚಣ್ಡ ದಣ್ಡನಾಯಕಂ ಘಟಿಯಂಕಕಾಱಂ"[೨೨]

ಮಾರಗಾವುಣ್ಡ ಎನ್ನುವವನು ಹಾನಗಲ್ಲು ೫೦೦ನ್ನು ಆಳ್ವಿಕೆ ಮಾಡುತ್ತಿದ್ದನು. ಇದರಲ್ಲಿ ಪೊಟ್ಟಯೂರು ಘಟಿಕಾಸ್ಥಾನವಾಗಿತ್ತು. ಇಲ್ಲಿ ದೊರೆತ ಶಾಸನವೊಂದು ಇವನನ್ನು ಈ ರೀತಿ ವರ್ಣಿಸುತ್ತದೆ.

"ಸ್ವಸ್ತ್ಯನೇಕ ಗುಣಗಣಾಳಂಕಾರ ಪರನಾರೀದೂರ, ಗೋತ್ರಪವಿತ್ರ
ಬುಧಜನಮಿತ್ರ ಶೌಚಾಂಜನೇಯ ಸತ್ಯರಾಧೇಯ ಸೂರ್ಯಂಗೆ ಭಕ್ತ
ಧುರ್ಜನವಿರಕ್ತ ಕೆಳೆಗೆಯ್ದೆ ಕೂರ್ಪಂ ಕೂರ್ತೀಂಲಾರ್ಪಂ ಬುಧ
ಜನಾಧಾರಂ ವಿನಯಾವತಾರ ಶಿಷ್ಟಪ್ರಸಂಗ ನುತಧೈರ್ಯೋತ್ತುಂಗ
ಆಶ್ರೀತಜನಕಲ್ಪವೃಕ್ಷ ಬನ್ದುಜನ ಚಿನ್ತಾಮಣಿ ದಾನಚೂಡಾಮಣಿ
ಕಲಿಯುಗ ಮಹೇಶ್ವರ ಪೆಳವರಭಾವ ಸೋಮೇಶ್ವರ ದಾಸಿ
ವಿನೆಯ ವಿಶಾಸಿ ನಡುನಾಡ ತೀರ್ಥ್ಥ ತೆಂಕಣಸೋಮನಾಥ ನಾಮಾ
ಡಿ ಸಮಸ್ತ ಪ್ರಶಸ್ತಿ ಸಹಿತ"[೩೩]

ಅನೇಕ ಗುಣಗಳಿಂದ ಅಲಂಕಾರಿತವಾಗಿದ್ದನೆಂದು, ಪವಿತ್ರನೂ, ಮಿತ್ರನೂ, ಶೌಚಾಂಜನೇಯನೂ, ಸತ್ಯದಲ್ಲಿ ರಾಧೇಯನೂ, ಸೂರ್ಯನಿಗೆ ಭಕ್ತನೂ, ದುಷ್ಟರಿಗೆ ದುಷ್ಟನೂ, ವಿನಯವಂತನೂ, ಶಿಷ್ಟಶೀಲವಂತನೂ, ಆಶ್ರಿತ ಜನರಿಗೆ ಕಲ್ಪವೃಕ್ಷದಂತೆ ಇದ್ದನೆಂದೂ, ದಾನ ಚೂಡಾಮಣಿ, ಕಲಿಯುಗ ಮಹೇಶ್ವರ 'ಹೆಳವರಿಗೆ ಕಾಲ'ನ್ನು ಕೊಡುವಂತಹವನೆಂದು, ನಡುನಾಡ ತೀರ್ಥನೆಂದೂ, ದಕ್ಷಿಣ ಸೋಮನಾಥನೆಂದೂ ಹೇಳುತ್ತದೆ.

ದೇಮರಸನನ್ನು ಶಾಸನವೊಂದು ಹೀಗೆ ಬಣ್ಣಿಸಿದೆ.

"ಕಂ॥ ವನರುಹ ವದನದ ಮದಪಿಕ
ನಿನದರ ಗುರುಕಚದ ಕಂಬುಕಂಠದ ಮೃಗಲೋ
ಚನದ ಮಳಯರುಹಗಂಧದ
ವನಿತಾನಿಕರಕ್ಕೆ ದೇಮನಭಿನವಕಾಮಂ
ಚ॥ ಚಲದ ವಿಳಾಸದುನ್ನತಿಯ ಬೀರದುದಾರದ ಜನ್ಮಭೂಮಿಯಂ
ಮತಿವರ ಮಾರಿಯಂ ಮಿಗುವರಾರ್ಜ್ಜಗದೊಳ್ ಜಯದಂಕಕಾಜಿನಂ
ಸುಲಲಿತ ರೂಪನಂ ಸುಭಗಿನಾಗರಮಂ ವಿಟಚಕ್ರವರ್ತ್ತಿಯಂ
ಕಲಿಯುಗಕಾಮನಂ ನೆಗಳ್ದ ದೇಮನನುದ್ವಯ ಶೋಭಿರಾಮನ
ಮೇನಕಿ ರಂಭೆಯೂರ್ಬ್ಬಸಿ ತಿಲೋತ್ತಮೆಯನ್ನ ರೆನಿಪ್ಪ ವಾರಕಾಂ
ತಾನಿಕರಂಗಳುದ್ಭವರ ಚಕ್ಷುವೊಲೊಪ್ಪೆ ನಿಜಾಂಕ ಮಾಲೆಯಂ
ಮಾನವಮನ್ಮಥನಂ ಬರೆದನಾದರದಿಂ ವಿಟಚಕ್ರವರ್ತ್ತಿ ಧಾತ್ರೀ
ನುತಮಾಗಿ ತಿಲ್ ತಿವುಳ ಕನ್ನಡ ನಾಗರದಕ್ಕುರಂಗಳ"[೩೪]

ದೇಮರಸ ವಿಟಚಕ್ರವರ್ತಿಯಾಗಿದ್ದನೆಂದು, ಈ ಊರ ನೂರಿಪ್ಪತ್ತು ಮಹಾಜನರೊಳಗೆ ಮಹಾಮಾತ್ಯನಾಗಿದ್ದನೆಂದು, ಸಮಸ್ತ ರಾಜ್ಯಭಾರವನ್ನು ಅವನಿಗೆ ಹೊರಿಸಲಾಗಿತೆಂದು.

ರಣರಂಗರಾಮನೆನಿಸಿದ್ದ, ಚೆಲುವನಾದ ಈ ಮಾನವ ಮನ್ಮಥನು ಮೇನಕಿ ಮೊದಲಾದವರಿಗೆ ಸರಿದೊರೆಯಾದ ವೇಶ್ಯೆಯರ ಕಣ್ಣುಗಳಲ್ಲಿ ತನ್ನ ಹೆಸರನ್ನು ತೆಲುಗು, ತಮಿಳು, ಕನ್ನಡ, ನಾಗರ ಲಿಪಿಗಳಲ್ಲಿ ಬರೆದನೆಂದು ವರ್ಣಿಸುತ್ತದೆ.ವ್ಯಕ್ತಿಯನ್ನು ಪೌರಾಣಿಕ ವ್ಯಕ್ತಿಗಳಿಗೆ ಸಮೀಕರಿಸುವ ಸಂದರ್ಭದಲ್ಲಿ ಆ ವ್ಯಕ್ತಿಯ ಸೇವಾಮನೋಭಾವನೆ ಅವರ ದಯಾಪರತೆ, ಸೋದರ ಮನೋಭಾವ ಹೀಗೆ ಮುಂತಾದವುಗಳನ್ನು ನಮ್ಮ ಪಾರಂಪರಿಕ ತಿಳುವಳಿಕೆಯಲ್ಲಿರುವ ಒಬ್ಬೊಬ್ಬ ಪೌರಾಣಿಕ ಪುರುಷರುಗಳಿಗೆ ಹೋಲಿಕೆ ಮಾಡಿರುವುದು ಕಂಡುಬರುತ್ತದೆ. ಆಂಜನೇಯನ ಉಪಮೆಯನ್ನು ಬಳಸಿಕೊಂಡಾಗ ಅಲ್ಲಿ ಹೋಲಿಕೆ ಮಾಡಲ್ಪಟ್ಟ ವ್ಯಕ್ತಿಯ ಸೇವೆಯನ್ನು ನೆನೆಯಲಾಗಿದೆ ಎಂದರ್ಥ. ಹಾಗೆಯೇ ಒಬ್ಬ ವ್ಯಕ್ತಿ ತ್ಯಾಗ, ಸಕಲ ಜೀವಿಗಳ ಮೇಲೆ ಇರುವ ಜೀವಪರ ಮಮಕಾರ, ಪರಸ್ತ್ರೀಯರನ್ನು ಸೋದರ ಭಾವನೆಯಿಂದ ನೋಡುವ ನಿಷ್ಕಲ್ಮಶ ಭಾವನೆ, ಸಕಲ ಧರ್ಮಗಳ ಬಗ್ಗೆ ಇರುವ ಪ್ರಾಂಜಲ ಪ್ರೀತಿ ಹೀಗೆ ಮುಂತಾದ ಗುಣಗಳಿಗೆ ಅನುಗುಣವಾಗಿ ಹೋಲಿಕೆ ಮಾಡಲು ನಮ್ಮ ಪೌರಾಣಿಕ ಕಲ್ಪನೆಗಳಲ್ಲಿ ಅನೇಕರಿದ್ದಾರೆ. ಇಂತಹದೇ ಹೋಲಿಕೆಯನ್ನುಳ್ಳ ಶಾಸನವೊಂದು ಹಿರೇಹಡಗಲಿಯಲ್ಲಿದೆ.

"ಅನತಾರಾತಿಗಜೇಯನಂ ಪತಿಹಿತ ಪ್ರಾರಂಭದೊಳ್ ವೈನತೇಯನ
ನನ್ಯಾಂಗನೆ ಗಂಜನೇಯನನು ದೋದ್ಯತ್ಸಕ್ತಿಯೊಳ್ಕಾರ್ತಿಕೇಯನಿಷ್ಟೀಪುವಿದೇ
ಯನಂದ್ಯಡವ ಜೋಪಾಧ್ಯಯನಂ ವಿಗಧಿದ ರಾಧೆ
ಯನನಿಂದ್ರ ಕಾಯನಜನಂ ಬಾವರ್ಣಿಕುಂ ದೇ
ಮನ"[೩೫]

ಈ ರೀತಿಯ ಹೋಲಿಕೆಗಳನ್ನು ಕುರಿತು ಆರ್. ಶೇಷಶಾಸ್ತ್ರಿಯವರು ಹೀಗೆ ಅಭಿಪ್ರಾಯಪಡುತ್ತಾರೆ. ಪುರಾಣಗಳ ಕೆಲವೊಂದು ಪಾತ್ರಗಳು ಒಂದೊಂದು ಮೌಲ್ಯಕ್ಕೆ ಪ್ರತೀಕಗಳಾಗಿವೆ. ಇದು ಎಲ್ಲಿಯವರೆಗೆ ಹೋಯಿತೆಂದರೆ ಆ ಪಾತ್ರ ಆ ಮೌಲ್ಯವನ್ನುಳಿದು ಅದಕ್ಕೆ ಇನ್ನೊಂದು ಮುಖವೇ ಇಲ್ಲವೆನ್ನುವವರೆಗೆ ಹೋಗಿದೆ. ಹನುಮ ಸ್ವಾಮಿನಿಷ್ಠೆ ಸಾಹಸಕ್ಕೂ ಪ್ರತೀಕ. ವ್ಯಕ್ತಿಯ ವೀರತನವನ್ನೇ ವರ್ಣಿಸುತ್ತಾ ಕವಿಗಳು ಈ ಹನುಮನ ಕತೆಯನ್ನು ಅನೇಕ ಕಡೆ ಸ್ವೀಕರಿಸಿದ್ದಾರೆ. ಈ ರೀತಿಯ ಹನುಮನನ್ನು ಕೇವಲ ಸೇವಕರನ್ನು ವರ್ಣಿಸುವಲ್ಲಿ ಉಪಮಾನವನ್ನಾಗಿ ಉಪಯೋಗಿಸಿಕೊಂಡಿರುವರೇ ಹೊರತು ಸಾಹಸ ಶೌಚಿ ಮುಂತಾದ ಮೌಲ್ಯಗಳಿಗೂ ಪ್ರತೀಕವಾಗಬಲ್ಲ ಹನುಮನನ್ನು ಅರಸನನ್ನು ಕುರಿತು ಹೇಳುವಾಗ ಬಳಸಿರುವುದು ತೀರಾ ಕಡಿಮೆ. ಈ ಮೇಲಿನ ಶಾಸನದಲ್ಲಿ ಹೋಲಿಕೆಯಾಗಿರುವ ದೇಮನ ಒಬ್ಬ ಅಧಿಕಾರಿಯಾದ್ದರಿಂದ ಶೇಷಶಾಸ್ತ್ರಿಯವರು ಅಭಿಪ್ರಾಯಪಡುವಂತೆ ಹನುಮನಿಗೆ ಹೋಲಿಕೆ ಮಾಡಲಾಗಿದೆ. ಅಂದರೆ ಪುರೋಹಿತಶಾಹಿ ಆ ಕಾಲದ ಪುರೋಹಿತ ಶಾಹಿ ವ್ಯವಸ್ಥೆಯ ಒಬ್ಬ ವ್ಯಕ್ತಿಗೆ ಹೋಲಿಕೆಯನ್ನು ಮಾಡಬೇಕಾದಾಗ ಆತನ ಸಾಮಾಜಿಕ ಸ್ಥಾನಮಾನಗಳನ್ನು

ಲಕ್ಷ್ಯದಲ್ಲಿಟ್ಟುಕೊಂಡಿರುತ್ತಿತ್ತು. ಎನ್ನುವುದು ಸ್ಪಷ್ಟವಾಗುತ್ತದೆ. ಹನುಮನು ಎಷ್ಟೆ ಸಾಹಸಿಯಾಗಿದ್ದರೂ ಅವನು ರಾಮನಿಗೆ ಸೇವಕನೇ. ಅದರಂತೆ ರಾಜ್ಯಾಡಳಿತದಲ್ಲಿ ಸೇವೆಯಲ್ಲಿರುವ ವರ್ಗದ ವ್ಯಕ್ತಿಯು ಎಷ್ಟೇ ಶೌರ್ಯವಂತನಾಗಿದ್ದರೂ ಅವನದು ಒಂದು ಬಗೆಯಲ್ಲಿ ಸೇವೆಯ ಕೆಲಸವೇ ಎನ್ನುವುದನ್ನು ಇಲ್ಲಿ ನೆನಪಿನಲ್ಲಿಟ್ಟುಕೊಳ್ಳಬೇಕು.

ಹಂಪಿಯ ಕಡೆಲೆಕಾಳು ಗಣಪತಿ ದೇವಸ್ಥಾನದ ಮುಂಭಾಗದಲ್ಲಿರುವ ಶಾಸನವೊಂದು ಹೀಗೆ ಹೇಳುತ್ತದೆ.

ಮಂ ॥ [೨೫*] ಕೆಱೆಯಂ ಕಟ್ಟಿಸು ಭಾವಿಯಂ ಸವಸು ದೇವಗಾರಾಮಂ
ಮಾಡಿಸಜ್ಜೆರೆಯೊಳ್ಸಿಲ್ಕಿದನಾಥರಂ ಬಿಡಿಸು ಮಿತ್ರಗ್ಗಿಂಬುಕೆಯ ನಂಬಿ
ದ[।*]ಗ್ಗೆಜೆವೆಟ್ಟಾಗಿರು ಶಿಷ್ಯರಂ ಪೊರೆಯೆನುತ್ತಿಂತೆಲ್ಲವಂ ಪಿಂದೆ ತಾಂ ಯೆ ಱದಳ್ವಾಲೆಱವಂದು
ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ ॥ [೨೬*] ಚಾಣಾಕ್ಯ ಸುಮಂತ್ರರೊ
ಳ್ದೊರೆಗೆವಂದಂ ಮಂತ್ರಿ ಲಕ್ಷ್ಮೀಧರಂ ॥[೪೧] ವಚನ ॥ ಆ ಮಹಾಪ್ರಧಾನ ಲಕ್ಷ್ಮೀಧರನೊಂದು
ರಾತ್ರಿಯೊಳ್ಸುಖಸುಪ್ತಿಯನಪ್ಪುಗೆಯ್ದಿರ್ಪ್ಪಿನಂ ಸ್ವಪ್ನ
ದೊಳಪ್ರ ತ್ರಿಮತೇನಜನಖಿಲಚರಾಚರಜನನಬೀಜಂ । ಬೀಜಾಪೂರಸಮುಚಿತಾ
ಯುಧವಿಶೇಷವಿಲಸಿತ ದಶಭುಜಾದಂಡಂ । ಖಂಡೇಂದುಮಂ
ಡಿತಮಣಿಮುಕುಟ ಮಹನೀಯ್ಯಶಿಖಂಡಂ । ಗಂಡಸ್ಥಳಗಳಿತಮದಮದಿರಾ ಪ್ರಮುತ್ತ ಮುಧು
ಕರಝೇಂಕಾರ ಮುಖರಿತನಖಿಲದ್ವಿಲಯಂ । ವ
ಲಯಾಂಗದಾಂಗುಲೀಯ್ಯಕಾದಿಭೂವಿಭೂಷಿತ ಸರ್ವ್ವಾಂಗನಂಗೀಕ್ರುತ ಭುಜಂಗಪರಿಲ್ರುಢ
ಪ್ರಾಲಂಬರಿ । ಲಂಬೋದರಕಲಿತಕಾಕೋದ
ರಫಣಾಮಣಿಮರೀಚಿನಿರಾಕೃತನಾಭೀಕುಹರವಿಹರದಪಾರಾಂಧಕಾರಂ । ನಕಕಟಿಸೂತ್ರ ವಿಚಿತ್ರ
ಜಘನಮಂಡಲಂ । ವೀರಕಟಕನೂ
ಪುರಪುರಸ್ಕ್ರುತಪದಸರೋಜನಾಥಂ । ಯಥೋಚಿತದಿಶಾನಿಷಂಣನಿಜನಿ
ಜಶಕ್ತಿಯುಕ್ತಹರಿಹರವ[ರಾ] ಹಕುಸುಮಸಾಯಂಕ । ಸೇವಕಜ
ನಮನೋರಥದಾಯಕಂ । ಸಕಲಲೋಕೈಕನಾಯಕಂ ಮಹಾವಿನಾಯಕಂ ಬಂದೆಲೆ ಲಕ್ಷ್ಮೀಧರಾ
॥ ಲವಣಾಂಭೋನಿಧಿ ತಳ್ತು ಸುತ್ತಿಱದ ಜಂಬೂ
ದ್ವೀಪಮಧ್ಯಸ್ಥ ಮೇರುವ ತೆಂಕಲರತಾವನೀತಳದೊಳುಂಟಾಹ್ಲಾದಕಂ ಪು(ಂ)ಣ್ಯಸಂ[।*]ಭಸವದ್ಮಂ
ಹರಿಪದ್ಮಗರ್ಬ್ಭಮುಖಲೇಖಾನೀಕಲೀಲಾ
ಮಹೋತ್ಸವಗೇಹಂ ಪರಿಧೂತಮೋಹಮಮಲಸ್ಥಾಮಂ ವಿರುಪಾಕ್ಷನಾ ॥ [೪೨*] ಅಲ್ಲಿ ॥
ಯೆಡದ ಮಡದಿಗೆ ಬಿಗುರ್ತ್ತಾಜಡೆವೆಱಗೊಂಡಮರನದಿ

ಯುದೇ ಸೊಬಗೆನೆ ನೇ[।*]ರ್ಪ್ವಡೆ ತುಂಗಭದ್ರೆ ದೇವನೆ ಬಿಡದಡಸಿದ ವಾಮಭಾಗದೊಳ್ಸೊಗಯಿಸುಗುಂ ॥ [೪೨*] ಜಲಮಮ್ರುತಮಯಂ ಸೊಗಯಿಪ ಜಲವಿಹಗಂ ಪರಮಹಂಸಮಯಯಮೆಂದುಂ ತ[।*]ಜ್ಜಲಚರಮನಿಮಿಷಮಯ ಮೆನಲೆಲೆ ಬಂಣಿಪನಾವನದಱ ತೀರದ ಸಿರಿಯಂ ॥ [೪೪*] ವಚನ ॥ ಆ ಪಾವನನದೀಪಯಃಪಾನಪರಿಣತ[ಪಣ್ಕಿ]ಲತೃಣನಾರಿಕೇಳಚೂತಮಾತುಳಂಗರಂಭಾಜಂ ಬೀರಪೂಗನಾಗಕೇಸರಾದಿಭೂಜಾತಜಾತಿಕೇತಕೀ ಮುಖನಿಖಿಲ ಕುಸುಮಸು

ಗಂದಬಂಧುರಗಂಧಶಾಳಿಪಾಳೀಪರಿಕಳಿತಕಳಹಂಸಶುಕಪಿಕಶಿಖಾವಳಕೇಕೀ ವಿಳಾಸವಿಚಿತ್ರಂ । ಸಕಲ ಭವಪವಿತ್ರಂ । ದುರಿತಲತಾಲವಿತ್ರಂ । ಭವಾಂಬುಧಿ

ಬಹಿತ್ರಂ । ವಾರಣಶಿ ಶ್ರೀಪರ್ವ್ವತಾದಿ ಸಿದ್ಧಸ್ಥಾನಮಣಿಗಣಮಾಲಾಸೂತ್ರಂ । ಪಂಪಾಕ್ಷೇತ್ರಂ ಸೊಗಯಿಪ್ಪುದದಱ ಪೂರ್ವ್ವದಿಗ್ಭಾಗದೆ ಮಾಲ್ಯವತ್ಪರ್ವ್ವತ

ದ ತೆಂಕವಕ್ಕದೊಳೊಂದು ಮಹಾಗುಹೆಯುಂಟದಕ್ರುತ್ರಿಮದಿವ್ವಾಗಾರಮದ ಱೋಳೆಂನಂ ಸುಪ್ರತಿಷ್ಠೆಗೆಯ್ಯುದೆಂದು ನಿರೂಪಿಸೆ ಮಹಾಪ್ರಸಾದ

ವೆಂದು ಕೈಕೊಂಡು ॥ ಆ ಸ(ಂ)ನ್ಮತೀಂದ್ರ ಲಕ್ಷ್ಮೀಧರನಮರಗುರು ಶ್ರೀವಿರೂಪಾಕ್ಷಲೀಲಾವಾಸಂ ತಾನಾದ ಪಂಪಾಪುರಪರಿಸರದೀ ಮೌಲ್ಯವದ್ಭೂಧ್ರ

ದೊಳ್ನಾ[।*]ನಾಸಿದ್ಧಿಶ್ರೀಯ್ಯ[ನೀ]ಯ್ಯಲ್ನೆಲೆಗೊಳಿಸಿ ಮಹಾಶಕ್ತಿ ಹೇರಂಬನಂ ವಿಶ್ವಾಸಂ ಮೆಯ್ವೆತ್ತ ಭಕ್ತ್ಯೊಪ್ರಭಾವವಿಭವದಿಂ ಧಾತ್ರಿಯೊಳ್ಕೀರ್ತಿವೆತ್ತಂ ॥[೪೫*][೨೬]

ಮಾದರಸ–ಸಾಯಣರ ತಂಗಿ ಸಿಂಗತಿಯ ಅಯ್ಯರು ಮಕ್ಕಳಲ್ಲಿ ಲಕ್ಷ್ಮೀಧರನು ಹಿರಿಯ ಇವನು ವಿಜಯನಗರದ ಪ್ರೌಢಪ್ರತಾಪ ದೇವರಾಯನ ಮಂತ್ರಿ. ಈ ಲಕ್ಷ್ಮೀಧರನು ಮಾಲ್ಯವಂತ ಪರ್ವತದ ತೆಂಕಣ ಪಕ್ಕದಲ್ಲಿದ್ದ ಅಕೃತ್ರಿಮವಾದ ಮಹಾಗುಹೆಯಲ್ಲಿ ಮಹಾಗಣಪತಿಯನ್ನು ಸ್ಥಾಪಿಸಿ, ಅದಕ್ಕೆ ದತ್ತಿಗಳನ್ನು ಬಿಟ್ಟ ಸಂಗತಿ ಹಾಗೂ ಕವಿರಾಜನೆಂದು ಹೊಗಳಲ್ಪಟ್ಟ ಇವನು 'ನೀತಿ ಕಾವ್ಯಮೃತ' ಮುಂತಾದ ಕೃತಿಗಳನ್ನು ಬರೆದನೆಂದು ಹೇಳಲಾಗುತ್ತದೆ. ಲಕ್ಷ್ಮೀಧರನು ಕೂಸಿದ್ದಾಗ ಅವನ ತಾಯಿ ಹಾಡಿ ಹಾಲೆರೆಯುತ್ತಾ ಕೆರೆಯಂ ಕಟ್ಟಿಸು ಬಾವಿಯಂ ಸವೆಸು ಮುಂತಾದ ಮಾತುಗಲನ್ನು ಅವನ ಕಿವಿಯಲ್ಲಿ ಹೇಳುತ್ತಿದ್ದಳೆಂಬ ಮಾತು ತುಂಬ ಮನೋಹರವಾಗಿದೆ. ಈ ರೀತಿಯ ತಾಯಿಯ ಕಲ್ಪನೆ ಮುಂದೊಂದು ದಿನ ಮಗ ಲಕ್ಷ್ಮೀಧರ ಸ್ವಪ್ನದಲ್ಲಿ ವಿನಾಯಕನು ಕಾಣಿಸಿಕೊಂಡು ಹೀಗೆ ಹೇಳುತ್ತಾನೆ.

'ಲವಣ ಸಮುದ್ರದಿಂದ ಸುತ್ತುವರಿದಿರುವ ಜಂಬೂದ್ವೀಪದ ಮಧ್ಯೆ ಇರುವ ಮೇರುಪರ್ವತ ದಕ್ಷಿಣದಲ್ಲಿ ಭರತಖಂಡವಿದೆ. ಅದರಲ್ಲಿ ವಿರೂಪಾಕ್ಷ ಸ್ಥಾನವಿದ್ದು ಅವನ ಎಡಬದಿಗೆ ತುಂಗಭದ್ರಾ ನದಿ ಹರಿಯುತ್ತಿದೆ. ಆ ಪಂಪಾಕ್ಷೇತ್ರದ ಪೂರ್ವಕ್ಕೆ ಮಾಲ್ಯವಂತ ಪರ್ವತವಿದ್ದು ಅದರ ದಕ್ಷಿಣ

ದಿಕ್ಕಿನಲ್ಲಿ ಸಹಜ ಗುಹೆಯೊಂದಿದೆ. ಅದರಲ್ಲಿ ತನ್ನನ್ನು ಪ್ರತಿಷ್ಠಾಪಿಸಬೇಕೆಂದು ತಿಳಿಸುತ್ತಾನೆ. ಅಂತೆಯೇ ಆ ಗುಹೆಯಲ್ಲಿ ಲಕ್ಷ್ಮೀಧರನು ಮಹಾಶಕ್ತಿ ಹೇರಂಬನನ್ನು ಪ್ರತಿಷ್ಠಾಪಿಸುತ್ತಾನೆ. ಇಂತಹ ಸಾಮಾಜಿಕ ಕಾರ್ಯಗಳನ್ನು ಮಾಡುವುದರಿಂದ ತನ್ನ ಮಗನ ಹೆಸರು ಜನರ ಮನಸ್ಸಿನಲ್ಲಿ ಉಳಿಯಲಿ ಎಂಬ ಬಯಕೆ ತಾಯಿಯದಾಗಿತ್ತು.

ಇಂತಹ ವ್ಯಕ್ತಿಗಳನ್ನು ಪೌರಾಣಿಕವಾಗಿ ವರ್ಣಿಸುವುದು ಕೇವಲ ದಾನಶಾಸನಗಳಲ್ಲಿ ಮಾತ್ರವಲ್ಲ, ಅರಸನ ಋಣಕ್ಕಾಗಿ, ದೇಹರಕ್ಷಣೆಗಾಗಿ ಹೋರಾಡಿ ಮಡಿದವರ ನೆನಪಿಗಾಗಿ ನಿಲ್ಲಿಸುತ್ತಿದ್ದ ವೀರಗಲ್ಲುಗಳಲ್ಲಿಯೂ ವೀರರ ಶೌರ್ಯವನ್ನು ವರ್ಣಿಸಿರುವುದು ಕಂಡುಬರುತ್ತದೆ. ಯುದ್ಧದಲ್ಲಿ ಹೋರಾಟ ಮಾಡುವ ಯೋಧನ ಮನಸ್ಸಿನಲ್ಲಿನ ಭಾವನೆ ಹೇಗಿರುತ್ತಿತ್ತೆಂದರೆ "ಯುದ್ಧದಲ್ಲಿ ಗೆದ್ದರೆ ಲಕ್ಷ್ಮೀ ದೊರಕುವಳು ಸತ್ತರೆ (ಸ್ವರ್ಗದಲ್ಲಿ) ಸುರಾಂಗನೆಯರು ದೊರಕುವರು, ದೇಹವು ಕ್ಷಣದಲ್ಲಿ ಧ್ವಂಸವಾಗುವ ವಸ್ತುವಾದ್ದರಿಂದ ಉತ್ತೇಜನಗೊಂಡ ಅವರು ಧೈರ್ಯದಿಂದ ರಣರಂಗದಲ್ಲಿ ಮುನ್ನುಗ್ಗಿ ದೇಹವನ್ನು ಹುಲ್ಲಿಗಿಂತ ಕಡೆಯಾಗಿ ಎಣಿಸಿ ಹೋರಾಡಿ, ಗೆದ್ದು ಹಿಂದಕ್ಕೆ ಬರುತ್ತಿದ್ದರು. ಅಥವಾ ಸೋತು ಯುದ್ಧದಲ್ಲಿ ಒರಗುತ್ತಿದ್ದರು."[೩೭]

ಕೊಪ್ಪಳದ ಆಗ್ನೇಯ ದಿಕ್ಕಿನ ಕೋಟೆಗೆ ಸೇರಿಸಿದ ಕ್ರಿ.ಶ. ೧೦೨೨ ಅಜಿತಸೇನಾಚಾರ್ಯನನ್ನು ವರ್ಣಿಸಿದೆ. ಒಬ್ಬ ವ್ಯಕ್ತಿತ್ವನ್ನು ಪೌರಾಣಿಕವಾಗಿ ಅಭೇದ್ಯವಾಗಿಸುವುದು ಕೇವಲ ಹಿಂದು ಧರ್ಮದಲ್ಲಿಯಷ್ಟೇ ಅಲ್ಲ, ಇತರ ಧರ್ಮೀಯರೂ ಸಹ ಇಂತಹ ಹೋಲಿಕೆಗೆ ಮುಂದಾಗುವುದು ಶಾಸನಗಳಲ್ಲಿ ದಾಖಲಾಗಿದೆ.

'ಬೆಳೆದಪುದಿನ್ನುಮುರ್ವ್ವಿ
ಪದದಪ್ಪದೆ ಪೆರ್ಮ್ಮಳೆ ಕೊಳ್ವುದಿನ್ನುಮಗ್ಗಳದ
ಗುಣಂಗಳಂ ಮೆಱೆವರಿನ್ನುಮಿಳೇಶ್ವರರಿನ್ನುಮಿ
ಲ್ಲಣಂ ಕಳಮಳಿಪಾಯಿಲಂ ಪಸವುಬ್ಬಚ್ಚಬಱಂ
ಪೆಱವುಂ ಭಯಂಗಳಾಕುಲತೆಯುಮಿನ್ನುಮಿಲ್ಲಜಿತನೇಮು
ನೀನ್ದ್ರ ತಪಟ್ರಭಾವದಿಂ'[೩೮]

ಅಜಿತಸೇನಾ ಚಾರ್ಯರು ಭೂಮಿಯ ಮೇಲೆ ಪೆರ್ಮಳೆಗಳನ್ನು ಸುರಿಸಿದಂತೆ ಅವರ ಶ್ರೇಷ್ಠ ಗುಣಗಳಿದ್ದವು. ಮತ್ತು ಅವರಿಗೆ ಹಸಿವು ನೀರಡಿಕೆಗಳಿರಲಿಲ್ಲ ಎಂದು ಅವರನ್ನು ಪೌರಾಣಿಕರಿಸಿರುವುದನ್ನು ಹೇಳಲಾಗಿದೆ.

ವೀರರಾಗಿ ಮಡಿದವರ ನೆನಪಿನಲ್ಲಿ ನಿಲ್ಲಿಸುವ ವೀರಗಲ್ಲುಗಳನ್ನು 'ವೀರ' ಎನ್ನುವ ಪದಕ್ಕೆ ವಿಶೇಷ ಅರ್ಥವಿರುವುದನ್ನು ಮರೆಯುವಂತಿಲ್ಲ. ಸಾಮಾನ್ಯವಾಗಿ ಕನ್ನಡದ 'ವೀರ' ಎನ್ನುವುದು

ಆಂಗ್ಲ ಭಾಷೆಯ 'Hero' ಎನ್ನುವ ಶಬ್ದದಿಂದ ಬಂದಿರುವಂತಹದ್ದು. ಈ 'Hero' ಎನ್ನುವುದು ಮೂಲತಃ ಗ್ರೀಕ್ ಭಾಷೆಯ ಪದ. ಹೋಮರ್ ಮಹಾಕವಿಯು ತನ್ನ 'ಇಲಿಯಡ್' ಮಹಾಕಾವ್ಯದಲ್ಲಿ 'ವೀರ' ಎನ್ನುವ ಪದವನ್ನು ದೈವಿಕ ಶಕ್ತಿಯುಳ್ಳ ಮನುಷ್ಯ, ದೇವತೆಗಳಿಂದ ದತ್ತವಾದ ಶೌರ್ಯ ಸಾಹಸ ಮತ್ತು ದಕ್ಷತೆ ಮುಂತಾದ ಗುಣವುಳ್ಳವನು ಎನ್ನುವ ಅರ್ಥದಲ್ಲಿ ಗುಣವಾಚಕ ಶಬ್ದವನ್ನಾಗಿ ಬಳಸಿದ್ದಾನೆ. ಬಹುಶಃ ಶೌರ್ಯ ಸಾಹಸವೆಂಬುದು ಎಲ್ಲರಲ್ಲಿಯೂ ಇರುವಂತಹದಲ್ಲ. ಇಂತಹ ವಿಶೇಷ ಗುಣವನ್ನು ಹೊಂದಿದವರಿಗೆ ಮಾತ್ರ ಈ ಗುಣವಾಚಕ ವಿಶೇಷಣವನ್ನು ಸೇರಿಸಿ ಈ ಪದ ಬಳಸಲಾಗಿದೆ ಎನಿಸುತ್ತದೆ. ಇದು ಕೇವಲ ಗ್ರೀಕ್ ದೇಶದ ಸಾಂಸ್ಕೃತಿಕ ಪರಿಸರಕ್ಕೆ ಸಂಬಂಧಿಸಿದ ಪದವಲ್ಲ. ಬಹುಶಃ. ಪ್ರಪಂಚದ ಯಾವುದೇ ದೇಶದ ವ್ಯಕ್ತಿಯಿರಲಿ ಅವನ ಗುಣ ಸಾಹಸಕ್ಕೆ ಈ ಪದ ಹೊಂದಾಣಿಕೆಯಾಗುತ್ತದೆ.

ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ವರ್ಣಾಶ್ರಮ ಧರ್ಮದ ಪ್ರಕಾರ ಕ್ಷತ್ರಿಯರಷ್ಟೇ ವೀರರು ಎನ್ನುವ ನಂಬಿಕೆಯಿದೆ. ಕ್ಷತ್ರಿಯರದು ರಾಜ್ಯರಕ್ಷಿಸುವ ಜವಾಬ್ದಾರಿಯನ್ನು ಕ್ಷತ್ರಿಯರಿಗೆ ಸೃಷ್ಟಿಕರ್ತನೇ ವಹಿಸಿದ್ದಾನೆಂದು ಹೇಳಿ ಈ ನಂಬಿಕೆಗೆ ಗಟ್ಟಿತನವನ್ನು ಒದಗಿಸುವ ಪ್ರಯತ್ನ ಮಾಡಲಾಗಿದೆ. ಹೀಗೆಂದ ಮಾತ್ರಕ್ಕೆ ಯುದ್ಧದಲ್ಲಿ ಭಾಗಿಗಳಾಗಿ ಜೀವದ ಹಂಗನ್ನು ತೊರೆದು ಹೋರಾಡಿದವರೆಲ್ಲರೂ ಕ್ಷತ್ರಿಯರಲ್ಲ ಎನ್ನುವುದನ್ನು ಮರೆಯುವಂತಿಲ್ಲ. ಕ್ಷತ್ರಿಯರಿಗೆ ಸಹಾಯಕರಾಗಿ ನಿಂತು ಹೋರಾಡುತ್ತಿದ್ದವರು ಹೆಚ್ಚಾಗಿ ಶೂದ್ರ ವರ್ಣದವರು. ಇಲ್ಲಿ ಜಾತಿ ಯಾವುದೇ ಇರಲಿ, ಅವರ ವೀರತ್ವ ಮುಖ್ಯ. ಪಂಪನ 'ಛಲಂ ಕುಲಂ ಬಲಂ ಕುಲಂ' ಎನ್ನುವ ಉಕ್ತಿಯು ಸಾಮಾಜಿಕ ವ್ಯವಸ್ಥೆ ರೂಪಿಸಿದ ಜಾತಿಗಿಂತ ವ್ಯಕ್ತಿಯ ಸಾಮರ್ಥ್ಯದ ಮೇಲೆ ಅವನ ಸ್ಥಾನವನ್ನು ನಿರ್ಧರಿಸಬೇಕೆಂಬುದನ್ನು ಸೂಚಿಸುತ್ತದೆ. ಹೀಗಾಗಿ ಜಾತಿಯನ್ನು ಲೆಕ್ಕಿಸದೇ ವೀರನ ಸಹಾಸವನ್ನು ಮೆಚ್ಚಿ ಅನೇಕ ವೀರಗಲ್ಲುಗಳನ್ನು ಹಾಕಿಸಲಾಗಿದೆ. "ಇತಿಹಾಸ ಕಾಲದ ವೀರರನ್ನೂ, ಅರಸರನ್ನೂ ಗಮನಿಸಿದಾಗ ವೀರತ್ವ ಯಾವುದೇ ಒಂದು ಜಾತಿಯವರಲ್ಲಿ ಮಾತ್ರ ಪ್ರಕಟವಾಗದೆ, ವ್ಯಕ್ತಿಯ ಸ್ವಾಭಿಮಾನ, ಮಹಾತ್ವಾಕಾಂಕ್ಷೆ, ಶೌರ್ಯ, ಪರಾಕ್ರಮವನ್ನು ಅವಲಂಬಿಸಿ ತನ್ನದೇ ರೀತಿಯಲ್ಲಿ ಎಲ್ಲ ಜಾತಿಯ ವ್ಯಕ್ತಿಗಳಲ್ಲಿಯೂ ಪ್ರಕಟವಾಗಿದೆ ಎನ್ನುವುದು ಅರಿವಾಗುತ್ತದೆ."[೬] ಆದಾಗ್ಯೂ ಶೂದ್ರರ ಜೊತೆ ಹೋರಾಡಲು ಕ್ಷತ್ರಿಯರು ಹಿಂಜರಿಯುತ್ತಿದ್ದರು ಎನ್ನುವ ಅಂಶವು ಗಮನಿಸತಕ್ಕದ್ದಾಗಿದೆ. ಇದಕ್ಕೆ ಕರ್ಣನ ಪ್ರಸಂಗವೇ ನಿದರ್ಶನ.

ವೀರರ ವ್ಯಕ್ತಿ ಚಿತ್ರವನ್ನು ಹೇಳುವಾಗ ಸಾಮಾನ್ಯವಾಗಿ ಸಾವಿನ ಕುರಿತು ಯೋಚಿಸಲೇ ಬೇಕಾಗುತ್ತದೆ. ಸಾವು ಎನ್ನುವುದನ್ನು ಯಾರನ್ನು ಬಿಟ್ಟಿದೆ ಹೇಳಿ? ಹುಟ್ಟಿದವನು ಒಂದಲ್ಲ ಒಂದು ದಿನ ಸಾಯಲೇ ಬೇಕು. ಸಾಯುವಾಗ ಅಪಕೀರ್ತಿಯಿಂದ, ಹೇಡಿತನದಿಂದ ಸಾಯುವುದು ವೀರನ ಲಕ್ಷಣವಲ್ಲ. ಅದಕ್ಕಾಗಿಯೇ ಬಾದಾಮಿಯ ಕಪ್ಪೆ ಅರೆಭಟ್ಟನ ಶಾಸನದಲ್ಲಿ ಹೀಗೆ ಹೇಳಲಾಗಿದೆ.

"ವರನ್ತೇಜಸ್ವಿನೋ ಮೃತ್ಯುರ್ನತು ಮಾನಾವಖಣ್ಡನಮ್

ಮೃತ್ಯುಸ್ತತ್ ಕ್ಷಣಿಕೋ ದುಃಖಮ್ಮಾನಭಂಗಂ ದಿನೇ ದಿನೇ"

ವೀರತನದಿಂದ ಹೋರಾಡಿ ಸತ್ತರೆ ಅಂತಹ ಸಾವಿನಲ್ಲಿ ಸಾರ್ಥಕತೆ ಇದೆ ಎನ್ನುವ ಧ್ವನಿಯು ಇಲ್ಲಿದೆ.

ಎಷ್ಟೇ ವೀರತ್ವ ಅಥವಾ ಶೌರ್ಯ ಜನರಲ್ಲಿ ಇದ್ದರೂ ಸಹಿತ ಸದಾ ಕಾಲ ಅವರು ಯುದ್ಧ ಮಾಡುತ್ತಲೇ ಇರಬೇಕು ಎಂದು ಬಯಸುವವರಲ್ಲ. ಅವರಿಗೂ ಬದುಕುವ ಆಸೆ ಇದ್ದೇ ಇರುತ್ತದೆ. ಕೆಲ ಸಂದರ್ಭಗಳಲ್ಲಿ ಅವರು ಯುದ್ಧವನ್ನು ಸಹಜವಾಗಿಯೇ ನಿರಾಕರಿಸುತ್ತಾರೆ. ಆದರೆ ಪ್ರಭುತ್ವವು ಯುದ್ಧವನ್ನು ನಿರಾಕರಿಸುವಂತಿಲ್ಲ. ರಾಜ್ಯ ರಾಜ್ಯಗಳ ನಡುವೆ ನಿರಂತರ ಯುದ್ಧ ನಡೆಯುವುದು ಸಹಜ. ಆಗ ಪ್ರಭುತ್ವವು ಯುದ್ಧವನ್ನು ನಿರಾಕರಿಸುವ ಜನರನ್ನು ಧರ್ಮದ ಹೆಸರಿನಲ್ಲಿ ಪ್ರಚೋದಿಸುತ್ತಿದ್ದರು ಎನ್ನುವಂತಹ ಅಂಶವನ್ನು ಚೀನಾ ದೇಶದ ಪ್ರವಾಸಿ ಹ್ಯುಯೆನ್‌ತ್ಸಾಂಗ್ ತನ್ನ ಪ್ರವಾಸಿ ಕೃತಿಯಲ್ಲಿ ತಿಳಿಸಿದ್ದಾರೆ. ಈ ಕೃತಿಯಲ್ಲಿ ಪ್ರಸ್ತಾಪಿಸಿರುವ ಪ್ರಚೋದಕ ಅಂಶವೊಂದು ಹೀಗಿದೆ; "ಜನನ ಮರಣವೆಂಬ ಉಬ್ಬರವಿಳಿತಗಳುಳ್ಳ ಅನಂತ ಸಾಗರ. ಅದರ ಸುಳಿಗೆ ಸಿಕ್ಕಿದರೆ ಬುದ್ಧಿವಂತರೂ ಅವುಗಳಿಂದ ತಪ್ಪಿಸಿಕೊಳ್ಳಲಾರರು. ಅವರನ್ನು ಕಷ್ಟದಿಂದ ಪಾರು ಮಾಡುವುದಕ್ಕೆ ಒಂದು ಉಪಾಯವಿದೆ. ಯಾರು ಯುದ್ಧಕ್ಕೆ ಹೋರಾಡಿ ಸಾಯುತ್ತಾರೋ ಅವರಿಗೆ ಪುನಃ ಮನುಷ್ಯ ಜನ್ಮ ಪ್ರಾಪ್ತವಾಗುತ್ತದೆ. ಇದರಿಂದ ದೇವರು ತೃಪ್ತಗೊಂಡ ಆಶೀರ್ವಾದ ಮಾಡುತ್ತಾನೆ. ಸ್ವಲ್ಪ ಕೆಲಸದಿಂದ ಅನುಕೂಲ ಪಡೆಯಬಹುದಾದ ಅಂಥ ಅವಕಾಶವನ್ನು ಏಕೆ ಕಳೆದುಕೊಳ್ಳಬೇಕು ? ಈ ಮನುಷ್ಯ ಶರೀರದ ಮೇಲೆ ಮರವೆಯ ಅಂಧಕಾರ ಪ್ರಾಪ್ತವಾಗುತ್ತದೆ. ಆದುದರಿಂದ ಒಳ್ಳೆಯ ಕರ್ಮ ಮಾಡುವುದರಲ್ಲಿ ಪ್ರತಿಯೊಬ್ಬನೂ ನಿರತನಾಗಬೇಕು. ರಣರಂಗದಲ್ಲಿ ಸತ್ತರೆ ಮನೆಗೆ ಹಿಂತಿರುಗಿ ಬಂದಂತೆ" ಹೀಗೆ ಮನುಷ್ಯನ ಜನ್ಮ, ಸಾವಿನ ಬಗ್ಗೆ ಹೇಳಿ ಜನರನ್ನು ಯುದ್ಧಕ್ಕೆ ಪ್ರೋತ್ಸಾಹಿಸಿದ್ದಾರೆ.

ವೀರತ್ವದಿಂದ ಹೋರಾಡಿ ಮಡಿದ ಎನ್ನುವ ಮಾತ್ರಕ್ಕೆ ಆ ವ್ಯಕ್ತಿಗೆ ಶ್ರೇಷ್ಠ ಪಟ್ಟ ಕೊಡಬೇಕಾಗಿಲ್ಲ. ಅವನು ಹೋರಾಡಿರುವುದು ಯಾವ ಉದ್ದೇಶಕ್ಕೆ ಎನ್ನುವುದನ್ನು ಕೂಡ ಲೆಕ್ಕಿಸಬೇಕು ಎನ್ನುವ ಭಾವನೆ ಜನರಲ್ಲಿತ್ತು. ಇದಕ್ಕೆ ಕುಮಾರರಮಾನ ಸಾಂಗತ್ಯದಲ್ಲಿಯ ಒಂದು ಪದ್ಯವನ್ನು ನೋಡಬಹುದು.

ಸಾಯಬಹುದು ಕರ್ಣ ಕಳಶಸಂಭವ ಗಾಂ
ಗೇಯರಂತಾಜಿರಂಗದೊಳು ।
ಸಾಯಬಾರದು ರಾವಣ ಕೀಚಕ ಕುರು
ರಾಯರಂತಪಕೀರ್ತಿಯಿಂದ॥[೪೦]

ಹಾಗೆಯೇ ಅಭಿಮನ್ಯುವು ವೀರಾವೇಶದ ಹೋರಾಟದಲ್ಲಿ ಮಡಿದಾಗ, ಅವನನ್ನು ಮೋಸದಿಂದ ಕೊಂದ ವಿಷಯ ತಿಳಿದ ದುರ್ಯೋಧನನು ತಮ್ಮ ಪಕ್ಷದವರು ಮಾಡಿದ ತಪ್ಪಿನ ಅರಿವಾಗಿ ಮಮ್ಮಲ ಮರುಗುವುದು, ಕಿರಿಯನಾದರೂ, ತನ್ನ ಮಗನ ವಯಸ್ಸಿನ ವರಾದರೂ ಅಭಿಮನ್ಯುವಿನ ಆಗ ಕುರುರಾಯರು ಕೈ ಮುಗಿಯುವುದು ನಿಜವಾದ ವೀರತ್ವಕ್ಕೆ ನೀಡಿದ ಗೌರವವನ್ನು ತಿಳಿಸುತ್ತದೆ.

ಏನೇ ಇದ್ದರೂ ವೀರತ್ವ ಎನ್ನುವುದು ಸಹಜವಾಗಿಯೇ ಹೊರಹೊಮ್ಮಿದಾಗ ಅದಕ್ಕೆ ವಿಶೇಷ ಗೌರವವಿರುತ್ತದೆ. ಹೀಗೆ ವೀರತ್ವವು ಸಹಜವಾಗಿ ಹೊರಹೊಮ್ಮುವುದಕ್ಕೆ ಸ್ವಾಭಿಮಾನವು ಕಾರಣವಾಗುತ್ತದೆ. ಮಾತೃಭೂಮಿಯ ಬಗೆಗೆ ಹೊಂದಿರುವ ಅಭಿಮಾನವೂ ಕೂಡ ಇಂತಹ ಸ್ವಾಭಿಮಾನಕ್ಕೆ ಪ್ರೇರಕವಾಗಿ ಕೆಲಸ ಮಾಡುತ್ತದೆ. ತಮ್ಮದೆನ್ನುವ ಪ್ರದೇಶದ ಮೇಲೆ ಅನ್ಯರಾದವರು ಆಕ್ರಮಣ ಮಾಡಿದಾಗ ಸ್ವಾಭಿಮಾನವು ಕೆರಳಿ ಶೌರ್ಯದ ರೂಪವನ್ನು ಪಡೆದುಕೊಳ್ಳುತ್ತದೆ.

ಹೀಗೆ ವೀರತ್ವದಿಂದ ಹೋರಾಡಿ ಮಡಿದವರ ನೆನಪಿಗಾಗಿ ಸ್ಮಾರಕ ರೂಪದಲ್ಲಿ ನಿಲ್ಲಿಸುವ ಶಿಲೆಗಳೇ ವೀರಗಲ್ಲುಗಳು. ಇಂತಹ ವೀರಗಲ್ಲುಗಳನ್ನು ಹಾಕಿಸುವ ಉದ್ದೇಶ ಹೀಗಿರುತ್ತದೆ. "ವೀರಗಲ್ಲುಗಳನ್ನು ನಿಲ್ಲಿಸುವಲ್ಲಿ ಲೌಕಿಕ ಮತ್ತು ಪಾರಮಾರ್ಥಿಕ ದೃಷ್ಟಿಗಳೆರಡೂ ಇತ್ತೆಂದು ತೋರುತ್ತದೆ. ವೀರನ ಪರಾಕ್ರಮವನ್ನು ಮೆಚ್ಚಿ ವೀರಗಲ್ಲನ್ನು ನೆಡುವುದು; ಅವನ ಪರಾಕ್ರಮ ಲೋಕಕ್ಕೂ ತಿಳಿಯಲೆಂದು ನೆಡುವುದು, ಇವು ಲೌಕಿಕ ಉದ್ದೇಶಗಳು. ಮಡಿದ ವೀರನಿಗೆ ವೀರಗಲ್ಲನ್ನು ನಿಲ್ಲಿಸುವುದು ನಮ್ಮ ಕರ್ತವ್ಯ ಎಂದು ಭಾವಿಸಿ, ಹಾಗೆ ವೀರಗಲ್ಲು ನಿಲ್ಲಿಸುವುದರ ಮೂಲಕ ಅವನಿಗೆ ಸ್ವರ್ಗವೋ, ಕೈಲಾಸವೋ, ವೈಕುಂಠವೋ ಪ್ರಾಪ್ತವಾಗುತ್ತದೆಯೆಂದು ನಂಬಿ ವೀರಗಲ್ಲುಗಳನ್ನು ನೆಡುವುದು. ಇವು ಪಾರಮಾರ್ಥಿಕ ಉದ್ದೇಶಗಳು."[೪೧] ವೀರಗಲ್ಲುಗಳನ್ನು ನಿಲ್ಲಿಸುವುದರ ಹಿಂದೆ ಲೌಕಿಕತೆಯ ಜೊತೆಗೆ ಆ ವ್ಯಕ್ತಿಯನ್ನು ಪೌರಾಣಿಕಕ್ಕೆ ತಂದು ನಿಲ್ಲಿಸುವ ಉದ್ದೇಶವೂ ಇದೆ. ಹಾಗೆಯೇ ಆತನ ವೀರತ್ವವನ್ನು, ಮಾತೃಭೂಮಿಗಾಗಿ ಆತನು ಮಾಡಿದ ಸೇವೆಯನ್ನು ಲೋಕವರಿಯುವಂತೆ ಮಾಡುವ ಉದೇಶವಿದ್ದು, ಅಂತವರ ಪ್ರೇರಣೆಯು ನಂತರ ಕಾಲದ ಜನರಿಗಾಗಿ ಅವರೂ ಸಹಿತ ಸ್ವಯಂಪ್ರೇರಿತರಾಗಿ ಹೋರಾಟಕ್ಕೆ ಅಣಿಯಾಗಲೆನ್ನುವ ಪ್ರಭುತ್ವ ವ್ಯವಸ್ಥೆಯ ಹುನ್ನಾರವೂ ಇದರಲ್ಲಿದೆ ಎನ್ನುವುದನ್ನು ಮರೆಯುವಂತಿಲ್ಲ.

ಗಮನಿಸಬೇಕಾದ ಮುಖ್ಯ ಅಂಶವೆಂದರೆ ವೀರಗಲ್ಲುಗಳನ್ನು ನಿಲ್ಲಿಸುವ ಸ್ಥಳ. ಕರ್ನಾಟಕದಲ್ಲಿ ವೀರಗಲ್ಲುಗಳು ಅಧಿಕ ಪ್ರಮಾಣದಲ್ಲಿ ಕಾಣಸಿಗುವುದು ದೇವಾಲಯಗಳ ಬಳಿಯೇ. ದೇವಾಲಯಗಳು ಸಾರ್ವಜನಿಕರು ಭೇಟಿ ಮಾಡುವ ಪ್ರಮುಖ ಸ್ಥಳವಾಗಿದ್ದ ರಿಂದಾಗಿಯೇ ಹೆಚ್ಚಿನ ಪ್ರಮಾಣದ ವೀರಗಲ್ಲುಗಳನ್ನು ಇಲ್ಲಿ ನೆಡಲಾಗಿದೆ. "ವೀರಗಲ್ಲುಗಳನ್ನು ದೇವಾಲಯಗಳ ಮುಂದೆ ನಿಲ್ಲಿಸುವಲ್ಲಿ ಅವರ ಮುಖ್ಯ ಉದ್ದೇಶ ವೀರನು ದೇವರ ಸನ್ನಿಧಿಯಲ್ಲಿರುತ್ತಾನೆ ಎಂಬ ನಂಬಿಕೆ. ವೀರಗಲ್ಲಿನ

ಆರಾಧನೆ ಒಂದು .ನಿಯಕಾಲದಲ್ಲಿ ನಡೆಯಬೇಕಾದ ಆಚರಣೆಯೆಂದು ಭಾವಿಸಿದ್ದ ಕಾಲದಲ್ಲಿ ದೇವಾಲಯ ಮತ್ತು ವೀರನ ಸ್ಮಾರಕ ಒಂದೆಡೆಗೆ ಇರುವುದರ ಅನುಕೂಲತೆಯೂ ಅವರಿಗೆ ಕಂಡಿರಬೇಕು. ದೇವಾಲಯಗಳಿಗೆ ಸಹಜವಾಗಿ ಜನರು ಹೋಗುತ್ತಿದ್ದ ಕಾರಣದಿಂದಾಗಿ ಅವರಿಗೆ ಅನಾಯಾಸವಾಗಿ ವೀರನ ಪರಾಕ್ರಮದ ಪರಿಚಯವೂ ಆಗುತ್ತದೆ ಎಂಬುದಾಗಿ ಅವರು ಭಾವಿಸಿದ್ದಿರಬೇಕು. ಆದರೆ ವೀರಗಲ್ಲುಗಳನ್ನು ದೇವಾಲಯಗಳ ಮುಂದೆ ನಿಲ್ಲಿಸುವಲ್ಲಿ ಮುಖ್ಯವಾಗಿ ಧಾರ್ಮಿಕತೆಯೇ ಪ್ರಧಾನ ಅಂಶವಾಗಿತ್ತೆಂದು ತೋರುತ್ತದೆ."[೨] ಕೆಲವೊಂದು ಸಂದರ್ಭದಲ್ಲಿ ಎಲ್ಲಿಯೋ ಬಿದ್ದ ವೀರಗಲ್ಲುಗಳನ್ನು ದೇವಸ್ಥಾನಗಳ ಮುಂದೆ ತಂದು ನಿಲ್ಲಿಸಿರುವ ಸಾಧ್ಯತೆಗಳು ಇರುತ್ತವೆ.

ವೀರಗಲ್ಲುಗಳನ್ನು ಎಲ್ಲಿಯೇ ನಿಲ್ಲಿಸಲಿ, ವೀರನ ಆತ್ಮವನ್ನು ಅದರಲ್ಲಿ ಆವಾಹನೆ ಮಾಡಿ ಅವುಗಳನ್ನು ಪ್ರತಿಷ್ಠಾಪಿಸುವ ಪದ್ಧತಿ ರೂಢಿಯಲ್ಲಿದ್ದಂತೆ ತಿಳಿದು ಬರುತ್ತದೆ. ಅಂದರೆ ಸ್ಮಾರಕ ಶಿಲೆಯಲ್ಲಿ ವೀರನ ಆತ್ಮ ನೆಲೆಸುವಂತೆ ಮಾಡಿವುದು. ಯುದ್ಧದಲ್ಲಿ ಸತ್ತರೆ ಪರಲೋಕದಲ್ಲಿ ಸುಖಿಸಬಹುದೆನ್ನುವ ನಂಬಿಕೆ ಇತ್ತು. ರಣರಂಗದಲ್ಲಿ ಸತ್ತು ವೀರನಿಗಾಗಿ ದೇವಲೋಕದಲ್ಲಿ ಕನ್ನೆಯರು ಕಾದುಕೊಂಡಿರುತ್ತಾರಂತೆ. ಅಷ್ಟೇ ಅಲ್ಲ ಅವನನ್ನು ಪಡೆಯಲು ಅವರಲ್ಲಿ ಪೈಪೋಟಿಯೂ ನಡೆಯುತ್ತಿದ್ದಂತೆ ಹೇಳಲಾಗುತ್ತದೆ. ಬ್ರಹ್ಮಲೋಕಕ್ಕೆ ಪ್ರವೇಶ ಮಾಡುವ ಮೊದಲು ಸೂರ್ಯ ಮಂಡಲವನ್ನು ದಾಟಬೇಕು ಎನ್ನುವ ಪೌರಾಣಿಕ ನಂಬಿಕೆಯಿದೆ. ಆದರೆ ಈ ಸೂರ್ಯ ಮಂಡಲವನ್ನು ಭೇದಿಸುವ ಶಕ್ತಿ ಇರುವುದು ಇಬ್ಬರಿಗೆ ಮಾತ್ರ ಒಬ್ಬ ಯೋಗಿ, ಮತ್ತೊಬ್ಬ ಹೋರಾಡುತ್ತ ಸತ್ತ ವೀರ. ಅಂದರೆ ವೀರನನ್ನು ಯೋಗಿಗೆ ಸಮನಾದವನು ಎಂದು ಚಿತ್ರಿಸುವ ಮೂಲಕ ಜನರಲ್ಲಿ ಆತನ ಬಗ್ಗೆ ಮತ್ತಷ್ಟು ಗೌರವ ಮತ್ತು ಭಕ್ತಿ ಮೂಡುವಂತೆ ಮಾಡಲಾಗಿದೆ. ಈ ಹಿನ್ನೆಲೆಯಲ್ಲಿ ಹಲವು ವೀರಗಲ್ಲುಗಳು ಕಾಣಸಿಗುತ್ತವೆ. ನಿದರ್ಶನಕ್ಕಾಗಿ ಈ ಕೆಳಗಿನವುಗಳನ್ನು ನೋಡಬಹುದು.

ಹರಪನಹಳ್ಳಿ ತಾಲೂಕು ಕಡಬಗೆರೆಯಲ್ಲಿ ದೊರೆತ ೧೦ನೆಯ ಶತಮಾನಕ್ಕೆ ಸೇರಿದ ಲಿಪಿಸಹಿತ ವೀರಗಲ್ಲಿನಲ್ಲಿ ಮಾಳಯ್ಯನು ಮಹಾಸಾಮಂತನಾದ ಬಿಜ್ಜನ ಪರ ಹೋರಾಡಿ ಮಡಿದ ವಿವರವನ್ನು ಉಲ್ಲೇಖಿಸಲಾಗಿದೆ.

'ನನ್ನಿಮಾರ್ತಂಡ ಕದಂಬವಂಶೋದ್ಭವಂ ಶ್ರೀಮತ್ ಕಣ್ಣವಾರ... ನಾಕಲೊಕ್ಕನ ಮಗನುಂಗ
...ನಟಂಬವಾಡಿಯಯ್ಯಪದೇವನ ಮಗನಪ್ಪಣ್ಣಿಗನ್ ಪರಿಬನ್ದು ಪಡುಗಲ್ಲ ಮುತ್ತಿದೊಡೆ
[ಕೋ]ಲಂಬು ಪಾಱಿದೊಡೆ ಮಣ್ಣಿನ
ನೊಟಂಬವಾಡಿಯಯ್ಯಪದೇವನ ಮಗನಣ್ಣಿಗಂ ಸ್ರಾವಣ ಸುದ್ಧ ಭಾದ್ರಪದ ಮಾಸದ
ಬಹಳ
(?) ಪುಣ್ಣಿಮೆಯುಮಙ್ಗರವಾರದಂದು

ಕಾಲಾಳ್ಕಾದುತ್ತಿರೆ ಸಜ್ಜಲಂಬು ಪಾಜೆದೊಡೆ ಮಾಣೆನೆನ್ದು ಬರ್ಕ್ಕಂಬಿ...ಳಿಟ್ದು ಬನ್ದು

ಪರಿಯ ಕಾದಿ ಗೆಲ್ದು ಸುರಗಿಜೆದು ಸ್ವರ್ಗ್ಗತ್ತ"೪೩

ಹರಪನಹಳ್ಳಿ ತಾಲೂಕಿನ ಬಾಗುಳಿ ಗ್ರಾಮದಲ್ಲಿನ ದೊರೆತ ವೀರಗಲ್ಲಿನಲ್ಲಿ ಮಹಾಬಲಿವಂಶದ ಏಚರಸನ ಮಗ ಗೂಳಿದೇವನು ಚೋಳರ ಕುದುರೆಯನ್ನು ಎದುರಿಸಿ ಸತ್ತಂತೆ ಉಲ್ಲೇಖಿಸಿದೆ.

"ಪೆಂಪೆಸೋ ನೀಗ್ಗುಂದ ಗ್ರಾಮಂ ಸೋಲಗಂಗನಚಕ್ರ ಅಯವೊನ್ದ

ಕೊಲವಿದಕೆ ಭ್ರಿತ್ಯ ಪಾರಾಯಣ ಅರನಂತಬಿರುದಕೊಣ್ಡ

ಪ್ರವೊತ ತಕ್ಕೋಜಂ ನೀತಿಸೋಂ ಗಂಗನಚಕ್ರಂ ಅಯ್ಯವೊನ್ತ

ಬಂಟರಭಾವಂ ನುದಿಸನ್ತೆಗಣ್ಡಂ ತೊಲಗಣ್ಡಂ ಛಲವಾದಿಗಣ್ಡಂ

ಪ್ರಜೆಮೆಚ್ಚೆಗಣ್ಡಂ ಕೆವಾರೆಸಿಂಘಂ ಅಣ್ಣನವದ್ರಿ

ಅಯ್ಯದಿಂಬಜ ದೆಸೆದವಳಂ ಸಮಯ ಆಸನ್ನಾ

ಹದ್ವಿಜಟ ಮುರಾರಿ ಏಚರಸನ ಪುತ್ರಂ ಧಟಿಮು

ಟ್ಟೆಗಣ್ಡಂ ರಥದ ಪಾಳೆಯಲ್ಲಿ ಚೋಳವಾಳಿಯ ಕುದುರೆಯ

ಮೇಲಾಳ ಪೆಣದಿಜೆದು ಸುರಲೋಕಪ್ರಾಪ್ತನಾದ ಗೂಳಿದೇವ"೪೪ (ಈ ಶಾಸನದಲ್ಲಿ ಏಚರಸನನ್ನು ಕೊಂಡಾಡಿ ಅಂಥವನ ಮಗನಾದ ಗೂಳಿದೇವನು ಸತ್ತಾಗ ಆತನ ನೆನಪಿಗಾಗಿ ಈ ವೀರಗಲ್ಲನ್ನು ನಿಲ್ಲಿಸಿದಂತೆ ಹೇಳಲಾಗಿದೆ.

ಒಬ್ಬ ವ್ಯಕ್ತಿಯ ಸಾಧನೆಯನ್ನು ಉನ್ನತ ಪಟ್ಟಕ್ಕೇರಿಸಿ ಅದನ್ನು ಪೌರಾಣಿಕ ಅಂಶಗಳೊಂದಿಗೆ ಜನರ ಮನಸ್ಸನ್ನು ಸೆಳೆಯುವಲ್ಲಿ ವೀರಗಲ್ಲು ಪ್ರಮುಖವಾದವುಳು. ಆ ಕಲ್ಲುಗಳ ಮೇಲೆ ಮಡಿದ ವ್ಯಕ್ತಿಯ ಬಗೆಗೆ ನೇರವಾದ ಹೊಗಳಿಕೆ ಇಲ್ಲದಿದ್ದರೂ ಸಹಿತ ಅಲ್ಲಿ ಚಿತ್ರಿಸಲ್ಪಟ್ಟ ಶಿಲ್ಪಗಳಿಂದ ಈ ಅಂಶವನ್ನು ಅರ್ಥಮಾಡಿಕೊಳ್ಳಬಹುದು. ಮಡಿದ ವೀರನು ಸ್ವರ್ಗಕ್ಕೆ ಹೋಗುವುದು, ಅಲ್ಲಿ ಆತನಿಗೆ ಯೋಗಿಗೆ ಸಮನಾದ ಸ್ಥಾನಮಾನ ದೊರೆಯುವುದೆಂದರೆ ಸಾಮಾನ್ಯ ಮಾತಲ್ಲ. ಅದೆಷ್ಟೋ ವರ್ಷಗಳ ಕಾಲ ಶ್ರದ್ಧೆಯಿಂದ ತಪಸ್ಸು ಮಾಡಿ ಶಿವನನ್ನು ಒಲಿಸಿಕೊಂಡವರಿಗೆ ಸಮಾನವಾಗಿ ಧರ್ಮಯುಕ್ತವಾದ ಹೋರಾಟ ನಿಲ್ಲುತ್ತದೆ. ಧರ್ಮಯುಕ್ತವಾದ ಅಥವಾ ಲೋಕೋಪಕಾರವಾದ ಯಾವುದೇ ಒಂದು ಕೆಲಸ ಎಳ್ಳುಕಾಳಷ್ಟಿದ್ದರೂ ಸಾಗದಷ್ಟು ಪುಣ್ಯ ಲಭಿಸುತ್ತದೆ ಎಂಬ ಭಾವನೆಯನ್ನು ಇಂತಹ ವೀರಗಲ್ಲುಗಳ ಮೂಲಕ ಜನರಿಗೆ ತಲುಪಿಸುವ ಕಾರ್ಯ ನಡೆದಿದೆ ಎನಿಸುತ್ತದೆ. ಸಣ್ಣಕಾರ್ಯವೊಂದು ಪುಣ್ಯ ಲಭಿಸಲಿಕ್ಕೆ ಕಾರಣವಾಗುತ್ತದೆ ಎನ್ನುವುದಕ್ಕೆ ಶಾಸನವೊಂದರಲ್ಲಿ ಉಕ್ತವಾಗಿರುವ ವಾಯು ಪುರಾಣದ ಶ್ಲೋಕವನ್ನು ನೋಡಬಹುದು.

ಲಾವಕಶ್ಚ ವರಾಹಶ್ವ ಮಹಿಷೀ ಕುಂಜರ ಸ್ತಥಾ

ಉಪದೇಶಾಚ ಕರ್ತಾಚ ಷಡೈತೇ ಸ್ವರ್ಗಗಾಮಿನಃ ॥

ಕೆಲ ಶಾಸನಗಳು ಪೌರಾಣಿಕ ವ್ಯಕ್ತಿಯು ಅನುಸರಿಸಿದ್ದ ಮೌಲ್ಯಗಳನ್ನು ತಮ್ಮ ಕಾಲದ ವ್ಯಕ್ತಿ ತನ್ನ ಜೀವನದಲ್ಲಿ ಅಳವಡಿಸಿಕೊಂಡಿದ್ದರಿಂದ ಅಂತಹವರನ್ನು ಪೌರಾಣಿಕ ವ್ಯಕ್ತಿಗಳೊಂದಿಗೆ ಹೋಲಿಸುವ ಪರಿಪಾಟ ಅನುಸರಿಸಿವೆ. ಇನ್ನೂ ಮುಂದುವರೆದು ಇಂತಹ ಶಾಸನಗಳು ವ್ಯಕ್ತಿಗಳ ನಡವಳಿಕೆಗಳನ್ನು ನೇರವಾಗಿ ಹೇಳುತ್ತಾ ಆ ವ್ಯಕ್ತಿಯ ಗುಣಗಳು ಯಾವ ಪೌರಾಣಿಕ ವ್ಯಕ್ತಿಯ ಗುಣಗಳಿಗೂ ಕಡಿಮೆಯೇನಲ್ಲ ಎಂಬುದನ್ನು ಒತ್ತಿ ಹೇಳುತ್ತವೆ. ಆ ಮೂಲಕ ಪುರಾಣ ಸಂಗತಿಯನ್ನು ವಾಸ್ತವದ ನೈಜ ಘಟನೆಯನ್ನಾಗಿ ಕಾಣುವಂತೆ ಮಾಡುತ್ತವೆ.

ಈ ರೀತಿಯ ವೀರರ ಪರಾಕ್ರಮವನ್ನು ತಿಳಿಸುವ ವೀರಗಲ್ಲುಗಳು ನಮಗೆ ಹೇರಳವಾಗಿ ದೊರೆಯುತ್ತವೆ. "ಕರ್ನಾಟಕದಲ್ಲಿ ದೊರೆಯುವ ಅಸಂಖ್ಯಾತವಾದ ವೀರಗಲ್ಲುಗಳು ವೀರರ ಪರಾಕ್ರಮವನ್ನು ತಿಳಿಸುವ ಸ್ಮಾರಕಗಳೇ ಆದರೂ ಅವು ಮೂಲಭೂತವಾಗಿ ಸಾವಿನನಂತರ ಜೀವನದ ಬಗ್ಗೆ ಪುರಾಣಗಳು ರೂಪಿಸಿದ ಪರಿಕಲ್ಪನೆಯಿಂದಲೇ ರೂಪುಗೊಂಡಂಥವು. ವೀರಗಲ್ಲುಗಳ ಪಾಠ ಮತ್ತು ಶಿಲ್ಪಗಳು ಈ ಪುರಾಣ ಪ್ರಜ್ಞೆಯಿಂದ ರೂಪುಗೊಂಡು, ಪುರಾಣ ಮೌಲ್ಯಗಳನ್ನೆ ವೈಭವೀಕರಿಸಿ, ಆ ಮೂಲಕ ಆಳುವ ವ್ಯವಸ್ಥೆ ಜನರನ್ನು ತಮ್ಮ ಪರವಾಗಿ ಹೋರಾಡುವಂತೆ ಆಕರ್ಷಿಸಿತು ಎಂಬುದು ವಾಸ್ತವ ಸಂಗತಿ"[೪೫]

ಶಾಸನಗಳಲ್ಲಿ ಅರಸರು, ಸಾಮಂತರು ಅವರು ಮಾಡುವ ಕಾರ್ಯಗಳು ಪೌರಾಣಿಕ ವ್ಯಕ್ತಿಗಳು ಮಾಡಿದ ಕಾರ್ಯಗಳಂತೆ ಹೋಲಿಕೆಯಿದ್ದರೆ ಅಂತವುಗಳನ್ನು ಆ ವ್ಯಕ್ತಿಯ ಜೊತೆಗೆ ಸಮೀಪಕರಿಸಿ ಬರೆಯಿಸುವ ಪರಿಪಾಟವನ್ನು ಅನುಸರಿಸಿವೆ.

*** ಸ್ಥಳಸಂಬಂಧಿ ಪೌರಾಣಿಕ ಅಂಶಗಳು**

ಸ್ಥಳಪುರಾಣಗಳು ಒಂದು ಪ್ರದೇಶದ ಮಹಿಮೆಯನ್ನು ಹೇಳುವುದಾಗಿದೆ. ಆ ಸ್ಥಳದ ಪವಾಡ, ವದಂತಿ, ದಂಥಕತೆ ಮೊದಲಾವುದಗಳನ್ನು ದೈವೀ ಕಲ್ಪನೆಗಳನ್ನು ಸ್ಥಳ ಪುರಾಣ ಎನ್ನಲಾಗುತ್ತದೆ. ಸ್ಥಳನಾಮಗಳು ಹೆಚ್ಚಾಗಿ ಅಲ್ಲಿನ ನೈಸರ್ಗಿಕತೆ ಮತ್ತು ಧಾರ್ಮಿಕತೆಯ ಆಧಾರದ ಮೇಲೆ ಹುಟ್ಟಿಕೊಂಡಿರುತ್ತವೆ. "ಒಂದು ಕ್ಷೇತ್ರದ ಮಹಾತ್ಮೆ ವ್ಯಕ್ತವಾಗುವುದು ಅಲ್ಲಿಯ ಅನನ್ಯ ಸದೃಶ್ಯವಾದ ಪರಿಸರದ ಪವಾಡ ಶಕ್ತಿಯಿಂದಲೇ ಎಂದು ಇಂದಿಗೂ ನಮ್ಮಲ್ಲಿ ನಂಬಿಕೆಯಿದೆ. ವಾಸ್ತವ ಪ್ರಪಂಚದ ನಡವಳಿಕೆಗಿಂತಲೂ ಅಲ್ಲಿ ಭಿನ್ನವಾದ ನಡವಳಿಕೆಯಿರುತ್ತದೆ. ಅದೇ ಸ್ಥಳ ಮಹಾತ್ಮೆ. ಎಂಥ ಕ್ರೂರನೂ ಅಲ್ಲಿ ದಯಾರ್ದ್ರ ಹೃದಯಿ. ಎಂಥ ಪಾಪಿಯೂ ಅಲ್ಲಿ ಪುಣ್ಯಾತ್ಮನೂ

ಆಗುತ್ತಾನೆ ಎಂಬುದು ನಂಬಿಕೆ."[೪೬] ಇಂತಹ ನಂಬಿಕೆಯಿಂದಲೇ ಅನೇಕ ಬಗೆಯ ಸ್ಥಳಸಂಬಂಧಿ ಪೌರಾಣಿಕ ವಿಷಯಗಳು ಹುಟ್ಟಿಕೊಂಡಿವೆ. ಅಂದರೆ ಸ್ಥಳಪುರಾಣಗಳು ಒಂದು ಪ್ರದೇಶದ ಧಾರ್ಮಿಕ ಮಹತ್ವವನ್ನು ಹಾಗೂ ಆ ಪ್ರದೇಶದೊಂದಿಗೆ ದೇವತೆಗಳು ಹೊಂದಿರುವ ಸಂಬಂಧವನ್ನು ತಿಳಿಸುತ್ತವೆ.

ಸೊಗಲ ಕ್ಷೇತ್ರವನ್ನು ಶಾಸನವೊಂದು ಹೀಗೆ ವರ್ಣಿಸುತ್ತದೆ.

"ಪಂಕಜ ಷಂಡದಿದೆಸೆವ ನೆಯ್ದಿಲ ಪೂಗೋಳದಿಂ ತಳಿರ್ತ್ತಮಾ
ವಿಂ ಕುಸುಮೇದಿತಂ ಕೆಲಸಗು ಪಾದರಿ ನೇಜಿಲಶೋಕ ಬಾಳೆಯಿಂ
ಬಂಕದ ವೃಕ್ಷಜಾತಿಗಳಿನಿಂಚರದಿಂ ಪುಗತಿಂಬ ಕೋಕಿಳಾ
ಳಂಕೃತದಿಂದೆ ಸಾಲ ಬನಮೊಪ್ಪುವುದೀ ವಿಷಯಾಂತರಾಳದೊಳ್॥
ಅಲಙ್ಘ ನಿರ್ಜ್ಝರೋದಕದಿನೊಪ್ಪುವ ತೀರ್ತ್ಥಮಿದೀ ಜಗಕ್ಕೆ ಪೆಂ
ಪೆಲ್ಲಮನಾನ್ತ ಶಂಕರ ಸ್ವಯಂಭು ಸುವರ್ಣ ಮಹಾಕ್ಷಿದೇವಪಾ
ದೋಲ್ಲಸಿತಾಂಬುಜಂಗಳನೆ ಪೂಜಿಪ ಭಕ್ತಜನಕ್ಕೆ ಮುಕ್ತಿತ
ಳ್ವಿಲ್ಲದೆ ಕೂಡುಗೆಂದು ಪೊಗರ್ದ್ದಂ ಕವಿಕೇಶಮದ ಪ್ರಭಂಜನ॥
ಪುತಿಗಳೆ ಧರ್ಮಶ್ರವಣಮ
ನೆಲೆ ಮಿಡುಕದೆ ಕೇಳುತಿರ್ಪ್ಪವರಗಿಳಿಗಳ್ನಿ
ರ್ಮ್ಮಳ ಮುನಿಪರೋದು ವೋದಂ
ಚಳವಾದೆಡೆಯಜೆದು ಪೇಳ್ವವಿರುಳಂ ಪಗಲುಂ
ಆನರ ಸಂಹತಿ ದೇವ
ಸ್ನಾನಂ ಮಾಡುವರ್ಗ್ಗೆ ಗದ್ದುಗೆಯ ನೀರಂಸ
ನ್ಮಾನದೆ ತನ್ದೀವುವೆನ
ಲ್ಕಾನಜೆಯೆಂ ಪೊಗಳಲವರ ತಪದುಗ್ರತೆಯ
ಪಾಪಿ ಪುಗಲು ಪುಗಲುಗ್ರದ
ಕೋಪಿ ಪುಗಲು ಪುಗಲಶೇಷಧರ್ಮ್ಮದ್ರೋಹ
ವ್ಯಾಪಾರಿ ಪುಗಲ್ಪುಗತಿ
ನ್ದಾಪೊರ್ತು ಕೋಕಿಳಂಗಳುಲಿಗುಂ ಬನದೊಳ್
ಗಳಪುವರಗಿಳಿಯ ಕುಕಿಲುವ
ಕಳಹಂಸೆಯ ಗಾವರಿಪ್ಪ ಪೆಣ್ದುಂಬಿಯ ಬಾ
ವಳಿಸುವ ಪುರುಳಿಯ ಕೋಡಗ
ಗಳ ನಗಿಸುವ ರವಮೆ ನಗದ ನಾಲ್ಕುಂ ದೆಸೆಯೊಳ್

ನೋಡುತಮನು ಮುಟ್ಟಿಸಿದ್ದಂ
ಮಾಡುವ ಸೆಲಿಗನ್ತ ಶೇಷರಸ ಮೂಳಿಕೆಗಳ್
ಕೂಡುಗುಮಮರೇನ್ದ್ರತ್ತಮ
ಮಾಡುವರಚ್ಚರಸಿಯರ್ಕ್ಕಳಾ ಮುನಿಕುಳಮ
ಇಸ್ತಿನಿಸುವ ಸಿದ್ಧಕ್ಷೇತ್ರ
ತ್ರಾನ್ತರ ತೀರ್ತ್ಥಕ್ಕೆ ಮುಖ್ಯನಾಶ್ರಿತ ಸುರಭೂ
ಜಂ ತ್ರಿಭುವವನ ಸಿಂಹ ಮುನೀ
ನ್ದ್ರಂ ತಾಪಸಗೋತ್ರ ವೈರಿಕುಳಗಜಸಿಂಹ॥
ನೋಡಿರೆ ರಾಘವದ್ದೀಪನ ನಚ್ಚುವ ಮಾಲಿ ಸುಮಾಲಿ ದಾನವ
ರ್ಮ್ಮಾಡಿದ ಸುಪ್ರತಿಷ್ಠೆಯದಜೆಂದ ಸುವರ್ಣ ಮಹಾಕ್ಷಿದೇರೆಂ
ಬೀಡಿತನಾಮಮಾದುದು ಸುಮಾಲಿ ಪೆಸರ್ನ್ನಗರಕ್ಕೆ ರೂಡಿಯೊಳ್
ಕೂಡಿದು ದೆಂದೊಡೇವುಗಳ್ವೆ ಕೂಡ್ಡಿ ಮಹೀವಳಯಾನ್ತರಾಳದೊಳ್॥
ಮಾಲಿ ಸುಮಾಲಿ ದ್ವಯ ಭೂ
ಪಾಲರ್ದ್ಧೇ ಸೋಲು ಮೂವತ್ತಂ ಸ
ಲ್ಲೀತಿಯೊಳೆ ಬಿಟ್ಟು ಸುಗತಿಸು
ಖಾಲಯಮಂ ತ್ರೇತೆಯಂತ್ಯಕಾಲದೆ ಪೊಕ್ಕರ್"೪೭

ತ್ರೇತಾಯುಗದ ಕೊನೆಯಲ್ಲಿ ರಾವಣನ ನಚ್ಚಿನವರಾದ ಮಾಲಿ ಸುಮಾಲಿ ಎಂಬ ದೈತ್ಯರು ಇಲ್ಲಿ ದೇವರನ್ನು ಪ್ರತಿಷ್ಠಾಪಿಸಿದರೆಂದೂ ಸೋಲು (ಸೊಗಲ) ೩೦ನ್ನು ದೇವರಿಗೆ ದತ್ತಿಕೊಟ್ಟರೆಂದು ಸ್ಥಳ ಪುರಾಣದ ಕಥೆಯ ಉಲ್ಲೇಖ ಇಲ್ಲಿ ಬಂದಿದೆ. ಅವರಿಂದಲೇ ದೇವರಿಗೆ 'ಸುವರ್ಣ ಮಹಾಕ್ಷಿದೇವ' ಎಂದೂ ಊರಿಗೆ 'ಸುಮಾಲಿ' ಎಂದು ಹೆಸರಿಸಲಾಯಿತಂತೆ. ಇಲ್ಲಿಯ ತಪೋವನ ವರ್ಣನೆ ಒಳ್ಳೆಯ ಮನೋಹರವಾಗಿದೆ. 'ಪುಗಲ್' ಎಂಬ (ಪಾಪಿ ಮೊದಲಾದವರನ್ನು ಒಳಕ್ಕೆ ಬರಬೇಡಿ ಎಂದು ನಿವಾರಿಸುವ ಕೋಗಿಲೆಯ ಕುಕಿಲಿನ ವರ್ಣನೆ ಆದಿಪಂಪನು ಮಾಡಿದ ವರ್ಣನೆಯನ್ನು ನೆನಪಿಗೆ ತರುತ್ತದೆ. ಬೆಳವಾಡಿಯ ಕರಿಯ ಕೇತಿಮಯ್ಯನವಳಾದ (ಹೆಂಡತಿಯಾದ) ಕಂಚಿಕಬ್ಬೆಯ ದಾನಗುಣವನ್ನು ವಿಶೇಷವಾಗಿ ಕೊಂಡಾಡಿರುವುದು. ಅಂದಿನ ಜನಗಳ ಗುಣಗ್ರಾಹಕತೆಯ ಕುರುಹಾಗಿದೆ. ಸೋಲ ಕ್ಷೇತ್ರದ ದೀರ್ಘ ವರ್ಣನೆ ಶಾಸನದಲ್ಲಿ ಕಂಡುಬರುತ್ತದೆ.

ಈ ಕ್ಷೇತ್ರವು ಅನೇಕ ಫಲಪುಷ್ಪಗಿಡ ರಗಳಿಂದ ಕೂಡಿತ್ತೆಂದೂ ವನಗಳಿಂದಲೂ ಕೋಗಿಲೆ ಮೊದಲಾದ ಪಕ್ಷಿ ಪ್ರಾಣಿಗಳ ಇಂಚರದಿಂದಲೂ ಜಲಪಾತಗಳಿಂದಲೂ ಕೂಡಿತ್ತೆಂದೂ ಇದೊಂದು

ಜಗತ್ತಿಗೆ ತೀರ್ಥ ಕ್ಷೇತ್ರವಾಗಿತ್ತೆಂದೂ, ಸುವರ್ಣ ಮಹಾಕ್ಷಿದೇವನನ್ನು ಪೂಜಿಸಿದರೆ ಭಕ್ತರಿಗೆ ಮುಕ್ತಿ ಸಿಗುತ್ತೆಂದು ಶಾಸನದಿಂದ ತಿಳಿದುಬರುತ್ತದೆ.

ಅಲ್ಲದೆ ಅಲ್ಲಿಯ ಐತಿಹ್ಯದ ಪ್ರಕಾರ ಶಿವಪಾರ್ವತಿಯರು ಇಲ್ಲಿ ಬಂದು ವಿವಾಹವಾಗಿ ಕೆಲ ಕಾಲ ಇಲ್ಲಿ ನೆಲಸಿದ್ದರೆಂದು ಹಾಗಾಗಿ ಇದೊಂದು ಪುಣ್ಯಕ್ಷೇತ್ರವೆಂದು ಜನರು ಈಗಲೂ ನಂಬುತ್ತಾರೆ.

ಸವದತ್ತಿ ಪ್ರದೇಶವನ್ನು ಶಾಸನಗಳಲ್ಲಿ ಸುಗಂಧವರ್ತಿ ಎಂಬ ಹೆಸರಿನಿಂದ ಕರೆದಿರುವುದು ಕಂಡುಬರುತ್ತದೆ. ಈ 'ಸುಂಗಧವರ್ತಿ ೧೨' ಎಂದು ಪ್ರಸಿದ್ಧಿ ಪಡೆದ ಇಂದಿನ ಸವದತ್ತಿಯು ಕುಂತಲದೇಶದ ಕೊಂಡಿ ೨೦೦೦ ನಾಡಿನ ಒಂದು ಭಾಗ, ಶಾಸನಗಳಲ್ಲಿ ಇದನ್ನು ಸುಗಂಧವರ್ತಿ ಎಂದು ಕರೆಯಲಾಗಿದೆ. ಸಾವಿರಾರು ವರ್ಷಗಳ ಪ್ರಾಚೀನತೆ ಹೊಂದಿರುವ ಈ ಸುಗಂಧವರ್ತಿ ಪ್ರದೇಶದಲ್ಲಿ ಅನೇಕ ಅರಸರು ಆಳ್ವಿಕೆ ಮಾಡಿದ್ದಾರೆ.

"ಸುಗಂಧವರ್ತಿ ಎನ್ನುವ ಹೆಸರಿನಲ್ಲಿ 'ವರ್ತಿ' ಎನ್ನುವ ಆರಂಭ ಶಬ್ದದ ಅರ್ಥ ಕಲ್ಲು ಪೊಟರುಗಳಿಂದ ನೀರು ಬರುವುದು ಎಂದು. ಇಂತಹ ವರ್ತಿಗಳು ಸವದತ್ತಿ ಪಟ್ಟಣದ ಸುತ್ತಮುತ್ತಲೂ ಹೇರಳವಾಗಿವೆ. ವಿಶೇಷವಾಗಿ ಎಲ್ಲಮ್ಮನ ಗುಡ್ಡದಲ್ಲಿಯ ವರ್ತಿಗಳು ಹಲವಾರು ರಾಸಾಯನಿಕ ಹಾಗೂ ಗಿಡಮೂಲಿಕೆಗಳಿಂದ ಕೂಡಿದ್ದು ರೋಗಗಳನ್ನು ಗುಣಪಡಿಸುವ ಶಕ್ತಿ ಈ ನೀರಿಗಿತ್ತು. ಅಂತೆಯೇ ಎಣ್ಣೆಗೊಳಳದ ವರ್ತಿ ನೀರಿನ ಸ್ನಾನ ಮಾಡಿದರೆ ಚರ್ಮರೋಗ ನಿವಾರಣೆಯಾಗುತ್ತದೆನ್ನುವ ನಂಬಿಕೆ"[೪೮]

ಈ ಸುಗಂಧವರ್ತಿಯ ಪರಿಸರವನ್ನು ಶಾಸನವೊಂದು ಹೀಗೆ ವರ್ಣಿಸುತ್ತದೆ. ಸುಗಂಧವರ್ತಿಯ ಪ್ರದೇಶದಲ್ಲಿರುವ ಶಿರಸಂಗಿಯ ಪರಿಸರ ಅಷ್ಟೇ ಪೂಜ್ಯನೀಯ, ಋಷಿಮುನಿಗಳು ನೆಲೆ ನಿಲ್ಲಲು ಯೋಗ್ಯವಾದ ಪರಿಸರ ಸುತ್ತಲೂ ಎತ್ತರೆತ್ತರವಾದ ಗುಡ್ಡಗಳ ಸಾಲು ಪವಿತ್ರ ಪರಿಸರಕ್ಕೆ ತಲೆಬಾಗಿಬಂದು ಹಲವು ಮುನಿಶ್ರೇಷ್ಠರು ತಪಗೈದ ತಪೋಮಯ ಪ್ರದೇಶ "ಪಾಪಿಗಳೆ ಪುಗಲ್ವೆಡಿ, ಪಾಪಿಗಳೆ ಪುಡಲ್ವೆಡಿ' ಎಂದು ಹಗಲಿರುಳು ಸಾಗುತ್ತ ಸರಗೈವ ಕೋಗಿಲೆಯ ಮಂಜುಳ ನಿನಾದದಿಂದ ಪ್ರಕೃತಿಯ ರಮ್ಯ ಸಲಿಲ ಝರಿಯಿಂದ ಪ್ರಕೃತಿ ದೇವಿಯ ಆರಾಧನೆಯಲ್ಲಿ ನೆಲೆನಿಂತ ಸೊಗಲದ ಸೋಮೇಶ್ವರ, ಉದೋ, ಉದೋ, ಎಂದು ಜೋಗುಗೊಳ್ಳುವ ಏಳುಮಲೆ ಎಲ್ಲವ್ವ, ಹೂಲಿಯ ಪಂಚ ಮಣ್ಣಿಗೆ ಮಠ, ಕದಳಿ ವನಗಳ ಮದ್ಯೆ ನೆಲೆನಿಂತ ಮುನವಳ್ಳಿ ಪಂಚಲಿಂಗೇಶ್ವರ, ಘಸರ್ಪ ಪವಾಡಗೆಲಿದ ಸುಗ್ಗಲದೇವಿಯರ ತೊರಗಲ್ಲು ಶಿರಸಂಗಿಯ ಜಗನ್ಮಾತೆ ಕಾಳಿಕಾದೇವಿ ಮಡಿಲಲ್ಲಿ ನೆಲೆಗೊಂಡಿದೆ".[೪೯]

ಎಳೆಯೆಂಬ ಸತಿಯ ಕುನ್ತಳ
ಕಳಾಪದಂತೆಸೆದು ತೋಪರಿಕು

ನ್ತಳ ದೇಸಕ್ಕವಳವಟ್ಟ ಚಿ
ನ್ನ ಪೂವನೆ ಬೆಳಗಿದುದೊಳ್ವಲವೆನಿಪ್ಪ ಬೆಳ್ವಲದೇಶಂ॥"[೩೦]
"ಸುರಚಿರ ಕುಂತಳ ಸ್ಥಳದೊಳ್ಳದ್ದ ಸುವರ್ಣ ವಿನೂತರುತನ ಬಾ
ಸುರ ಮನೆ ಚಿನ್ನ ಪೂವೆನಿಸು ವೊತಿಸೆಯುತ್ತಿರೆ ಬೆಳ್ವೊಲ ಮನೋ
ಹರವೆನಿಸಿರ್ಪುದಂತ ರೊಳಗ್ಗದ ಕಂಪಣವಾದ ಪೆಂಪಿನೊಳೊ
ಪ್ಪರೆ ಕೊಳನೂರ್ಕ್ಕರಂ ಸೊಗಯಿಕ್ಕುಂ ಮೊದಲಾದ್ದೀಷ ಯಕ್ಕವೆಂಬಿನಂ"[೩೧]

ಇಂಥ ಅಪರೂಪದ ಅಮೂಲ್ಯ ವರ್ಣನೆಯಲ್ಲಿ ಬರುವ ಕುಂತಳನಾಡಿನ ಒಪ್ಪುವ ಚಿನ್ನಪ್ಪ ಬೆಳಮಲ, ಅದರಲ್ಲಿ ಶ್ರೇಷ್ಠ ಮುಕುರುದಂತಿರುವ ಕೊಳಗನೂರು ಮೂವತ್ತು ಅದರ ಮುಖ್ಯ ಪಟ್ಟಣವೆನಿಸಿದುದು 'ರಿಶ್ಯ ಶೃಂಗಪುರ ಅಂದು "ಕಾಂಚಿಪುರದ ಚೆಲ್ವಿಂದ ಮೇಲೆನಿಪುದು"[೩೨] ಎಂಬಲ್ಲಿ ಪ್ರಾಚೀನ ರಿಶ್ಯಶೃಂಗಿಯ ಬಗೆಗಿದ್ದು ಸೃಷ್ಟಿ ಸೌಂದರ್ಯದ ಅವರ್ಣನೀಯ ದೃಶ್ಯ ಜಗನ್ಮಾತೆ ಕಾಳಿಕಾ ಮಾತೆಯ ಅಭಯದಲ್ಲಿ ನೆಲೆನಿಂತಿರುವ ಶಿರಸಂಗಿಯ ವಾಸ್ತವಿಕ ಸೌಂದರ್ಯ ತನ್ನನ್ನು ಬಿಚ್ಚಿ ಶೋಭೆಯನ್ನು ಅಭಿವ್ಯಕ್ತ ಪಡಸಿದಿದಂತಿದೆ.

ಈ ಶಿರಸಂಗಿಯನ್ನು ಶಾಸನದಲ್ಲಿ ರಿಶ್ಯಶೃಂಗಪುರವೆಂದು ಕರೆದಿವೆ. ಶಿರಸಂಗಿ ಪ್ರದೇಶವು ಸುತ್ತಲೂ ಗಿರಿಶಿಖರಗಳನ್ನು ಹೊಂದಿರುವ ಪ್ರದೇಶ ಇದನ್ನು ಶಾಸನ ಹೀಗೆ ವರ್ಣಿಸುತ್ತದೆ. ಸುತ್ತಲೂ ಎತ್ತರೆತ್ತರವಾದ ಗಿರಿ ಶಿಖರಗಳ ಸಾಲು, ಸುಂದರ ಉಪವನಗಳು, ಜುಳು ಜುಳು ಹರಿಯುವ ಮಲಪ್ರಭೆ, ಅಲ್ಲಲ್ಲಿ ಶೋಭಿಸುವ ದೇವಸ್ಥಾನಗಳು ದಿವ್ಯತೀರ್ಥಕ್ಷೇತ್ರಗಳು, ಸುಂದರಿಯರು, ನಾಡ ಸೌಂದರ್ಯವನು ಉಗ್ಗಡಿಸು ಕವಿಗಳ ಬಳಗ, ಲೋಕತ್ತರವಾದ ಬೆಳ್ವಲದಲ್ಲಿರುವ ಮನೋಹರ ರಿಶಿಶೃಂಗಿಯಲ್ಲಿ ದಿನನಿತ್ಯ ದೊರಕುವ ನೋಟವಾಗಿದೆ ಎಂದು ವರ್ಣಿಸಿದೆ.

"ಸುತ್ತಿದ ಬೆಟ್ಟದಿಂದೆಸೆವ ನನ್ದನದಿ ಪಲವಂತಟಾಕದಿಂ
ದುತ್ತಮವಪ್ಪ ದೇವಗೃಹ ಸಂಕುಳದಿಂದ ವರದಿವ್ಯತಿರ್ಥದಿಂ
ವೃತ್ತಪಯೋಧಾರಾಂಗನೆಯುಂ ಸುಕವೀಶ್ವರ ತಂಡದಿಂದಲೋ
ಕೋತ್ತರ ಮಾಯ್ತೆ ಬೆಳ್ವೊಲದೊಳೀ ರಿಶಿಶೃಂಗವುರ ಮನೋಹರಂ"[೩೩]

ಶಿರಸಂಗಿ ಪಟ್ಟಣ ರಾಮಾಯಣ ಕಾಲಕ್ಕೂ ಸಂಬಂಧಿಸಿದ್ದು ಎಂದು ಸ್ಥಳೀಯ ಐತಿಹ್ಯ ಪುರಾಣಗಳು ಹೇಳುತ್ತವೆ. ರಘುವಂಶ ಕುಲತಿಲಕ ಅಯೋದ್ಯೆಯ ಚಕ್ರವರ್ತಿ ದಶರಥ ಮಹಾರಾಜನಿಗೆ ಪುತ್ರಪ್ರಾಪ್ತಿಗಾಗಿ ನಡೆಸಲ್ಪಟ್ಟ ಪುತ್ರಕಾಮೇಷ್ಟಿಯಾಗ ಮುಖ್ಯ ಅಗ್ನಿಗೋತ್ರಿಯಾಗಲು ಈ ಶಿರಸಂಗಿಯಲ್ಲಿ ತಪಗೈಯುತ್ತಿದ್ದ ವಿಶ್ವಕರ್ಮ ವಾಶಜ ಕಾಶ್ಯಪಗೋತ್ರದ ವಿಭಾಂಡಕ ಮುನಿಯ ಮಗನಾದ ಶೃಂಗಋಷಿಯನ್ನು ಅಯೋಧ್ಯೆಗೆ ಆಮಂತ್ರಿಸಲಾಗಿತ್ತು. ರಾಮಲಕ್ಷ್ಮಣರು ಲಂಕೆಯ ರಾವಣನನ್ನು

ಸಂಹರಿಸಿ ತಿರುಗಿ ಉತ್ತರಕ್ಕೆ ಪ್ರಯಾಣಿಸಿದಾಗ ಶಿರಸಂಗಿಯ ಋಷ್ಯಶೃಂಗ ಆಶ್ರಮಕ್ಕೆ ಭೇಟಿಕೊಟ್ಟು ರಾಮೇಶ್ವರ ಲಿಂಗವನ್ನು ಪ್ರತಿಷ್ಠಾಪಿಸಿದರೆಂದು ಅದಕ್ಕೆ ಪೂರಕವಾಗುವಂತೆ ಬೆಟ್ಟದ ತುದಿಯಲ್ಲಿಯ ದೇವಾಲಯವನ್ನು ಆಧಾರವಾಗಿ ನೀಡುತ್ತಾರೆ.

ಈ ಶಿರಸಂಗಿ ಮತ್ತು ಕಾಳಮಮ್ಮನನ್ನು ಕುರಿತ ಮತ್ತೊಂದು ಪೌರಾಣಿಕತೆ ಹೀಗೆ ಹೇಳುತ್ತದೆ. ವಿಭಾಂಡಕನೆಂಬ ಮುನಿ ಕಾಮದಿಂದ ಮೈದುಂಬಿ ವೀರ್ಯಸ್ಖಲನ ಗೊಂಡಿತು. ಈ ತಪ್ಪಿನ ಅರಿವಾಗಿ ತನ್ನ ವೀರ್ಯವನ್ನು ಕಮಲ ಪುಷ್ಪದಲ್ಲಿ ಹಾಕಿದನು. ಈ ಪುಷ್ಪದಲ್ಲಿಯ ವೀರ್ಯವನ್ನು ಸಾರಂಗ ನೆಕ್ಕಿ ಗರ್ಭಧರಿಸಿತು. ವಿಭಾಂಡಕನೆ ಸಾರಂಗದ ಆರೈಕೆ ಮಾಡಿದ. ಇದರ ಗರ್ಭದಿಂದ ಸಾರಂಗದಂತೆ ಕೋಡುಗಳಿರುವ ಮನುಷ್ಯ ಆಕೃತಿ ಶಿಶು ಜನಿಸಿತು. ಇದು ತನ್ನ ಮಗುವೆಂದು ಖಚಿತಮಾಡಿಕೊಂಡು ಅದರ ಆರೈಕೆ ಮಾಡಿದನು. ಈ ಶಿಶುವಿಗೆ ತಲೆಯ ಮೇಲೆ ಕೋಡುಗಳು ಇದ್ದ ಕಾರಣ ಋಷಿ ಪುತ್ರನಾದುದರಿಂದ ಋಷ್ಯಶೃಂಗ, ಶೃಂಗಋಷಿ, ಶಿರಶೃಂಗ ಮೊದಲಾದ ಹೆಸರು ಬಂದಿತು. ಈ ಶಿರಶೃಂಗ ಋಷಿಗೆ ಧಾರ್ಮಿಕ ಚಟುವಟಿಕೆಯಲ್ಲಿ ಯಜ್ಞೆಯಾಗಾದಿಯಲ್ಲಿ ಪ್ರಮುಖ ಸ್ಥಾನ ಕೊಡಲಾಗಿತ್ತು. ಅಂತೆಯೇ ದಶರಥ ಮಹಾರಾಜ ಪುತ್ರಕಾಮೇಷ್ಠಿಯಾಗಕ್ಕೆ ಶೃಂಗಋಷಿ (ಶಿರಶೃಂಗ) ಮುನಿಗೆ ಆಮಂತ್ರಣ ನೀಡಲಾಗಿತ್ತು. ಶೃಂಗಋಷಿ ಆಶ್ರಮ ಸಂಸ್ಥಾನಿಕರನ್ನು ಋಷಿಮುನಿಗಳನ್ನು ಸಾಧುಸಂತರನ್ನು ಆಕರ್ಷಿಸಿದ ಋಷಿಶೃಂಗನ ತಪೋಭೂಮಿ ಶಿರಸಂಗಿಯಾಗಿ ಬೆಳೆದಿದೆ ಎಂದು ಪುರಾಣ ಕಥೆ ಹೇಳುವುದು. ಅಲ್ಲದೆ ಋಷಿಶೃಂಗ ಮುನಿಯು ಚೈತ್ರ ಪ್ರತಿಪದಿಯ ಯುಗಾದಿಯಂದು ಒಂದು ಮಹಾಯಜ್ಞ ಹಾಗೂ ತಪಸ್ಸು ನಡೆಸುವ ಯೋಜನೆ ಹಾಕಿಕೊಂಡಿದ್ದ ಆದರೆ ಸೃಗುಂದ, ನಲುಂದ, ಚುಳುಕ, ಹಿರೇಕುಂಬಾಸುರ, ಚಿಕ್ಕುಂಬಾಸುರ, ಬೇಚಾಸುರ ಹೀಗೆ ರಾಕ್ಷಸರು ಯಜ್ಞ ಭಗ್ನಗೊಳಿಸಲು ಬಂದಾಗ ಋಷಿಧರ್ಮ ಅವರನ್ನು ಕೊಲ್ಲುವುದಕ್ಕೆ ಅಡ್ಡಿಯಾಯಿತು. ಋಷಿಶೃಂಗ ಮುನಿಯ ಧ್ಯಾನದಿಂದ ಕಾಳಿಕಾದೇವಿ ರುದ್ರಕಾಳಿಯಾಗಿ ಸಂಹರಿಸತೊಡಗಿದಳು. ಯುಗಾದಿಯ ಪ್ರತಿಪದೆಯ ಹಿಂದಿನ ಅಮವಾಸ್ಯೆಯಿಂದ ಪ್ರತ್ಯಕ್ಷಳಾದ ಕಾಳಿಕಾದೇವಿ ಜೇಷ್ಠಶುಕ್ಲ ಪಂಚಮಿಯ ತನಕ ರಕ್ಕಸರ ಸಂಹಾರ ಮಾಡಿ ಪುನಃ ಜೇಷ್ಠ ಶುಕ್ಲ ಪಂಚಮಿಯೆಂದು ದೇವಸ್ಥಾನಕ್ಕೆ ಬಂದಳೆಂಬ ಈ ಪುರಾಣ ಕಥೆಯು ವಾಲ್ಮೀಕಿ ರಾಮಾಯಣ ಸ್ಕಂದ ಪುರಾಣ, ಶಿವಪುರಾಣ ಹಾಗೂ ದೇವಿ ಪುರಾಣಗಳಲ್ಲಿ ಉಲ್ಲೇಖಗೊಂಡಿದೆ.

ಸವದತ್ತಿಯು ಉತ್ತರ ಕರ್ನಾಟಕ-ಮಹಾರಾಷ್ಟ್ರ ಪ್ರದೇಶದಲ್ಲಿ ಒಂದು ಪ್ರಸಿದ್ಧ ಯಾತ್ರಾಸ್ಥಳವಾಗಿದೆ. ಶಾಸನಗಳಲ್ಲಿ ಇದನ್ನು ಸುಗಂಧವರ್ತಿ ೧೨ ಎಂದು ವರ್ಣಿಸಲಾಗಿದೆ. ಆ ಕಾಲದಲ್ಲಿ ಇದು ಒಂದು ಸುಂದರ ನಗರವಾಗಿತ್ತು. ಎಂದು ಸವದತ್ತಿಯ ತಾಲ್ಲೂಕು ಕಛೇರಿಯ ಬಳಿಯಿರುವ ಶಾಸನವೊಂದು ಹೇಳುತ್ತದೆ.

"ಹೊರವೊಳ್ವಿರಾಜಿಸುವ ಚೂತವನಂ ಗಿರಿಸಂಕುಳಂ
ಷಳದುರುಗಿದ ನಾ(ಳಿ)
ಕೇರವನ ವೊಪುವ ಶೋಕವನಂ ಶಿವಾಲಯಂ ವಿರುಪ ಜಿನೇಂದ್ರ
ಗೇಹ ಮೆನಿಪಿಂತಿವರುಂದನಶೇಷ ಸೌಖ್ಯದೊಳ್ನೆರೆದು ಸುಗಂಧ
ವರ್ತಿ ಸತಿ ಕೊಂಡಿ ಮಹೀತಳದೊಳ್ ವಿರಾಜಿಕುಂ"[೩೪]

ಭವ್ಯ ದೇವಾಲಯಗಳು ಬಸದಿಗಳು, ಹಸಿರು ತೋಟಗಳಿಂದ ವನಗಳಿಂದ, ಗಿರಿ ಶಿಖರಗಳಿಂದ ಕೂಡಿದ ಚೂತವನದಂತೆ ಸೌದತ್ತಿಪ್ರದೇಶವಿತ್ತೆಂದು ಹೇಳಲಾಗಿದೆ. ಈ ಕ್ಷೇತ್ರದ ಪ್ರಧಾನ ದೇವರು ಎಲ್ಲಮ್ಮ. ವಾಡಿಕೆಯಲ್ಲಿ 'ಏಳುಕೊಳ್ಳದ ಎಲ್ಲಮ್ಮ'ನೆಂದು ಭಕ್ತಾದಿಗಳು ಕರೆಯುತ್ತಾರೆ. ಕ್ಷೇತ್ರ ಪುರಾಣದಂತೆ ಈ ರೇಣುಕಾದೇವಿ ಪುರಾಣ ಪುರುಷ ಜಮದಗ್ನಿಯ ಋಷಿಯ ಧರ್ಮಪತ್ನಿ, ಎಲ್ಲಮ್ಮನಿಗೆ ಸಂಬಂಧಿಸಿದ ಪೌರಾಣಿಕ ಅಂಶ ಶಾಸನಗಳಲ್ಲಿ ಉಲ್ಲೇಖಗೊಂಡಿಲ್ಲ. ಆದರೆ ಜಮದಗ್ನಿ ಮತ್ತು ಪರಶುರಾಮರ ಹೆಸರುಗಳು ಉಲ್ಲೇಖಗೊಂಡಿವೆ.

"ದಿಂ ಗಂಧ ಗಜಂಗಳಿಂ ತುಳಿದು ಕೊಂದಂ ಮಾಯಿದೇವೋತ್ತಮಂ॥
ಮುಂ ಜಮದಗ್ನಿರಾಮಖಿಳ ಕ್ಷಿತನಾತರನಿಪ್ಪತೊಂದು ಸೂಳ್ಕಂಜಿನ
ಗಾಳಿಯನೆತ್ತವೆ ಕೊಂದವೊಲೀ ಮಹಾದೇವನಾಯಕಂ ಕುಂಜ
ರದಿಂದೆ ವೈರಿಕುಲಮಂ ತಪಿ ಕೊಂದು ಪಿತಂಗೆ ಮಾಡಿದ"[೩೫]

ಯುದ್ಧದಲ್ಲಿ ವೀರರು ಯಾವ ರೀತಿಯಾಗಿ ಹೋರಾಟ ಮಾಡಿದರೆಂಬುದನ್ನು ಸ್ಥಳೀಯವಾಗಿ ಪ್ರಚಲಿತದಲ್ಲಿದ್ದ ಪೌರಾಣಿಕ ವ್ಯಕ್ತಿಯು ಆದ ಜಮದಗ್ನಿ ಪರಶುರಾಮರಿಗೆ ತಮ್ಮನ್ನು ಹೋಲಿಸಿಕೊಂಡಿದ್ದಾರೆ. ಅವರ ಪ್ರಸಿದ್ಧಿ ವ್ಯಾಪಕವಾಗಿ ಹರಡಿತ್ತೆಂದು ಈ ಸಂದರ್ಭದಲ್ಲಿ ಯಲ್ಲಮ್ಮ ದೇವಸ್ಥಾನ ಉತ್ತುಂಗ ಶಿಖರದಲ್ಲಿತ್ತೆಂದು ತಿಳಿದುಬರುತ್ತದೆ.

ಎಲ್ಲಮ್ಮನ ಕುರಿತ ಸ್ಥಳ ಪುರಾಣಗಳು ಹೀಗೆ ಹೇಳುತ್ತವೆ. ರೇಣುಕಾದೇವಿಯು ತನ್ನ ಗಂಡನ ನಿತ್ಯಕರ್ಮ ಅನುಷ್ಠಾನಗಳಿಗೆ ಬೇಕಾದ ನೀರನ್ನು ತರಲು ಮರಳಿನಲ್ಲಿಯೇ ಕೊಡವನ್ನು ಮಾಡಿ, ಜೀವಂತ ಸರ್ಪವನ್ನು ಸಿಂಬೆಯನ್ನಾಗಿ ಮಾಡಿ ತಲೆಯ ಮೇಲಿಟ್ಟುಕೊಂಡು ಅದರ ಮೇಲೆ ನೀರಿನ ಕೊಡವನ್ನಿಟ್ಟುಕೊಂಡು ತರುತ್ತಿದ್ದಳು. ಇದು ಅವಳ ಪಾತಿವ್ರತ್ಯದ ಮಹಿಮೆಯ ಒಂದು ಸಂಕೇತ ಎನ್ನುತ್ತಾರೆ.

ಮತ್ತೊಂದು ಕಥೆ ಹೀಗೆ ಹೇಳುತ್ತದೆ. ಒಂದು ಸಲ ಜಮದಗ್ನಿಯು ತನ್ನ ನಿತ್ಯಕರ್ಮಗಳ ಅನುಷ್ಠಾನಕ್ಕೆ ತನ್ನ ಪತ್ನಿಯು ನೀರು ತರುವುದನ್ನು ತಡಮಾಡಿದ್ದರಿಂದ ಅತಿ ಕೋಪದಿಂದ ರೇಣುಕೆಯ ಶಿರಚ್ಛೇದ ಮಾಡಲು ತನ್ನ ಮಕ್ಕಳಿಗೆ ಆಜ್ಞಾಪಿಸುತ್ತಾನೆ. ಆದರೆ ಸ್ಥಳೀಯ ಕಥೆಯ

ಪ್ರಕಾರ ಜಮದಗ್ನಿಯು ರೇಣುಕೆಯನ್ನು ಕುಷ್ಠ ರೋಗಿಯಾಗೆಂದು ಶಪಿಸಿ ಆಶ್ರಮದಿಂದ ಹೊರಹಾಕುತ್ತಾನೆ. ರೇಣುಕೆಯು ರೋಗದಿಂದ ನರಳುತ್ತ ತಿರುಗಾಡುತ್ತಿರುವಾಗ ಅಕಸ್ಮಾತ್ತಾಗಿ ಎಕ್ಕಯ್ಯ ಮತ್ತು ಜೋಗಯ್ಯ ಎಂಬ ಮುನಿಗಳು ಎದುರಾಗುತ್ತಾರೆ. ಇವಳ ಸಂಕಟವನ್ನು ತಿಳಿದು ಆ ಮುನಿಗಳ ಆಶ್ರಮದ ಹತ್ತಿರವೇ ಒಂದು ನೀರಿನ ಕುಂಡವಿದ್ದು ಅದರಲ್ಲಿ ಅವಳಿಗೆ ಸ್ನಾನ ಮಾಡಲು ಹೇಳುತ್ತಾರೆ. ಅದರಿಂದ ಅವಳು ಸಂಪೂರ್ಣ ರೋಗ ವಿಮುಕ್ತಳಾಗುತ್ತಾಳೆ. ಕೃತಜ್ಞತೆಯಿಂದ ಹಾಗೂ ಭಕ್ತಿಯಿಂದ ಎಕ್ಕಯ್ಯ ಜೋಗಯ್ಯ ಎಂಬ ಆ ಮುನಿಗಳ ಹೆಸರುಗಳನ್ನು ದಿವ್ಯ ಮಂತ್ರಗಳೆಂದು ಸ್ಮರಣೆಗೆ ತೆಗೆದುಕೊಳ್ಳುತ್ತಾಳೆ. ಅನಂತರ ತನ್ನ ಗಂಡನ ಆಶ್ರಮಕ್ಕೆ ಹಿಂದಿರುಗುತ್ತಾಳೆ. ಆದರೆ ಜಮದಗ್ನಿಯು ತಾನು ಕೊಟ್ಟ ಶಾಪವನ್ನು ಮುನಿಗಳ ಸಹಾಯದಿಂದ ಪರಿಹರಿಸಿಕೊಂಡೆನೆಂಬ ಗರ್ವ ಇವಳಿಗಿದೆಯೆಂದು ತಿಳಿದು ಆಗ ಇವಳ ಶಿರಚ್ಛೇದನ ಮಾಡಲು ತನ್ನ ಮಕ್ಕಳಿಗೆ ಅಜ್ಞಾಪಿಸುತ್ತಾನೆ.

ಇನ್ನೊಂದು ಕಥೆ ಹೀಗೆ ಹೇಳುತ್ತದೆ. ಜಮದಗ್ನಿಯ ಆಶ್ರಮವನ್ನು ಸಹಸ್ರಬಾಹು ಕರ್ತವೀರ್ಯಾರ್ಜನನು ತನ್ನ ಸೈನ್ಯದ ಮೂಲಕ ಧ್ವಂಸ ಮಾಡಿ ಜಮದಗ್ನಿ ಋಷಿಯನ್ನು ಕೊಂದು ಕಾಮಧೇನುವನ್ನು ತೆಗೆದುಕೊಂಡು ಹೋದಾಗ ತನ್ನ ಗಂಡನ ಶವವನ್ನು ನೋಡಿ ರೇಣುಕಾದೇವಿಯು ದುಃಖತಪ್ತವಾಗಿ ಎದೆಯನ್ನು ೨೧ ಸಲ ಬಡಿದುಕೊಳ್ಳುತ್ತಿರುವಾಗ ಅವಳ ಮಗ ಪರುಶುರಾಮನು ಅವಳನ್ನು ಸಂತೈಸಿ, ತಾನು ಸಹಸ್ರಬಾಹು ಕಾರ್ತವೀರ್ಯಾರ್ಜನ ಮೊದಲಾದ ಎಲ್ಲಾ ಕ್ಷತ್ರಿಯರನ್ನು ೨೧ ಸಲ ಭೂಪ್ರದಕ್ಷಿಣೆ ಮಾಡಿ ನಾಶ ಮಾಡುವುದಾಗಿ ಪ್ರತಿಜ್ಞೆ ಮಾಡುತ್ತಾನೆ. ರೇಣುಕಾದೇವಿಯು ತನ್ನ ಗಂಡನ ಚಿತೆಯನ್ನು ಏರಿ ಸಹಗಮನ ಮಾಡುತ್ತಾಳೆ ಎನ್ನುತ್ತಾರೆ.

ಹೀಗೆ ಜಮದಗ್ನಿ ಮತ್ತು ಪರಶುರಾಮರಂತಹ ಪೌರಾಣಿಕ ವ್ಯಕ್ತಿಗಳ ಮಹಿಮೆಯಿಂದಲೂ, ಎಲ್ಲಮ್ಮನಂತಹ ಪ್ರಸಿದ್ಧ ದೇವತೆ ಈ ಪ್ರದೇಶದಲ್ಲಿ ನೆಲಸಿರುವುದರಿಂದಲೂ, ಎಲ್ಲಮ್ಮನ ಪ್ರಸಿದ್ಧಿಯ ಜೊತೆಗೆ ಈ ಸ್ಥಳವೂ ಕೂಡ ಪ್ರಸಿದ್ಧಿಯೊಂದಿರುವುದನ್ನು ಇಲ್ಲಿ ಗಮನಿಸಬಹುದು. ಈ ಹಿನ್ನೆಲೆಯಲ್ಲಿ ಈ ಸ್ಥಳಕ್ಕೆ ಪೌರಾಣಿಕ ಮಹತ್ವ ಬಂದಿರುವುದು ಗೋಚರಿಸುತ್ತದೆ.

ಶಾಸನಗಳಲ್ಲಿ ಊರು ಮತ್ತು ಸುತ್ತಮುತ್ತಲಿನ ಪ್ರದೇಶದ ವರ್ಣನೆ ಸಾಮಾನ್ಯವಾಗಿರುತ್ತದೆ. ಒಂದು ಸ್ಥಳದ ಹೆಸರನ್ನು ಪರಿಶೀಸಿದರೆ ಸುತ್ತಮುತ್ತಲಿನ ನಿಸರ್ಗದ, ಸೌಂದರ್ಯ ಪ್ರಮುಖ ದೇವತೆಗಳ ವರ್ಣನೆಯನ್ನು ಪೌರಾಣಿಕ ಹಿನ್ನೆಲೆಯಲ್ಲಿ ಆ ಸ್ಥಳಕ್ಕೆ ವರ್ಣಿಸಿರುವುದನ್ನು ಕಾಣುತ್ತೇವೆ. ಇಂತಹ ವರ್ಣನೆಯನ್ನು ಶಾಸನವೊಂದು ಹೀಗೆ ಹೇಳುತ್ತದೆ. ಪೌರಗೆ ಎನ್ನುವ ಊರನ್ನು ಸೌಂದರ್ಯದಲ್ಲಿ ಅಮರಾವತಿಯಂತೆ, ಕೀರ್ತಿಯಲ್ಲಿ ಭೋಗಾವತಿಯೆಂದು ಭೂಮಿಯೆಲ್ಲ ಪೊಗಳುತ್ತಿತ್ತು. ಗದ್ದೆಗಳಿಂದ, ಶುಕ–ಪಿಕಗಳ ಗುಂಪಿನಿಂದ, ಮಾಳತಿ, ಮೊಲ್ಲೆ, ಮಲ್ಲಿಗೆ, ಇರ್ಗುನ್ತೆ ಮೊದಲಾದ

ಹೂಗಳಿಂದ ತಂಗಳಿಯಮಧುರಗಾನದಿಂದ ಅವರತ್ತೆಂಟು ತೀರ್ಥಗಳಿಂದ ಪೌಠಗೆ ನಾಡು ಮರೆಯುತ್ತಿತ್ತೆಂದು ಹೇಳಿದೆ.

ಬಿಜಾಪುರ ಜಿಲ್ಲೆ, ಇಂಡಿ ತಾಲೂಕಿನ ಸಾಲೋಟಗಿ ಗ್ರಾಮದ ಹರಿಜನ ಚಾವಡಿಯ ಗೋಡೆಯ ಮುಂಭಾಗದ ಕಲ್ಲಿನ ಮೇಲಿನ ಶಾಸನವು ಯಾದವ ದೊರೆ ಬಿಲ್ಲಮನ ಕಾಲದಾಗಿದ್ದು, ಇದು ಪೌಠಗಿ ನಾಡನ್ನು ವರ್ಣಿಸುತ್ತದೆ.

'ಪೌಠಗೆಯ ಚೆಲುವನೊಲವಿಂ ಪೊಗಳ್ವೆಂ!! ಅವಕಾಪುರವಮರಾವತಿ ವಿಳಸದ್ವೋಲಿಗಾ ವತಿಪುರಂ ಸಮನಲ್ಲೆಂದಿಳೆಯಲಂ ಬಣ್ಣಿಪ್ಪುದು.. ಪೌಠಣೆಯ ಚೆಲುವನೇವಂ ಪೂಗಳ್ವೆಂ॥ ಕಾಳಿಮೌಳಿಯಂ ಶುಕಪಿಕಾವಳಿಯಿಂ ಜಳಜಾತದಂಡದಿಂ ಮಾಳತಿ ಮೊಲ್ಲೆ ಮಲ್ಲಿಯದಿರ್ಗುಸ್ತಿಯ ಪೆ (ಂ)ರ್ಮ್ಮಳೆಯಲ್ಲಿ ಮತ್ತ ಭೃಂಗಾಳಿಯ ತಾರಮಂದ್ರಮಧುರಸ್ವನದಿಂ ನವಪೂಗಚೂತ ಕಿತ್ತೀಳೆಯ ನವ್ವನಾ ಪ್ರತಪಿಯಿಂದ ಸತಿ ಪೌಠಗೆಯೊಪ್ಪಿ ತೋಮಿಗುಂ॥ ಅಮ್ಮಿವತ್ತೆಂಟುಂ ತೀತ್ಥರದ ನೆಲೆಕೇಳು ಪಾಠಗೆಯ ತೀಸೆಮತ್ತಾದರದಿಂ.'[೫೬]

ಕುಂತಳದೇಶವನ್ನು ಶಾನವೊಂದು ಹೀಗೆ ವರ್ಣಿಸುತ್ತದೆ. ಸಮುದ್ರದ ವರ್ಣನೆ. ಅದರ ಮದ್ಯೆ ಭಾರತದೇಶ. ಅದರಲ್ಲಿ ಕುಂತಳದೇಶವಿತ್ತು ಎಂದು ಹೇಳುತ್ತದೆ. ಈ ಕುಂತಳದೇಶವು ಕಾಂಚಿದೇಶಕ್ಕಿಂತ ಚಲ್ವಾಗಿತ್ತಂತೆಂದು ಇದಕ್ಕೆ ತಿಳಕಪ್ರಾಯವಾಗಿ ಬೆಳ್ವೊಲವಿತ್ತು ಎಂದು ಹೇಳುತ್ತದೆ. ಅದರಲ್ಲಿ ಕುಕನೂರು ಶೋಭಿಸುತ್ತಿತ್ತು ಎಂದು ಮುಂತಾಗಿ ವರ್ಣಿಸುತ್ತದೆ.

"ಶ್ರೀ ಭಾರತೋರ್ಬ್ಬಿ ವಿಳಾಸಿನಿ ಗೊಪ್ಪಂ ಬಡೆದಿರ್ದ ಕುಸ್ತಿಳದಮೊಯಿ

ಶ್ರೀ ಕುಂತಳಂ ಕೋಟಿಕುಂ॥ ದೇಶಂಗಳೊಳಗೆ ಕುಂತಳದೇಶಮೆ

ಮಿಗಿಲಲ್ಲಿ ಕಾಳಿಕಾಜ್ಯೆಷ್ಠೆ ಕಪಾಳೀಶನ್ನ ಸುಕೃತದ ರಾಶಿಗೆ ನೆಲೆಯಾದ ಮ್ಮ್ಮೆಯಿಂದ ಭೂತಳದೊಳ್॥ ಅದು ಕುಂತಳ

ದೇಶವನಿಪ್ಪುದಜೆವಿಂದಂ ಮಧ್ಯೆದೇಶಕಂ ಕಾಂಚಿದೇಶದ ಚೆಲ್ವಿಂಗಂ ಮೇಲೆ

ನಿಪುದು ಕುಂತಳ ದೇಶದಿಂದೆ ಮೇಲ್ ಪೆಜಿವೊಳವೆ॥ ಆ ಕುಂತಳ

ದೇಶಕೆ ತಿಳಕಾಕ್ಕ ತಿವೊಲ್ ಬೆಳ್ವಲಂ ವಿರಾಜಿವದಪೊಳ್ ಶ್ರೀ

ಕುಕ್ಕನೂರು ಮೂವತ್ತು ಲೋಕಸ್ತುತವಲ್ಲಿ ಕುಕ್ಕನೂರ್ಸೋಗಯಿಸುಗಂ॥[೫೭]

ಹೀಗೆ ಕುಕ್ಕನೂರಲ್ಲಿ ಬಹಳ ಮಹಿಮೆಯಿಂದ ಕೂಡಿದ ಕಾಳಿಕಾ ಜೇಷ್ಠೆ ಎಂಬ ದೇವಿಯ ದೇವಾಲಯವಿತ್ತೆಂದು ಶಾಸನ ತಿಳಿಸುತ್ತದೆ. ಈ ಕಾರಣದಿಂದ ಕುಕನೂರು ಪ್ರಸಿದ್ದಿ ಪಡೆದಿತ್ತು ಎನ್ನಲಾಗುತ್ತದೆ.

ಉಚ್ಚಂಗಿದುರ್ಗದ ಸ್ಥಳ ಮತ್ತು ಪರಿಸರದ ಕುರಿತು ಶಾಸನವೊಂದು ಹೀಗೆ ವರ್ಣಿಸುತ್ತದೆ. ಉಚ್ಚಂಗಿ ಬೆಟ್ಟಕ್ಕೆ ನಾಲ್ಕು ಯುಗಗಳಲ್ಲಿ ನಾಲ್ಕು ಹೆಸರುಗಳು ಇದ್ದವಂತೆ. ಕೃತಯುಗದಲ್ಲಿ ಮೇಘನಾಥನೆಂಬ ರಾಕ್ಷಸನು ಆಳುತ್ತಿದ್ದನಂತೆ ಆದ್ದರಿಂದ ಆಗ ಈ ಪರ್ವತವನ್ನು ಮೇಗನಾಥ ಪರ್ವತ ಎಂದು ಕರೆಯಲಾಗಿತ್ತು. ತ್ರೇತಾಯುಗದಲ್ಲಿ ಶ್ರೀಮನ್ ನಾರಾಯಣನು ಹಿರಣ್ಯ ಕಷ್ಯಪನನ್ನು ಸಂಹರಿಸಿದಾಗ ಈ ಸ್ಥಳದಲ್ಲಿಯೂ ಸುವರ್ಣವೃಷ್ಟಿಯಾಯಿತಂತೆ ಆದ್ದರಿಂದ ಇದನ್ನು ಕನಕಗಿರಿ ಎಂದು ಕರೆಯಲಾಗಿದೆ. ದ್ವಾಪರಯುಗದಲ್ಲಿ ಉತ್ತುಂಗ ಋಷಿಯು ಈ ದುರ್ಗದಲ್ಲಿ ವಾಸವಾಗಿದ್ದನು ಎನ್ನುವ ಕಾರಣಕ್ಕಾಗಿ ಉಚ್ಚಂಗಿದುರ್ಗ ಎಂದು ಕರೆದಿದೆ. ಕಲಿಯುಗದಲ್ಲಿ ಉಚ್ಚಂಗಿಯಬ್ಬೆ ಎಂಬುವರು ಮೊದಲಾಗಿ ಮೂವರು ಕನ್ನಿಕೆಯರು ಈ ಬೆಟ್ಟದಲ್ಲಿ ತಪಸ್ಸು ಮಾಡಿ ದೈವತ್ವ ಪಡೆದರು. ಇದರಿಂದಾಗಿ ಉಚ್ಚಂಗಿಪರ್ವತ ಎನ್ನುವ ಹೆಸರು ಬಂದಿದೆ ಎಂದು ಹೇಳಾಗಿದೆ.

"ಕದಂಬಾವಾಡಿ ನಾಡ ಮಧ್ಯದೊಳ್ಮೇರು ವಿಪ್ಪಂತಿಟ್ಟುದುಚ್ಚಂಗಿಯ

ಪರ್ವತಂ ಅದಕ್ಕೆ ನಾಲ್ಕು ನಾಮೆವದೆಂ

ತೆಂದೊಡೆ ಕೃತಯುಗದೊಳು ಮೇ(ಘನಾ)ದನೆಂಬ ರಾಕ್ಷಸನಿವಾಸಮಪ್ಪುದವಿಂ. ಮೇಘನಾದವೆಂಬುದು ತ್ರೇತೆಯೊಳ್ ಹಿರಿಣ್ಯಕ ನಿವಾಸಮಾತನ ನಾರಾಯಣಂ ವಧೆಗೆಯ್ದಂದಿ ಸೊಸಗೆಯಾಳ್ ಸ್ವರ್ಣದ್ರಿಷ್ಟಿ ಕವಿದುದವಿಂ ವೀರಕನಕಗಿರಿಯೆಂಬುದು ದ್ವಾಪಾರದೊಳುತ್ತಂಗಮ ಹರಿಷಿ ಆಶ್ರಮಮಪ್ಪುವಿದಂ ಉತ್ತುಂಗಪರ್ವ್ವತಮೆಂಬುದು ಕಲಿಯುಗದೊಳ್ ಉಚ್ಚಂಗಿಯ ಜ್ಜಿಯೆಂಬಳು ಮೊದಲಾಗಿ ಮೂವರು ಬ್ರಾಹ್ಮಣ ಕನ್ನಿಕ್ಯೆರು ತಪ್ಪಂಗೆಯ್ದಿೀಶ್ವರ ವರ ಪ್ರಸಾದದಿಂ ದೇವತ್ವಮಂ ಪಡೆದರದಱುಂದುಚ್ಚುಂಗಿಯಾ ಪರ್ವತವೆಂಬುದು."[೫೮]

ಈ ಬೆಟ್ಟದಲ್ಲಿ ಉಚ್ಚೆಂಗೆಮ್ಮದೇವಿ ನೆಲಸಿರುವುದರಿಂದ ಉಚ್ಚಂಗಿದುರ್ಗ ಎಂಬ ಹೆಸರು ಬಂದಂತಿದೆ. ಈ ಕುರಿತು ಕಥೆಯೊಂದು ಹೀಗಿದೆ. "ದೇವಿಯಲ್ಲಮ್ಮ ಬೆಟ್ಟದಲ್ಲಿ ನೆಲೆಸಿದ್ದಳು. ಕಾಡುಸಿದ್ದರು ತಮ್ಮ ಸುಖ ಸಂತೋಷಕೆಂದು ಗಾಂಜ-ಬಂಗಿ ಮುಂತಾದ ನಿಷೆಪಾವಾದಿ ಸೊಪ್ಪನ್ನು ಅರೆದು ಸೇವಿಸುತ್ತಿದ್ದರು. ಒಂದು ದಿನ ಗಾಂಜದಂತಹ ನಿಷೆಪಾನಾದಿ ಸೇವಿಸಿ ದೇವಿ ಯಲ್ಲಮ್ಮನನ್ನು ಮೋಹಿಸಲು ಪ್ರಯತ್ನಿಸಿದರಂತೆ. ಇದನ್ನು ಅರಿತ ದೇವಿಯು ನಿಶೆಯಲ್ಲಿದ್ದ ಕಾಡುಸಿದ್ದರನ್ನು ಆನೆಹೊಂಡಕ್ಕೆ ಬೀಳುವಂತೆ ಉಚ್ಚೆ ಒಯ್ದು ಅವರನ್ನು ಸರ್ವನಾಶ ಮಾಡಿದಳಂತೆ. ಆದ್ದರಿಂದ ದೇವಿಗೆ ಉಚ್ಚಂಗೆಮ್ಮ ಉಚ್ಚಂಗಿ ಎಂದು ಆಕೆ ನೆಲೆಸಿರುವ ಗುಡ್ಡಕ್ಕೆ ಉಚ್ಚಂಗಿಗುಡ್ಡ, ಆ ಗುಡ್ಡದ ಮೇಲೆ ದುರ್ಗ ಕಟ್ಟಿದ್ದರಿಂದ ಉಚ್ಚಂಗಿದುರ್ಗ ಆಯಿತು ಎಂದು ಶಾಸನದಿಂದ ತಿಳಿದುಬರುತ್ತದೆ.

ಪವಾಡ ಪುರುಷನಾದ ಶಿವಶರಣ ಏಕಾಂತ ರಾಮಯ್ಯನು ಅಬಲೂರಲ್ಲಿ ತನ್ನ ತಲೆಯನ್ನೆ ಪಣವಾಗಿ ತರಿದುಕೊಟ್ಟು ತಿರುಗಿ ಪಡೆದು ಶಿವನೇ ದೇವರೆಂದು ಸಿದ್ಧಪಡಿಸಿ, ಜೈನರನ್ನು ಸೋಲಿಸಿ

ಜಿನಮೂರ್ತಿಯನ್ನೊಡೆದು ಆ ಸ್ಥಳದಲ್ಲಿ "ವೀರ ಸೋಮೇಶ್ವರ" ಎಂಬ ಲಿಂಗವನ್ನು ಪ್ರತಿಷ್ಠಿಸಿ ಬಿಜ್ಜಳರಾಯನಿಂದಲೂ ಕದಂಬ ಕಾಮದೇವರಸನಿಂದಲೂ ಚಾಳುಕ್ಯ ಸೋಮೇಶ್ವರನಿಂದಲೂ ಗೌರವಿಸಲ್ಪಟ್ಟನೆಂದು ತಿಳಿದುಬರುತ್ತದೆ. ಹಾಗೆ ಶಾಸನವು ಅಬಲೂರಿನ ವರ್ಣನೆ ಮಾಡಿರುವುದನ್ನು ಕಾಣಬಹುದು.

"ಸೊಗಯಿಪುದಲನ್ದೆಯೆಂಬುದು
ನಗರಂ ಚೆಲುವೆಸೆದು ನಾಡೆಯಮರಾವತಿಗಂ
ಮಿಗಿತಿನಿಸಿ ವಿಬುಧ ಜನದಿಂ
ದಗಣಿತಧನಧಾನ್ಯ ಜಳ ಸಮೃದ್ಧಿಯಿನೆಂದುಂ
ಪ್ರಕಟಿತ ಕಮರಾವತಿಯೊಳ್
ಸುಕೇಶಿಯುಂ ಮಂಜು ಘೋಷೆಯುಂ ತಾಮಿರ್ಬ್ಬ
ರ್ಸಕಳವಧೂತತಿಯೆಲಂ
ಸುಕೇಶಿಯರ್ಮ್ಮಂಜು ಘೋಷೆಯರ್ತ್ತಪುರದೊಳ್"[೫೯]

ಅಬಲೂರು ಗ್ರಾಮ ತುಂಬ ಸಮೃದ್ದಿಯಿಂದ ಕೂಡಿತ್ತೆಂದು, ಅಮರಾವತಿಯನ್ನು ಮೀರಿಸುವಂತೆ ಕಂಗೋಳಿಸುತ್ತಿತ್ತು ಎಂದು ತಿಳಿಸುತ್ತದೆ.

ಕೊಪ್ಪಳ ತಾಲೂಕು ಇಟಗಿ ಗ್ರಾಮದ ಕ್ರಿ.ಶ. ೧೧೧೨ರ ಚಾಲುಕ್ಯ ಅರಸ ಆರನೆ ವಿಕ್ರಮಾದಿತ್ಯನ ಶಾಸನ ಬೆಳ್ವಲನಾಡ ಇಟ್ಟಗಿಯನ್ನು ಹೀಗೆ ವರ್ಣಿಸುತ್ತದೆ.

"ಸಕಳದ್ವೀಪಕಳಾಪಮಂ ಮಿಗುವ ಜಂಬೂದ್ವೀಪದೋಳ್ ಕೀರ್ತ್ತವೆತ್ತು
ಕರಂ ಭಾರತವರ್ಷಮಿಪ್ಪುದದು ವರ್ಷೋತ್ಕೃಷ್ಟಮಂತಲ್ಲಿ ವಿಶ್ವ
ಕುಳಾಸಂಕುಳ ಜನ್ಮಭೂಮಿ ಭುವನಕ್ರೀರಮ್ಯ ಹರ್ಮ್ಯಾ(ರ್)ಗ್ರ ಚೂ
ಳಿಕೆಯಿರ್ಕ್ಕುಂ ಬಹುಧರ್ಮ್ಮದೇನು ವಿವಹಕ್ಕಾಡುಂಬೊಲಂ ಬೆಳ್ವಲಂ!!
ಕಂ!! ನರೆಯಂಗಲ್ಪನ್ನೆರಡುಂ
ಧರಾಂಗನಾತಿಳಕಮೆನಿಸಿ ಬೆಳ್ವಲನಾಡೋಳ್
ಕರ ಮೊಪ್ಪಿ ತೋರ್ಕ್ಕುಮವಡಿಜಿಕೊ
ಳ್ದೊರೆವೆತ್ತ ಮಹಾಗ್ರಹಾರ ವಿಟ್ಟಗೆಯೆಸೆಗುಂ

ಆಡುವ ಸೋಗೆ ಪಾಡುವಳಿಗಳ್ ನಡಪಡುವ ಹಂಸೆ ಪಂಚಮಂ ಬಾಡುವ ಗಂಡಕೋಗಿಲೆ ಕೆಲನ್ನುರ್ನುಡಿದಂತುಟನಾಗಳನ್ತೆ ಮಾತಾಡುವ ರಾಜಕೀರವೊಲವರ್ಕ್ಕಿಸಲಾ-ದಗಲ್ದು ಪೂವಿನಂ-ಬಾಡೆ ಲತಾವನಂಬುಗುವ ನಲ್ಲವರಲ್ಲಿಯ ನಂದನಂಗಳೊಳ್!![೬೦]

ಬೆಳ್ವಲ ನಾಡು ಅನೇಕ ಧರ್ಮಗಳೆಂಬ ಧೇನುಗಳ ವಿಹಾರ ಭೂಮಿ ನರೆಗಲ್ಲು ೧೨ರಲ್ಲಿ ಇಟ್ಟಿಗೆ (ಇಟಗಿ) ನರೋತ್ತಮರ ಆವಾಸವಾದ ಅಗ್ರಹಾರವಾಗಿತ್ತು. ಇದು ನಾಗಲೋಕವನ್ನೆ ಹೋಲುತ್ತಿತ್ತು. ಇಲ್ಲಿ ಮಾಡುವ ಜನರು ತುಂಬಾ ಸುಖಿಗಳಾಗಿದ್ದರು. ಇಲ್ಲಿಯ ನಿಸರ್ಗ ಅನೇಕ ವನಗಳಿಂದ ಕೂಡಿತ್ತು. ಇಂದ್ರನ ಅಮರಾವತಿಯನ್ನು ಹೋಲುವಂತಿತ್ತೆಂದು ಶಾಸನ ಹೇಳುತ್ತದೆ. ಇಲ್ಲಿ ಅನೇಕ ಪಕ್ಷಿಗಳಿದ್ದವು. ಕೆಲವು ಮಾತನಾಡುವ ರಾಜ ಪಕ್ಕಿಗಳಿದ್ದವೆಂದು ವರ್ಣಿಸುತ್ತದೆ.

ಹಂಪಿಯಲ್ಲಿನ ಶಾಸನವೊಂದರಲ್ಲಿ ಮನ್ಮುಖತೀಥದ[೧] ಉಲ್ಲೇಖವಿದೆ. ಕೇವಲ ಈ ಹೆಸರೊಂದನ್ನೇ ಆ ಶಾಸನದಲ್ಲಿ ಉಲ್ಲೇಖಿಸಿದ್ದು ಅದರ ಪೌರಣಿಕ ಮಹತ್ವದ ಕುರಿತು ಅಲ್ಲಿ ಹೇಳಿಲ್ಲ. ಅದಾಗ್ಯೂ ಈ ಸ್ಥಳನಾಮದ ಕುರಿತು ಚರ್ಚೆ ಗಮನ ಸೆಳೆಯುತ್ತದೆ. ಏಕೆಂದರೆ ರೂಢಿಯಲ್ಲಿ ಈ ಸ್ಥಳಕ್ಕೆ "ಮನ್ಮುಖ ತೀರ್ಥ" ಎಂದು ಕರೆಯದೇ, 'ಮನ್ಮಥತೀರ್ಥ' ಎಂದು ಕರೆಯುತ್ತಿದ್ದರು. ಹರಿಹರನ 'ಗಿರಿಜಾ ಕಲ್ಯಾಣ'ದಲ್ಲಿಯೂ ಈ ಸ್ಥಳಕ್ಕೆ ಮನ್ಮಥತೀರ್ಥ ಎಂದೇ ಕರೆಯಲಾಗಿದೆ. ಈ ಕೃತಿಯ ಪ್ರಕಾರ ಈ ಸ್ಥಳದಲ್ಲಿ ಮನ್ಮಥ ದಹನವು ನಡೆದುದರಿಂದ ಈ ಹೆಸರು ಬಂದಿದೆ ಎನ್ನಲಾಗಿದೆ. ಆದರೆ ಶಾಸನ ಹಾಗೂ ಸ್ಥಳ ಪುರಾಣಗಳಲ್ಲಿ ಈ ಸ್ಥಳದ ಹೆಸರು 'ಮನ್ಮುಖತೀರ್ಥ' ಎಂದು ಹೇಳುತ್ತವೆ.

ಹಂಪೆಯನ್ನು ಪಂಪಾಕ್ಷೇತ್ರ, ಪಂಪಾತೀರ್ಥ, ಪಂಪಾಪುರ, ಪಂಪಾಪಟ್ಟಣ ಎಂದು ಮುಂತಾದ ಹೆಸರುಗಳಿಂದ ಕರೆದಿರುವುದು ಶಾಸನ ಮತ್ತು ಪುರಾಣಗಳಿಂದ ತಿಳಿದುಬರುತ್ತದೆ. ಕುರುಗೋಡಿನ ಸಿಂದವಂಶದ ಅರಸ ಇಮ್ಮಡಿ ರಾಚಮಲ್ಲನ ಮಗನಾದ ಕಲಿದೇವನ ಸಾಮಂತ ಅರಸನಾದ ಮೈದುನ ಚೌಡನೆಂಬುವವನು ವಿರುಪಾಕ್ಷ ಮತ್ತು ಪಂಪಾಂಬಿಕೆಯ ನೈವೇದ್ಯಕ್ಕಾಗಿ ದಾನ ನೀಡಿದ್ದನ್ನು ಕ್ರಿ.ಶ. ೧೧೯೯ರ ವಿರುಪಾಕ್ಷ ದೇವಾಲಯದ ಆವರಣದ ಉತ್ತರಕ್ಕಿರುವ ದುರ್ಗಾ ದೇವಾಲಯದಲ್ಲಿರುವ ಶಾಸನದಲ್ಲಿ ಉಲ್ಲೇಖಿಸಿದೆ.

ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ ತ್ರೈಲೋಕ್ಯ ನಗರಾರಂಭ ಮೂಲ ಸ್ತಂಭಾಯ ಶಂಭವೇ

ಶ್ರೀಮದ್ಗೌರೀಸಮೇತಂ ನೆಲಸಿರಲಿದು ತಾಂ ತಕ್ಕುದೀ ಪುಣ್ಯತೀರ್ತ್ಥಶ್ರೀ ಮೆಯ್ವೆತ್ತೊಪ್ಪುವೀ ಹೇಮಶಿಯಿದೆನುತುಂ ತಚ್ಛಿಲೇಂದ್ರಾಗ್ರಮೆಂದುಂ ಧಾಮನ್ತಾನಾಗೆ ಸನ್ತಂ ನೆಲಸಿ ಸೊಗಯಿಪಾ ಶ್ರೀ ವಿರೂಪಾ

ಕ್ಷದೇವಂ ಪ್ರೇಮಂ ಕೈಗಣ್ಮ ಲೀ ಮೈದುನಚವುಡನಭೀಷ್ಟಾರ್ತ್ಥಮಂ ಮಾಡುಗೆಂದು ॥ ನಳಿತೋಳ್ಯಾಖೆಗಳಂ ತಳಂ ತಳಿರ್ಗಳಂ ವೃತ್ತಸ್ತನಂ ಪೌಜ್ಜಮಂ ವಿಳಸತ್ಕುಂತಳಮಾಳೆ ಭೃಂಗತತಿಯಂ ನೀಳ್ದೋಳ್ವೆರಲ್ಲುಟ್ಕಳಂಗಳ ಚೆಲ್ವಂ ಗೆಲೆ ಕಲ್ಪ

ವೃಕ್ಷದವೋಲಾ ಪಂಪಾಂಬಿಕಾದೇವಿ ಕೋಮಳೆ ಚೌಡಯ್ಯನ ಕಾನ್ತೆ ಹಾಚಲೆಗೆ ಮಾಳ್ಕಿಷ್ಟಾರ್ತ್ಥಸಂಸಿದ್ಧಿಯಂ ॥ ವಾರಾ
ಶಿಪರೀತೋದ್ಯಧ್ಧಾರಿಣಿ ಮಧ್ಯಮೆನಲೆಸೆವ ಮೇರುವ ತೆಂಕಲ್ ರಾರಾಜಿಪ ಕುಂತಳ ಧರೆಗೋರನ್ತಿರೆ ಬಲ್ಲ
ಕುಂದೆನಾಡೆಸದಿರ್ಕ್ಕುಂ । ಆ ನಾಳ್ಕೆ ಪಟ್ಟಣಂ ಲಕ್ಷ್ಮೀನಿಳಯಂ ತಾನೆನಿಪ್ಪ ಕುಜುಗೋಡದನು ವ್ರ್ವೀತನುಕಲಿದೇವನೃ
ಪಂ ತಾನೊಲವಿಂ ಪಾಳಿಸುತ್ತಮಿರೆ ಫಣಿವಂಶಂ ॥ ಫಳಿರಸುರಕುಜದ ಚೆಲ್ವಂ ತಳೆದಿರ್ದ್ದಾ ಬಲ್ಲಕುಂದೆನಾಡೊಳ್ತೊಳ್ತೊಂ
ದೊಳ್ಗೊಂಬೆನೆ ದೊರವದಿನಾಡಿಳೆಯೊಳ್ ರಂಜಿಪುದು ನೋಡೆ ನಾಡುಗಳರಸಂ ॥ ಆ ದೊರವದಿನಾಡೊಳ್ಪಂಪಾತೀರ್ತ್ಥಮಿ
ಪ್ಪುದದೆನ್ತೆನೆ ॥ ವಿಲಸದ್ಗಂಗಾನದಿಯಿಂ ಹಲವುಂ ತೀರ್ತ್ಥಂಗಳಿಂ ಸುದೇವಾಯತನಾ । ವಲಿಯಂ ತಾಪಸ ತ
ತಿಯಿಂ ಸಲೆಯೊಪ್ಪುವುದಖಿಳಜನ್ಮ ಪಾಪಾಪಹರಂ ॥ ಮತ್ತವೆಂತಪ್ಪುದೆಂದಡೆ ॥ ಅದು ಪುಣ್ಯೋದಯ ಜನ್ಮಭೂಮಿ ದುರಿತೌಘಚ್ಛೇದನಾವಾಸಮಭ್ಯುದಯಾನೀಕ ಫಳಪ್ರದಂ ಸುಖಲತಾ ಸಂವರ್ದ್ಧನ ಕ್ಷೇತ್ರಮಾ
ವುದು ಭಕ್ತರ್ಗ್ಗಭಿವಾಂಛಿತಾರ್ತ್ಥಸುಖಮನ್ತಾನೀವ ಸಂಸ್ಥಾನವೆಂಬುದು ಲೋಕಂ ಭುವನತ್ತಯೈಕ ಹಿತಮಂ ಪಂಪಾವರಕ್ಷೇತ್ರಮಂ ॥ ಅಂತಪ್ಪೀ ಸುತೀರ್ತ್ಥದೊಳ್ ದರ್ಮ್ಮೋದ್ಧರಣಂ ಮಾಡಿದ ಮೈ
ದುನಚೌಡಯ್ಯನನ್ವಯವೆಂತೆನೆ ॥ ಕಾಮವ್ವೆನಾಯಕಿತಿಯುಂ ಸೋಮೆಯಹೆಗ್ಗಡೆಯು
ಮೆಸೆಯಲೊಡವುಟ್ಟಿದರುದ್ದಾಮಗುಣರ್ ಸಿರಿವೆರಸಾ ಸೋಮಂ ದುಗ್ಧಾಬ್ಧಿಯಲ್ಲಿ ಹುಟ್ಟುವ ತೆಱದಿಂ॥
ಆ ಕಾಮವೆನಾಯಕಿತಿಗೆ ಲೋಕಸ್ತುರನಪ್ಪ ಲಕ್ಷ್ಮಣಂ ಮಾದಯ್ಯಂ ಸ್ವೀಕೃತಗುಣ ನಾಚಯ್ಯಂ
ಭೂಕಾನ್ತರ್ತ್ತನಯರಾದರಿಂತೀ ಮೂವರ್ ॥ ಸಿಡಿಲೆಸೆವ ಕಾಯ್ಪಿನೀಶನ ಕಡುಗೋಪಮನಂತಕನ ಲಸನ್ಮಸಕಮನಯ್ದೊಡಗೂಡಿ ಲಕ್ಷ್ಮ[ಣ]ನ ತಾಂ ಪಡೆದಂ ಮುಂ ಧಾತೃ ಬಳಿಕೆ ಜಗಮಂ ಪಡೆದಂ ॥ ಶರವರ್ಷ
ಮನರಿಸೇನೆಗೆ ಹಿರಣ್ಯವರ್ಷಮನೆ ಬುಧರ್ಗೆ ಕರ್ಪೂರದ ಬಲ್ಸರಿಯಂ ಸಮಸ್ತ ಜನಕಾದರದಿಂ ದಂ ಕಱೆವುದಲ್ತೆ ಮಾಧವಹಸ್ತಂ ॥ ಬಿಲ್ವಿಡಿದವರ್ಗಳ್ ತೆಗೆಯಲ್ಕಲ್ವರ್ದ್ಧಾರಿಣಿ ಯೊಳೆಲ್ಲಮಿದು ವಿಪ
ರೀತಂ ಬಿಲ್ವಿದ್ಯೆಯಾಚಿಗಾಂಕಂ ಬಿಲ್ವಿಡಿದೆಡೆ ತೆಗೆವುದಹಿತಮಂಡಲಮತ್ತಲ್ ॥ ವ ॥ ಅನ್ತುಭವನ ದನ್ತೆ ಮೂವರ್ತ್ತನಯರುಂ ವೀರಕ್ಕಂ ವಿತತರಣಕ್ಕಂ ನೆಲೆಯೆನಿಸಿ ಯಿರ್ಮ್ಮಡಿ ರಾಚಮಲ್ಲದೇವಾ

ಪತ್ಯನಪ್ಪ ಶ್ರೀ ವೀರ ಕಲಿದೇವರಸನ ರಾಜ್ಯಾಂಭೋದಿ ಪ್ರವರ್ಧನ ಚಂದ್ರರೆನಿಸಿ ಕಱುಗೋಡೊಳ್ಸುಖ
ದಿಂ ರಾಜ್ಯಂಗೆಯ್ಯುತ್ತಮಿರ್ದ್ದವರೋಳ್ ವಿರೂಪಾಕ್ಷತೀರ್ತ್ಥ ರಕ್ಷಣಾರ್ತ್ಥಂ ಸಾಮನ್ತ ಮಾದೆಯ
ನಾಯಕಂ ಮತಂಗಪರ್ವ್ವತಮಂ ಪ್ರತಿಪಾಳಿಸುತ್ತಮಿರೆ ॥ ಕಾಮವ್ವೆಯೊಡನೆ ಹ (ಹು)
ಟ್ಟಿದ ಸೋಮೆಯಹೆಗ್ಗಡೆಗಮೆಸೆವ ಕಾಚವ್ವೆಗಮುದ್ದಾಮ ಗುಣನೆಸೆಯೆ ಪುಟ್ಟಿದನೀ ಮಹಿ ಬಣ್ನಿಸುತಿ
ರಲ್ಕೆ ಮೈದುನಚೌಡಂ ॥ ಆತನ ಬಲ್ಪನಾತನವುದಾರ್ಯ್ಯಮನಾತನ ತೇಜಮಂ ಸಮಂತಾತನ ಪು
ಣ್ಯದುನತಿಯನಾತನ ಲಕ್ಷ್ಮಿಯನಾತನೊಳ್ಗುಣವ್ರಾತಮನಾತನುದ್ಭವಮನಾತನ ಧರ್ಮ್ಮ
ರತತ್ವ ಮಂದಲಿಂತೀತೆಜನೆಂದು ಬಣ್ನಿಪೊಡೆ ವಾಸುಗಿಲ್ಲದೆ ಮಿಕ್ಕುರಾರ್ಪ್ಪರೇ ॥ ಆದೊಡಮೆನ್ನಜೀವ
ನಿತ್ತಂ ಬಣ್ನಿಪೆನದೆಂತೆನೆ ॥ ಹರಲಲ್ಲದ ಚಿನ್ತಾಮಣಿ ಮರನಲ್ಲದ ಕಲ್ಪಭೋರುಹಂ ಪಶುತೆ
ಯಂನಾತಿರದ ಸುರಧೇನುವೆಂದೀ ಧರೆ ಪೊಗಳ್ಗುಂ ಚೌಡಿಗಾಂಕನೀ ಪುನ್ನತಿಯಂ ॥ ಒಲಿಸುವುದರಿದ
ಬಲೆಯರಂ ಸಲೆ ಮೇಲ್ಪಿಂ ಬಲ್ಪಿನಿಂದೆ ಸಂಗರದೊಳ್ತಂ ನಲಗಿನ ಮೊನೆಯೊಳೆ ಚೌಡಣನೊಲಿಸಿದ
ಪರಿ ಹೊಸತು ನೋಡೆ ವಿಜಯಶ್ರೀಯಂ ॥ ಸೆಡೆದು ದವಾನಳಂ ನಡೆಯುತಿರ್ಪ್ಪುದು ಪುಲ್ವಿಡಿದಾಂತ
ಭೀತಿಯಿಂ ಮಿಡುಕುವುದಲ್ತು ನೀರೊಳಗಣಿಂ ಬಡವಾನಳನಪ್ಪಿ ಶುಂಭುವಂ ಬಿಡದೆ ಲಲಾಟನೇತ್ರ
ಶಿಖಿಯಾ
ದುದು ಚೌಡನ ತೇಜದೇಳ್ಗೆಯುಗ್ಗಡಕಗಿದುಗ್ರವಹ್ನಿ ಯೆನಲಾರ್ಗಳ ತೇಜಮನಾಂತು ಬಾಳ್ವವರ್ ॥
ಅನ್ತು ನೆಗಳ್ದ
ಚೌಡಯ್ಯಂ ಸಾಮನ್ತ ಲಕ್ಷ್ಮೀಧರನಂ ಮೆಚ್ಚಿಸಿ ಭಾವನ ಗಂಧವಾರಣಮೆಂಬ ಬಿರುದಂ ಪಡೆದು ॥
ಹರಿದೆಯ್ದೀ
ಡಟ್ಟಿ ಮುಟ್ಟಿತ್ತಡಸಿ ಹಿಡಿದುದೊತ್ತಿತ್ತು ಸುತ್ತಿತ್ತು ಕುತ್ತಿತ್ತೊರಸಿತ್ತೆತ್ತಿತ್ತು ಬೀಸಿತ್ತೊಗೆದು ದೊದೆದುದೀಡಾಡಿ
ತೌಂಕಿತ್ತು
ರುಳ್ಚಿತ್ತುರಮಂ ಮೆಟ್ಟಿತ್ತು ಮಾಜಿಾಂತರ ನಡಿದಡೆ ಹೊಯ್ದೊಕ್ಕಿಲಿಕ್ಕಿತ್ತು ಕಾಯ್ಪಿಂ ಧುರದೊಳ್ಸಾಮಂತ
ಲಕ್ಷ್ಮೀಧರನ ಮ
೪೧. ಯಿದುನಂ ಚೌಡನೆಂಬಾ ಮದೇಭಂ ॥ ಅಂಕುಸಕೆ ನಿಲ್ವುವಾನೆಗಳಂಕುಸಕಿದು ನಿಲ್ವುದಲ್ತು
ಲಕ್ಷ್ಮನ ನುಡಿಯೆಂ
೪೨. ಬಂಕುಸಕೆ ನಿಲ್ವುದುಕ್ಕಿನ ಡೊಂಕಿಗೆ ನಿಂದಪುದೆ ಚೌಡನೆಂಬ ಮದೇಭಂ ॥ ಹರಿತನುವಿನ
ಸಸಿಬಿಂಬದ ಹರಕಂಠದ ಕ
ಪ್ಪು ಪಿಂಗೆ ಚವುಡನ ಜಸದಿಂ । ಸಿರಿ ಹರಿಯಂ ಕುಮುದಿನಿ ಶಶಧರನಂ ಶಂಕರನ ನಗಜೆಯಜೆಯಳ್
ಕು
ಱುಪಿಂ ॥ ಕೇಸವಹೆಗ್ಗಡೆಗಂ ಮಹಿಮಾ ಸೌಭಾಗ್ಯಯುತೆ ಮಾದಲೆಗಮುದೆಯಿಸಿದಾ ಭಾಸುರ
ಸುಪುಣ್ಯೆ

ಹಾಚಲೆ ಭೂ ಸಂಸ್ತುತನಪ್ಪ ಚೌಡಯನ ವಿ(ವ)ಧುವಾದಳ್ ॥ ಆಕೆಯ ಗುಣ ರೂಪಾತಿಶಯವೆಂತನೆ॥
ದೊರೆಯೇ ಚೌಡಯ್ಯನುದ್ಯತ್ಸತಿಯೆನಿಸಿದ ಹಾಚವ್ವೆಗೀ ಧಾತ್ರಿಯೊಳ್ಭಾಸುರ ಚಾತುರ್ಯೋಕ್ತಿಯಿಂ
ವಾಗ್ವಧು ಸೊಬಗಿನೊಳಾ ರಂಬೆ ಸೌಭಾಗ್ಯದಿಂದಂ ವರಗಂಗಾದೇವಿ ಶೌಚವ್ರತದೊಳೆ ನೆಗಳ್ದಾ
ಸೀತೆ
ಯೌದಾರ್ಯ್ಯದಿಂದಂ ಸುರಭೂಜಂ ರೂಪಿನಿಂದಂ ರತಿ ಸಿರಿ ವಿಳಸಲ್ಲಕ್ಷಣಾ ನೀಕದಿಂದಂ ॥
ಅನುಪಮಪಾತ್ರದಾನ ವರಹಸ್ತಿನ ಶಂಭುಪದಾರವಿಂದ ಚಿತ್ತಿನಿ ದುರಿತೌಘಶಂಕಿನಿ ಲಸಚ್ಚವುಡಯ್ಯ
ನ ಹೃತ್ಸರೋಜಪದ್ಮಿನಿ ಯೆನೆ ನಾಲ್ಕುಜಾತಿಯ ಬಳಾಗುಣಮಂಗುಣದಿಂದೆ ತಾಳ್ದಿದಳ್ ವಿನಯನಿಧಾನೆ
ಹೆ
ಗ್ಗಡಿತಿ ಹಾಚಲೆಯೆಂಬುದು ಧಾರಿಣೀಜನಂ ॥ ಅಯ್ದೆ ಮದನಾಸ್ತ್ರದಂತಿರಲಯ್ದುದ ಬಿಂದುಗಳನಾಂ
ತ ಶುಕ್ತಿಕೆವೊಲ್ ಮುತ್ತಯ್ದೆ ಯೆನಿಪ್ಪಳ್ ಲಕ್ಮನ ಮಯ್ದುನ ಚೌಡಣನ ವನಿತೆ ಹಾಚಲೆಯೆಂದುಂ
॥ ಕಲಿಹೆಗ್ಗಡೆ
ಚೌಡಂಗಂ ಸುಲಲಿತಮೂರ್ತ್ತಿ ಯೆನಿಸಿರ್ದ್ದ ಹಾಚಲೆಗಂ ನಿರ್ಮ್ಮಳ ಕಾಮವ್ವೆಯುಮನುಪಮ
ವಿಳಾಸಿ ಲಕ್ಮಲೆ
ಯುಮಾದರಿರ್ವ್ವರ್ ಸುತೆಯರ್ ॥ ಅವರೊಳಗಗ್ರಜೆ ಕಾಮವೆಗವಿಕಳಪುಣ್ಯ ಯುತೆಗೆಸೆಯೆ ವಲ್ಲಭ
ನಾದಂ। ಭುವನನುತಂ ಮಾದಯ್ಯಂ ವಿವೇಕಿಯಾಚಯ್ಯನಾಯಕ ಪ್ರಿಯತನಯಂ ॥ ಆ ಕಾಮವ್ವೆಯ
ಲಕ್ಮಲೆಯಾ
ಕಾರಮನವರ ಪುಣ್ಯಮಂ ಸೌಭಾಗ್ಯ ಶ್ವೀಕೃತಮನೆಸೆವ ಗುಣಮಂ ಲೋಕಂ ಬಣ್ನಿಸುವುದವರ
ವಾಕ್ಚತುರತೆಯಂ ॥
ಅನ್ತು ಪುತ್ರ ಮಿತ್ರ ಗೋತ್ರ ಬಂಧು ಶಿಷ್ಟವಿಶಿಷ್ಟ ಜನರಕ್ಷಣೆಯಂ ಮಾಡುತ್ತಂ ॥ ಧನಮಂ
ಬಯ್ತಿಡಲೆಂದು
ಪೇಳ್ವಡೆನನೇ ದಾನಕ್ಕೆ ಧರ್ಮ್ಮಕ್ಕೆ ಸಜ್ಜನರ್ಗ್ಗಿಷ್ಟರ್ಗ್ಗೆರೆದರ್ಗ್ಗೆ ಬಾಂಧವರ್ಗೆ ಜೀರ್ಣ್ನೋದ್ಧಾರ
ಸಂಸ್ಥಾಪನಕ್ಕನಿಶಂ
ಮಾಡುವ ದೇವತಾರ್ಚ್ಚನಕೆ ಯೆಂದೆಂದಾರ್ಜ್ಜಿಪೆಂ ಬೆಱಸದ್ವಿನಿಯೋಗಕ್ಕೆ ದಲೆಂದು ಪೇಳ್ವಡೆವನೇ
ಚೌಡಯ್ಯನೇಂ
ರಂದದಿಂ ॥
ಪಂಪಾದೇವಿಗೆ ನೆಱೆ ಚೆಲ್ವಂ ಪಡೆದಿರೆ ಕಂಚಿನಮಳ್ವಡಿಗಳಂ ಚೆಂಬೊನ್ನಿಂ ಪೊಳೆವ ಕಳಶವಂ
ಭುವನಂ ಪೊಗಳಲ್ ಮಾಡಿಸಿದನೆಸೆಯೆ ಚೌಡಯ್ಯಂ ॥ ಮುದದೆ ವಿರೂಪಾ
ಕ್ಷಗೃಹಕ್ಕೊದವಿದ ಪಂಪಾಲಯಕ್ಕೆ ಬಹ್ಮೇಶಲಸತ್ಸದನಕ್ಕೆ ಭೈರವಗೃಹಕ್ಕುದಾರಿ
ಚೌಎಯ್ಯನೆಸಯೆ ಸೊತೆವಳಿಯಿಸಿದಂ ॥ ಮತ್ತಮಾದೇವಗೃಹಂಗಳ್ಗೆ ॥ ಸೊಗಯಿಪ ಘಂ

ಟೆ ಯಡ್ಡಣಿಗೆ ಯಾರುತಿ ಧೂಪಘಟಂ ಸುಪರ್ಯ್ಯಣಂ ಜಗಕತಿಚಲ್ವನಪ್ಪ ಕಳಶಂ ತಿಳಿವಟ್ಟಲೆಸಪ್ಪ ಚಂ
ದನಂ । ಮೃಗಮದದಂಪನಿಕ್ಕುವ ಸುಗಂಧದ ಸಿಪ್ಪು ಸುವಸ್ತ್ರ ಭೂಷಣಾದಿಗಳನ್ನೆ
ಕಮಂ ಮುದದೆ ಮೈದುನಚೌಡಣ ನಿತ್ತನೊಪ್ಪಿರಲ್॥ ಪತಿಮಾಳ್ಪ ಧರ್ಮ್ಮ ಕಾರ್ಯ್ಯೋಂನತಿಯಂ ತಾಂ
ಮುಂದುವರಿದು ಮಾಡುವ ಗುಣದುಂನತಿಯಿಂ ಹಾಚಲೆ ಪಡೆದಳದ ಕ್ಷಿತಿಯೊಳ್ ಸ್ತ್ರೀರ
ತ್ನಮೀಕೆಯೆಂಬೊಳ್ಪೆಸರಂ ॥ ಪಡೆದೊಡಮೆಯಪ್ಪುದೆಂತುಂ ಕಿಡುವದೆ ಕಿಡದೊಡಮೆ ಧರ್ಮ್ಮವೆಂದಾರ್ಜ್ಜಿಸುವ
ರ್ತ್ತಡೆಯದೆ ಧರ್ಮ್ಮವನಾರಿಂ ಕಡುಜಾಣರೊ ಚೌಡಿಗಾಂಕನುಂ ಹಾಚಲೆಯುಂ ॥ ಸ್ವಸ್ತಿ ಶ್ರೀಮ
ತ್ಸಕನ ಕಾಲಂ ೧೧೨೧ ಸಲೆ ಸಿದ್ಧಾರ್ತ್ಥಿ ಸಂವತ್ಸರದಲು ಹಂಪಾತೀರ್ತ್ಥದ ಸ್ಥಾನದೇಳುನೂರ್ವ್ವರು ಮು
ಖ್ಯವಾಗಿ ಸಾಮನ್ತ ಲಖ್ಮೆಯನಾಯಕ ಮಾದೆಯನಾಯಕನ ಕೈಯ್ಯಲುತ್ತರಾ
ಯಣಸಂಕ್ರಮಣ ನಿಮಿತ್ತವಾಗಿ ಮೈದುನಚೌಡಯ್ಯಂ ಧಾರಾಪೂರ್ವ್ವಕಂ ಮಾಡಿಸಿಕೊಂ
ಡು ಸರ್ವ್ವಬಾಧೆ ಪರಿಹಾರಾರ್ತ್ಥವಾಗಿ ಬಿಟ್ಟ ದತ್ತಿಯೆಂತೆನೆ ವಿರೂಪಾಕ್ಷದೇವರ ನಿವೇದ್ಯಕ್ಕೆ ಅಕ್ಕಿ
ಬಳ್ಳ ೧ ಹಂಪಾದೇವಿಯ ನಿವೇದ್ಯಕ್ಕೆ ಅಕ್ಕಿ ಬ ೧ ಭೈರವದೇವರ ನಿವೇದ್ಯಕ್ಕೆ ಅಕ್ಕಿ ಮ ೨
ಅನ್ತು ನಿತ್ಯಪಡಿಯ ನಿವೇದ್ಯದಕ್ಕಿ ಹತ್ತುಮಾನಕ್ಕೆಂದು ಹಂಪೆಯ ಕಟ್ಟೆಯ ಬಯಲೊಳಗೆ
ಕಳ್ಳಿಯಕಳದಜೆುಯಿಂ ಮೂಡ ಒಸರಕಡಹಿಂ ಬಡಗ ಬಮ್ಮಿಸೆಟ್ಟಿಯ ಹೆಸಲಿಂ ತೆಂಕ ಕಿಱುಗ
ಡಲಿಂ ಪಡುವ ಸತಖಂಡದ ಗದ್ದೆ ಬೀಜವರಿ ಖಂಡುಗ ೧ ಕೊಳಗ ೫ ಆ ವಿರೂಪಾಕ್ಷದೇವರ ಬಲದದೆಸೆ
ಯ ಸತ್ರಸಾಲೆಯಲ್ಲಿ ಆತಿಥ್ಯ ಮುಖ್ಯವಾಗಿ ೧೦ ಮನುಷ್ಯ ಬ್ರಾಹ್ಮಣರ ಭೋಜನಕ್ಕೆಂದು
ಆ ಬಯಲಗಿಂಡಿನ ಹಸಲಿಂ ಮೂಡ ಒಟ್ಟಿನಜೆುಯಿಂ ಬಡಗ ಬಯ್ಯಾಲಿಂ ಪಡುವ ಗಟ್ಟಿನೆಜೆು
ಯಿಂ ತೆಂಕ ಬೀಜವರಿ ಖಂಡುಗ ೨ ಕೊಳ ೧೫ ಱ ಗದ್ದೆಯ ಮೂಕುತಿಯ ಹಸಲು ೧ ಆ
ಸತ್ರಕ್ಕೆಂದು ಹೊಸಊರ ಆಗ್ನೇಯದ ದೆಸೆಯ ಎಡವಲೆಯ ದಾರಿಯಿಂ ಮೂಡಲುಪ್ಪಿನಮೋ
ಳೆಯಿಂ ಪಡುವ ಕೆಯಿ ಮತ್ತರು ೧ ಕಂಬ ೪೫೦ ಮನ್ಮುಖತೀರ್ತ್ಥದಿಂ ಮೂಡ ಕೋಡುಯ ಬೆನಕನಿಂ ಬ
ಡಗ ನಾಯಕರ ದೇವದೋಟದಿಂ ತೆಂಕಣಡಕೆಯ ತೋಟದೊಳಗೆ ಹೆಗ್ಗಡೆ ರೇಚಯ್ಯಂ ಮಾಡಿಸಿದಿರ್ಮ್ಮ
ಡಿರಾಚಮಲ್ಲೇಶ್ವರದೇವರ್ಗ್ಗೆ ಯೊಂದುಭಾಗಮಂ ಕಳೆದುಳಿದ ತನ್ನೊರ್ಭಾಗದೊಳಗೆ ಚೌಡಯ್ಯಂ ವಿರೂಪಾಕ್ಷದೇವರ್ಗ್ಗೆ ಅಡಕೆ ೨ ಎ
ಲೆ ೪ ಮಂ ದೇವಾರ್ಚ್ಚನೆಗೆ ಪುಜ್ಪುಮುಮಂ ಸಲಿಸಿ ಮಿಕ್ಕುದಂ ಜೀರ್ಣ್ನೋದ್ಧಾರಕ್ಕಂ ಸತ್ರದ ಮೇಲು ಬೀಯಕ್ಕವೆಂ

ದು ಬಿಟ್ಟ ಅಡಕೆಯ ತೋಂಟ ೧ ನಿತ್ಯಪಡಿಯ ನಿಯೋಜೆಯಿಂ ಸಲಿಸಿ ಜೀರ್ಣ್ಣೋದ್ಧಾರಕ್ಕವಿಕಿ ಮಿಕ್ಕುದಂ ಕುಲಬ್ರಹ್ಮಪುರಿಯಾಗಿ ಉಂಡಿರ್ಪ್ಪನೆಂದು ದೇವಯ್ಯಂಗೆ ಚೌಡಯ್ಯಂ ಧಾರೆ ಎಱೆ[೩]

ಈ ಶಾಸನದಲ್ಲಿ ಈ ಸ್ಥಳವನ್ನು ಪಂಪಾತೀರ್ಥವೆಂದು ದಾಖಲಿಸಲಾಗಿದೆ. ಕ್ರಿ.ಶ. ೧೩೩೬ರ ನಂತರ ಇದರ ಸಮೀಪದಲ್ಲಿ ವಿಜಯನಗರ ಪಟ್ಟಣ ನಿರ್ಮಾಣವಾದ ಮೇಲೆ ಈ ಪಂಪಾಕ್ಷೇತ್ರ ಎರಡು ಭಾಗಗಳಾಗಿ ವಿಂಗಡಿತವಾಯಿತು. ೧೫೬೫ರಲ್ಲಿ ರಕ್ಕಸ ತಂಗಡಗಿ ಯುದ್ಧದಲ್ಲಿ ಆದಿಲ್‌ಶಾಹಿಗಳಿಂದ ಸೋಲುಂಡ ವಿಜಯನಗರ ಅರಸರು ಈ ಸ್ಥಳವನ್ನು ಬಿಟ್ಟು ಅಳಿದುಳಿದ ಸಂಪತ್ತನ್ನು ತೆಗೆದುಕೊಂಡು ಪೆನುಗೊಂಡಕ್ಕೆ ಹೊರಟುಹೋದರು. ಮುಸ್ಲಿಮರ ದಾಳಿಗೊಳಗಾದ ಈ ಸ್ಥಳ ನಾಶವಾದ ಮೇಲೆ ಜನವಸತಿ ಇಲ್ಲದ ಈ ಪ್ರದೇಶದಲ್ಲಿನ ಅನೇಕ ಸ್ಥಳಗಳ ವಿಷಯ ಜನರ ನೆನಪಿನಲ್ಲಿ ಉಳಿದಿಲ್ಲ. ಹೀಗಾಗಿ ಇದು ಊಹಾತ್ಮಕ ಕಥೆಗಳಿಂದ ತುಂಬಿಹೋಗಿರುವುದರಿಂದ ಪಂಪಾತೀರ್ಥ, ಪಂಪಾ ಸರೋವರ ಪಂಪಾಕ್ಷೇತ್ರವೆಂದರೆ ಈಗಿನ ವಿರೂಪಾಕ್ಷ ದೇವಾಲಯದ ಸುತ್ತಲ ಪ್ರದೇಶಗಳಾಗಿವೆ.

ಆನೆಗೊಂದಿ ತಾಲೂಕಿನ ವಿಪ್ರಗ್ರಾಮದ ಶಿವದೇವಾಲಯದ ಮುಖ ಮಂಟಪದ ಎಡಗೋಡೆಯಲ್ಲಿರುವ ಶಾಸನ ಸ್ಥಳ ಮಹಿಮೆಯನ್ನು ಕುರಿತು ಹೀಗೆ ಹೇಳುತ್ತದೆ. ಇದು ಜಗತ್ತಿನ ಪಾಪನಾಶಿನ ಎಂದು ಈ ಸ್ಥಳವು ಮೂವತ್ತು ದೇವತೆಗಳ ವಾಸಸ್ಥಾನವಾಗಿದ್ದು ಮೂವತ್ತು ತೀರ್ಥಗಳನ್ನು ಹೊಂದಿದ್ದರಿಂದಾಗಿ ಜಗತ್ತಿನ ಪಾಪವನ್ನು ನಾಶಮಾಡುವಂತಹ ಸ್ಥಳವಾಗಿತ್ತೆಂದು ಹೇಳಲಾಗಿದೆ. ದೇವತೆಗಳ ವಾಸಸ್ಥಾನವಾಗಿದ್ದರಿಂದ ಅದೊಂದು ಪವಿತ್ರ ಸ್ಥಳವೆಂದು ಹೇಳಿ ಆ ಸ್ಥಳದ ಮಹಿಮೆಯನ್ನು ಈ ಶಾಸನ ಸಾರುತ್ತದೆ.

ಸೋಮಗ್ರಹಣ ಪರ್ವ್ವನಿಮಿತ್ತ ಖಣ್ಡಸ್ಫುಟಿತ ನವಕರ್ಮ್ಮನಿತ್ಯ
ತಾತಾದ್ಯ ವಾದ್ಯಕ್ಕಂ ಗನ್ಧ ಪುಷ್ಪ ಧೂಪ ದೀಪ ನಿವೇದ್ಯಾರ್ಚ್ಚನಕ್ಕ
ಮಾಗಿ @ ॥ ಇದಸೇವ್ಯಂ ತುಂಗಭದ್ರಾ ತಟದ ಬಡಗ ಕಿಃಕಿನ್ದಮಿ ಪರ್ವ್ವ
ನಾಮಿದರ ವ್ಯತಿಗಳೊಳ್ ಮಂತ್ರಮನೊರೆದು ಸಮಾಳೋಚನಂಗೆಯ್ವ
ಮೆನ್ದಾಸ್ಪದದಿಂ ತತ್ರಿಂಶ ದೇವರ್ಣ್ಣಾ ಆಗಲಿದುವೀ ಪುಣ್ಯಾತೃತೀರ್ಥಂ ಜಗಕಿ
ನ್ತಿದು ವಂದ್ಯಂ ಪಾಪನಾಶಿಂ ಶುಭಕರಮೆನಿಕುಂ ಸ್ಥಾನಮತ್ಯಂನ್ತದಿಂದ ॥
ಎಸೆದಿರೆ ದೇವಪೂಜೆ ನದೀಪೂಜೆಯನಿಂಬಿನ ಮಾಡಿ ಕೀರ್ತಿ ರಂಜಿಸೆ ಜಳ
ದಾನ ಪೂರ್ವ್ವಕದೆ ದೇವನಿಮಿತ್ತಕೆ ದೇವಭೋಗಧರ್ಮ್ಮಸುಟೆಯ ನಿತ್ತನನ್ಯನರಪಾ
ಳಲಸನ್ಮಣಿ ಮೌಳಿಘಟ್ಟಿತ ಪ್ರಸರಪದಂ ನರೇಶ್ವರ ಶಿಖಾಮಣಿಯಾಹವ
ಮಲ್ಲಭೂಭುಜಂ ॥[೩]

ರಾಣೆಬೆನ್ನೂರು ತಾಲೂಕಿನ ಚೌಡದಾನಪುರದಲ್ಲಿ ದೊರೆತ ಕ್ರಿಶ. ೧೨೨೬ರ ಶಾಸನವು ತುಂಗಾಭದ್ರ ನದಿಯನ್ನು ಚೌಡದಾನಪುರವನ್ನು ಹೀಗೆ ವರ್ಣಿಸುತ್ತದೆ.

"ಎಂದು ತನ್ನೊಳ್ಪರಿಭಾವಿಸಿ ಮಿಂತೆನ್ದಂ
ಸುರನದಿಯೇ ತುಂಗಭದ್ರಾ
ವರನದಿ ಸುರಸಮಿತಿ ವಿಪುಗೂ ನಿಕರವು ಆ
ಸುರಗಿರಿ ಮಹೇಶಭವನವು
ಧರೆಯೊಳ್ಕವಿಳಾಸವೆನಿಪ ಮುಕ್ತಿಕ್ಷೇತ್ರವು
ಆ ಮುಕ್ತಿ ಕ್ಷೇತ್ರದೊಳಿರ್ದ್ದಿ
ಮೈಮೆಯ ಮೆನೆಯಬೇಕೆನುತ ಗುರುನುಡಿಯಲ್
ಸ್ವಾಮಿ ಮುಕುತೇಶನೇ ಪರ(ಂ)
ಧಾಮ ಶ್ರೀ ಜ್ಯೋತಿ (ಲಿಂಗ) ನೆಂದೊಲದಿನ್ದಂ ॥"

ಶಕವರ್ಷ ೧೧೪೮ನೆಯ ಪಾರ್ಥಿವ ಸಂವತ್ಸರದ ಭಾದ್ರಪದ ಶುದ್ದ ೧೫ನೇ ಸೋಮವಾರ ಚಂದ್ರೋಪರಾಗ ಪುಣ್ಯತಿಥಿಯ ಮಧ್ಯಾಹ್ನ ಸಮಯದೊಳ್ ಒಂದು ಮುಕ್ತಿಕ್ಷೇತ್ರಮಂ ಪೊಕ್ಕು

ವಿರಚಿಸಿದಂತ ಕೈಲಾಸದ
ಚರಿತ್ರಮಂ ವೀರಭದ್ರನ ಶ್ರೀಪದಮಂ
ಸ್ಮರಿಸುತ ವೀರವ್ರತಮಂ
ಧರಿಸಿದನತುಳಬಳ ವಿಕ್ರಮಂಶಿವ (ದೇವ)ನು

ಶಿವಮುದ್ದ ಮುನಿಗೆ, ಶ್ರೀ ಗಿರೀಶ (ಶ್ರೀಶೈಲ ಮಲ್ಲಿಕಾರ್ಜುನ) ಹೀಗೆ ಹೇಳಿದ. ದೇವಗಂಗೆಗೆ ಸಮಾನವಾದ ತುಂಗಾಭದ್ರಾ ನದಿ, ದೇವತೆಗಳಿಗೆ ಸಮಾನರಾದ (ಶುದ್ಧಶೈವ)ಬ್ರಹ್ಮರು, ಕೈಲಾಸಕ್ಕೆ ಸಮಾನವಾದ ಶಿವ ದೇವಾಲಯ, ಇವುಗಳಿಂದ ಕೂಡಿದ ಮುಕ್ತಿ ಕ್ಷೇತ್ರ (ಗೂಪೆ–ಚೌಡದಾನಪುರ) ಹೆಸರಿನ ಸ್ಥಳವುಂಟು. ಆ ಮುಕ್ತಿಕ್ಷೇತ್ರದಲ್ಲಿದ್ದು ನೀನು ಮಹಿಮೆಯನ್ನು ತೋರಬೇಕು. ಈ ಮಾತನ್ನು ಕೇಳಿ 'ಅಲ್ಲಿರುವ ಮುಕ್ತೇಶ್ವರ ಪರಂಧಾಮ ಶ್ರೀಜ್ಯೋತಿ' ಎಂದು ನಂಬಿ ಶಿವದೇವನು ಶಕವರ್ಷ ೧೧೪೮ನೆಯ ಪಾರ್ಥಿವ ಸಂವತ್ಸರದ ಭಾದ್ರಪದ ಶುದ್ಧ ೧೫ ಸೋಮವಾರ ಚಂದ್ರೋಪರಾಗ ಪುಣ್ಯತಿಥಿಯ ಮಧ್ಯಾಹ್ನ ಸಮಯದೊಳು (ಕ್ರಿ.ಶ. ೧೨೨೬) ಮುಕ್ತಿಕ್ಷೇತ್ರವನ್ನು ಪ್ರವೇಶಿಸಿದನು.

ಹೀಗೆ ಹಿಂದೆ ಚೌಡದಾನಪುರವು ಕೈಲಾಸವನ್ನೆ ಹೋಲುವ ಒಂದು ಪ್ರದೇಶವಾಗಿತ್ತೆಂದು ಶಾಸನದಿಂದ ತಿಳಿದುಬರುತ್ತದೆ. ಈಗಲೂ ಈ ಗ್ರಾಮವು ತುಂಗಭದ್ರ ನದಿಯ ದಂಡೆಯಲ್ಲಿಯೇ ಇದೆ. ಅವಶೇಷಗಳನ್ನು ನಾವು ಇಂದಿಗೂ ನೋಡಬಹುದು.

ದೊರೆತಿರುವ ಶಾಸನಗಳಲ್ಲಿ ದಾನ ಶಾಸನಗಳ ಪ್ರಮಾಣವೇ ಅಧಿಕ. ದಾನ ಶಾಸನಗಳನ್ನು ಅವಲೋಕಿಸಿದಾಗ ರಾಜರುಗಳು ಅಥವಾ ಅವನ ಆಡಳಿತ ಪರಿವಾರವು ದಾನ ನಿಡಿರುವುದು ಹೆಚ್ಚಾಗಿ ಕಂಡುಬರುತ್ತದೆ. ದಾನವನ್ನು ಬಹುತೇಕ ದೇವಸ್ಥಾನಗಳಿಗೆ ನೀಡಿದ್ದೇ ಹೆಚ್ಚು. ಇಂತಹ ಶಾಸನಗಳಲ್ಲಿ ರಾಜನನ್ನು ಪೌರಾಣಿಕ ವ್ಯಕ್ತಿಗಳೊಂದಿಗೆ ಅಭೇಧ ಕಲ್ಪಿಸಿ ವರ್ಣಿಸಲಾಗಿರುತ್ತದೆ. ಏಕೆಂದರೆ ದಾನ ನೀಡಿದ್ದು ದೇವಸ್ಥಾನಕ್ಕಾದರೂ ಆ ದಾನದ ಫಲಾನುಭವಿಗಳು ಪರೋಕಷವಾಗಿ ಪುರೋಹಿತಶಾಹಿ ವರ್ಗದವರೇ ಆಗಿರುತ್ತಾರೆ. ರಾಜ ಪ್ರಭುತ್ವವು ನೇರವಾಗಿ ವ್ಯವಸ್ಥೆಯನ್ನು ನಿಯಂತ್ರಿಸಿದರೆ, ಈ ಪುರೋಹಿತಶಾಹಿ ವರ್ಗವು ಪರೋಕ್ಷವಾಗಿ ವ್ಯವಸ್ಥೆಯನ್ನು ನಿರ್ದೇಶನ ಮಾಡುತ್ತದೆ. ಹೀಗೆ ನಿರ್ದೇಶಿಸುವ ವರ್ಗವು ತಾನು ರೂಪಿಸಿದ ಕಟ್ಟಳೆಗಳಿಗೆ ಅನುಗುಣವಾಗಿ ಸಮಾಜದ ಮುಂದುವರಿಕೆಯನ್ನು ಬಯಸುತ್ತಿರುತ್ತದೆ. ಇಂತಹ ಸಂದರ್ಭದಲ್ಲಿ ದಾನ ಕಟ್ಟ ರಾಜನನ್ನು ಸೃಷ್ಟಿಕರ್ತನಿಗೋ, ಅಪೌರುಷ ವ್ಯಕ್ತಿಗೋ ಹೋಲಿಸಿ ಅವನ ಮತ್ತು ಅವನ ವಂಶದ ಕೀರ್ತಿಯನ್ನು ಆಚಂದ್ರಾರ್ಕ ವಾಗಿ ಉಳಿಸುತ್ತೇವೆಂದು ತೋರಿಸುವುದರ ಮೂಲಕ, ದಾನ ನೀಡುವ ವರ್ಗಕ್ಕೆ ಉತ್ತೇಜನ ನೀಡುತ್ತಿರುತ್ತದೆ. ಹೀಗೆ ಉತ್ತೇಜನಗೊಂಡ ವರ್ಗವು ದಾನ ನೀಡುವುದನ್ನು ಒಂದು ಪರಂಪರೆ ಎಂಬಂತೆ ಮುಂದುವರೆಸಿಕೊಂಡು ಬಂದಿದೆ. ಈ ಪರಂಪರೆಯನ್ನೇ ಪುರೋಹಿತ ಶಾಹಿ ವರ್ಗವು ಸಾಮಾಜಿಕ ಮೌಲ್ಯ ಎಂದು ಘೋಷಿಸಿದಂತಿದೆ.

ಇಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವೆಂದರೆ ದಾನ ನೀಡಿರುವುದು ರಾಜನೇ ಎಂದು ಹೇಳಲಾಗಿರುತ್ತದೆ. ಆದರೆ ಆತ ಯಾವ ಭೂಮಿಯನ್ನು ದಾನವಾಗಿ ನೀಡಿದ ಎನ್ನುವುದು ಮುಖ್ಯ. ಏಕೆಂದರೆ ರಾಜ ದಾನ ನೀಡಿದ್ದು ಸಾರ್ವಜನಿಕವಾದ ಆಸ್ತಿಯನ್ನೋ ಅಥವಾ ತನ್ನ ಸ್ವಂತದನ್ನೋ ಎನ್ನುವುದನ್ನು ಯಾವ ಶಾಸನವೂ ಉಲ್ಲೇಖಿಸಿಲ್ಲ. ಇಲ್ಲಿ ದಾನ ನೀಡಿದ್ದು ಅರಸನಿಗೆ ಸಂಬಂಧಿಸಿದ್ದು ಎಂದರೆ ಆ ಅರಸು ಆ ಸಂಪತ್ತನ್ನು ಯಾವ ರೀತಿಯಲ್ಲಿ ಸಂಪಾದಿಸಿದ್ದ ಎನ್ನುವ ಪ್ರಶ್ನೆ ಹುಟ್ಟಿಕೊಳ್ಳುತ್ತದೆ. ಒಂದು ರಾಜ್ಯವನ್ನು ಗೆದ್ದು ಆ ಸಂಪತ್ತನ್ನು ಆತ ಸಂಪಾದಿಸಿದ್ದ ಎಂದು ಹೇಳುವುದಾದರೆ, ಆ ಗೆಲುವಿಗೆ ಆ ರಾಜ ಒಬ್ಬನೇ ಕಾರಣನಲ್ಲ. ಅಲ್ಲಿ ಲಕ್ಷಾಂತರ ಸೈನಿಕರ ಹೋರಾಟದ ಶ್ರಮವಿದೆ. ರಾಜನೊಂದಿಗೆ ಅವನಿಗಿಂತಲೂ ನಿಷ್ಠೆಯಿಂದ ಹೋರಾಡ ಮಾಡಿದ ಲಕ್ಷಾಂತರ ಸೈನಿಕರ ಪಾಲೂ ಆ ಸಂಪತ್ತಿನಲ್ಲಿದೆ ಎಂದರ್ಥ. ಅಂದಾಗ ಅದು ಪರೋಕ್ಷವಾಗಿ ಸಾರ್ವಜನಿಕರ ಸಂಪತ್ತು. ಅಂತಹ ಸಾರ್ವಜನಿಕರ ಸಂಪತ್ತನ್ನು ತನ್ನದೆಂದು ಭಾವಿಸಿಕೊಂಡು ದಾನ ನೀಡಿ ತನ್ನ ಹಿರಿಮೆಯನ್ನು ಸಾರಿಕೊಳ್ಳುವ ರಾಜಪ್ರಭುತ್ವವು ಮತ್ತು ಅದು ರಾಜನಿಗೆ ಸಂಬಂಧಿಸಿದ್ದು ಎಂದು ಹೇಳಿ ಹೊಗಳುವ ಪುರೋಹಿತಶಾಹಿಗಳು ಸಾಮಾಜಿಕ ಮೌಲ್ಯವನ್ನು ನಿರ್ಧರಿಸಲು ಯಾವ ರೀತಿ ಹಕ್ಕುದಾರರಾಗುತ್ತಾರೆ ಎನ್ನುವುದನ್ನು ಪುನರ್ ಪರಿಶೀಲಿಸುವ ಅಗತ್ಯವಿದೆ. ಅಲ್ಲದೆ ದಾನ ಮಾಡುವುದನ್ನು ಒಂದು ಶ್ರೇಷ್ಠ ಮೌಲ್ಯ ಎಂಬುದನ್ನು ಧಾರ್ಮಿಕವಾಗಿ

ನಂಬಿದ ಸಾಮಾನ್ಯ ವರ್ಗವೂ ಕೂಡ ದಾನ ನೀಡುವುದಕ್ಕೆ ಮುಂದಾಗುತ್ತದೆ. ಹೀಗಾಗಿ ಪ್ರಜೆಗಳು ಖಡ್ಗ ಮತ್ತು ಲೇಖನಿಗಳ ಹಿಡಿತಕ್ಕೆ ಸಿಕ್ಕು ರಾಜನನ್ನೇ ಭೂಪತಿ ಎಂದು ಭಾವಿಸುತ್ತಾರೆ. ರಾಜ ಮತ್ತು ಪ್ರಜೆಗಳ ಮಧ್ಯೆ ಇರುವ ಪುರೋಹಿತಶಾಹಿ ವರ್ಗವು ಎರಡೂ ಕಡೆಯಿಂದಲೂ ಸೌಲಭ್ಯವನ್ನು ಪಡೆದು ಐಷಾರಾಮಿ ಜೀವನ ನಡೆಸುತ್ತದೆ ಎನ್ನುವ ಅಂಶಗಳು ಮೇಲಿನ ಶಾಸನಗಳನ್ನು ಅವಲೋಕಿಸಿದಾಗ ಕಾಣಸಿಗುತ್ತವೆ.

ಕೆಲವು ಸಂದರ್ಭಗಳಲ್ಲಿ ಪುರೋಹಿತಶಾಹಿ ವರ್ಗವೂ ಸಹಿತ ಲೋಕೋಪಯೋಗಿ ಕಾರ್ಯಗಳನ್ನು ಮಾಡಿರುವುದು ಕಂಡುಬರುತ್ತದೆ. ಮೇಲ್ನೋಟಕ್ಕೆ ಅದು ಸಾಮಾಜಿಕ ಸೇವಾ ಕಾರ್ಯ ಎಂದು ಕಂಡರೂ, ಆ ಕಾರ್ಯನಿರ್ವಹಣೆಯ ಹಿಂದೆ ಇರುವ ಧೋರಣೆ ಯಾವ ಸ್ವರೂಪದ್ದೆಂಬುದನ್ನು ಅರಿತುಕೊಳ್ಳಬೇಕು. ಅವು ತಾವು ರೂಪಿಸಿದ ಮೌಲ್ಯಗಳನ್ನು ಕಾಯ್ದುಕೊಳ್ಳಲು, ತಮ್ಮ ಹಿತಾಸಕ್ತಿಗೆ ದಕ್ಕೆಯಾಗದಂತೆ ನೋಡಿಕೊಳ್ಳಲು ಇಂತಹ ವ್ಯವಸ್ಥಿತವಾದ ಹುನ್ನಾರವನ್ನು ಹೆಣೆದಿರುತ್ತವೆ.

ಇನ್ನು ವಿವೇಚಿಸಬೇಕಾದುದು ಜೀವಪರವಾದ ಕಾಳಜಿಯ ಕುರಿತು, ಗೋವುಗಳನ್ನು ರಕ್ಷಿಸುವ ಸಲುವಾಗಿ ಮನುಷ್ಯನು ಪ್ರಾಣ ಕಳೆದುಕೊಂಡರೂ ಚಿಂತೆಯಿಲ್ಲ ಎನ್ನುವುದು. ಗೋರಕ್ಷಣೆಗಾಗಿ ಹೋರಾಡಿ ಪ್ರಾಣ ಕಳೆದುಕೊಂಡವರು ಸ್ವರ್ಗಕ್ಕೆ ಸೇರುತ್ತಾರೆ ಎಂದು ನಂಬಿಸಿ, ಹೋರಾಟಕ್ಕೆ ಅಣಿಗೊಳಿಸುತ್ತಾರೆ. ಈ ರೀತಿ ಹೋರಾಡಿ ಸತ್ತವರು ಸ್ವರ್ಗದಲ್ಲಿ ಸುಖ ಕಾಣುತ್ತಾರೆ, ಅಲ್ಲಿ ಅವರು ಇಂದ್ರನ ವೈಭೋಗದಲ್ಲಿ ರಂಭೆ, ಊರ್ವಶಿಯರೊಂದಿಗೆ ಕಾಲ ಕಳೆಯುತ್ತಾರೆ. ಆದರೆ ತಾವು ಮಾತ್ರ ಬದುಕಿರುವಾಗಲೇ ಈ ಎಲ್ಲ ಸುಖಗಳನ್ನು ಅನುಭೋಗಿಸುತ್ತಾರೆ.

ಈ ಮೇಲಿನ ಅಂಶಗಳನ್ನು ಗಮನಿಸಿದಾಗ ಏಕೆ ಪೌರಾಣೀಕರಿಸಲಾಗುತ್ತದೆ ಎನ್ನುವುದು ಗೋಚರಿಸುತ್ತದೆ. ಅದು ರಾಜಪ್ರಭುತ್ವದ ಕಾಲ. ಅಲ್ಲಿ ಗೆದ್ದವನೇ ರಾಜ. ಹಾಗಾಗಿ ಈ ಗೆಲುವು ಎನ್ನುವುದು ಪ್ರಮುಖ ಪಾತ್ರವಹಿಸುತ್ತಿತ್ತು. ಈ ಗೆಲುವನ್ನು ಪಡೆದುಕೊಳ್ಳುವುದು ಕೇವಲ ಒಬ್ಬ ರಾಜನಿಂದ ಮಾತ್ರ ಸಾಧ್ಯವಾಗುವಂತಹದಲ್ಲ. ಅದು ಸೈನಿಕರಿಗಿರುವ ರಾಜ್ಯಾಭಿಮಾನ, ರಾಜಾಭಿಮಾನಗಳು ಮುಖ್ಯವಾಗುತ್ತವೆ. ಹೀಗಾಗಿ ಸೈನಿಕರಲ್ಲಿ ಈ ಬಗ್ಗೆಯ ಅಭಿಮಾನವನ್ನು ಮೂಡಿಸುವಲ್ಲಿ ರಾಜಪ್ರಭುತ್ವವು ತಮ್ಮ ವಂಶವನ್ನು ಪೌರಾಣಿಕ ವ್ಯಕ್ತಿಗಳೊಂದಿಗೆ ಹೋಲಿಕೆ ಮಾಡಿಕೊಳ್ಳುವುದರ ಮೂಲಕ ತಾವು ಲೌಕಿಕ ದೇವರು ಎನ್ನುವ ಭಾವನೆ ಸೈನಿಕರಲ್ಲಿ ಮೂಡುವಂತೆ ನೋಡಿಕೊಳ್ಳುತ್ತಿದ್ದರು. ಇಂಥ ಸಂಗತಿಗಳಿಂದ ಪ್ರೇರೆಪಿತರಾದ ಸೈನಿಕರು ದೇವರಲ್ಲಿ ಭಕ್ತಿ ಭಾವನೆಯನ್ನಿಡುವಂತೆ ರಾಜರಲ್ಲಿ ಭಕ್ತಿಯನ್ನಿಟ್ಟು ತಮ್ಮ ಜೀವನವನ್ನೇ ಅವರಿಗೆ ಮುಡುಪಾಗಿಡುತ್ತಿದ್ದರು. ಇದೇ ಆ ಕಾಲದ ಮೌಲ್ಯ ಎನ್ನುವಂತಿತ್ತು. ಇದಕ್ಕೆ ಬಹು ಮುಖ್ಯವಾದ ಪ್ರೇರಣೆ ಎಂದರೆ ಧರ್ಮ.

ಧರ್ಮ ಮತ್ತು ರಾಜ ಧರ್ಮಗಳು ಕೊಡುಕೊಳ್ಳುವಿಕೆಯ ಸಂಬಂಧವಿದೆ ಎನ್ನುವುದು ಮೇಲಿನ ದಾಖಲೆಗಳಿಂದ ತಿಳಿದುಬರುತ್ತದೆ.

**ಅಡಿ ಟಿಪ್ಪಣಿಗಳು**

೧ ಶಾಸನ ಸಂಗ್ರಹ, ಎ.ಎಂ. ಅಣ್ಣಿಗೇರಿ, ಆರ್. ಶೇಷಶಾಸ್ತ್ರಿ, ಪು. ೧೨೫.

೨. ಕನ್ನಡ ಶಾಸನಗಳಲ್ಲಿ ಇತಿಹಾಸ ಮತ್ತು ಪುರಾಣ ಪ್ರಜ್ಞೆ ಆರ್. ಶೇಷಶಾಸ್ತ್ರಿ ಕನ್ನಡ ಸಾಹಿತ್ಯದಲ್ಲಿ ಚರಿತ್ರೆ ಮತ್ತು ಪುರಾಣ ಸಂ. ಬರಗೂರು ರಾಮಚಂದ್ರಪ್ಪ ಪುಟ ೨೧-೨೩

೩. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨ ಕೊಪ್ಪಳ ಜಿಲ್ಲೆ ಯಲಬುರ್ಗಾ ಶಾಸನ ಸಂಖ್ಯೆ ೬೭ ಸಂ. ದೇವರಕೊಂಡರೆಡ್ಡಿ, ಕೆ.ಜಿ.ಭಟಸೂರಿ, ಮನ್ವಚಾರ್, ಪರಮಶಿಮೂರ್ತಿ.

೪. ಎ.ಕ. ಶಾಸನ ಸಂಖ್ಯೆ-೧೦ ದಾವಣಗೆರೆ ೪೩ ಹರಿಹರ.

೫. ಕ.ಇ.ವಿ. ೩೦, ಹಳ್ಳೂರು ಹಿರೇಕೇರೂರು, ಕನ್ನಡ ಸಂಶೋಧನಾ ಸಂಸ್ಥೆ ಧಾರವಾಡ.

೬. ಕ.ಇ.ಶಾಸನಸಂಖ್ಯೆ ೭೫೦ ಆಡೂರು, ಹಾನಗಲ್ಲು (ತಾ), ಧಾರವಾಡ (ಜಿ) ಕ.ಸಂ. ಧಾರವಾಡ.

೭. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩ ಹಂಪಿ ಶಾಸನಗಳು ಶಾಸನ ಸಂಖ್ಯೆ-೩೪. ಸಂ.ದೇವರಕೊಂಡಾರೆಡ್ಡಿ, ಭಟ್‌ಸೂರಿ, ಕಲವೀರ ಮನ್ವಚಾರ್, ಪರಮಶಿವಮೂರ್ತಿ.

೮. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪುಟ ೩೨೩, ಎಂ. ಚಿದಾನಂದಮೂರ್ತಿ ಸ್ವಪ್ನ ಬುಕ್ ಹೌಸ್, ಬೆಂಗಳೂರು.

೯. ಶಾಸನ ಸಂಗ್ರಹ ಸಂ. ಎ.ಎಂ. ಅಣಿಗೇರಿ, ಆರ್. ಶೇಷಶಾಸ್ತ್ರಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೦. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೮ ಬೀದರ್ ಜಿಲ್ಲೆ, ಬೀದರ್ ತಾಲ್ಲೂಕು ಶಾಸನ ಸಂಖ್ಯೆ-೫೯ ಸಂ.ದೇವರಕೊಂಡಾರೆಡ್ಡಿ, ಭಟ್‌ಸೂರಿ, ಕಲವೀರ ಮನ್ವಚಾರ್, ಪರಮಶಿವಮೂರ್ತಿ.

೧೧. ಅದೇ ಶಾಸನ ಸಂಖ್ಯೆ – ೬೩.

೧೨. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ-೧, ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ (ತಾ), ಶಾಸನ ಸಂಖ್ಯೆ-೨ ಸಂ.ದೇವರಕೊಂಡಾರೆಡ್ಡಿ, ಭಟ್‌ಸೂರಿ, ಕಲವೀರ ಮನ್ವಚಾರ್, ಪರಮಶಿವಮೂರ್ತಿ.

೧೩. ಕನ್ನಡ ಶಾಸನ ಸಂಪದ ಶಾಸನ ಸಂಖ್ಯೆ ೩೦, (ಸಂ) ಆರ್.ಸಿ. ಹಿರೇಮಠ, ಎಂ.ಎಂ. ಕಲ್ಬುರ್ಗಿ, ಪ್ರಸರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೪. ಕಲ್ಬುರ್ಗಿ ಜಿಲ್ಲೆಯ ಶಾಸನಗಳು, ಹನುಮಾಕ್ಷಿಗೋಗಿ, ಶಿವಚಂದ್ರ ಪ್ರಕಾಶನ ಹುಬ್ಬಳ್ಳಿ, ಶಾಸನ ಸಂಖ್ಯೆ-೪೦, ಗುಲ್ಬರ್ಗಾ (ತಾ).

೧೫. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೭, ಸಿಂದನೂರು ತಾಲೂಕು ಶಾಸನ ಸಂಖ್ಯೆ ೮ ಸಂ.ದೇವರಕೊಂಡಾರೆಡ್ಡಿ, ಭಟ್‌ಸೂರಿ, ಕಲವೀರ ಮನ್ವಚಾರ್, ಪರಮಶಿವಮೂರ್ತಿ.

೧೬. ಕಲ್ಬುರ್ಗಿಯ ಜಿಲ್ಲೆಯ ಶಾಸನಗಳು ಚಿತ್ತಾಪುರ ತಾಲ್ಲೂಕು ಶಾಸನಸಂಖ್ಯೆ–೧೭, ಸಂ. ಹನುಮಾಕ್ಷಿಗೋಗಿ, ಶಿವಚಂದ್ರ ಪ್ರಕಾಸನ ಹುಬ್ಬಳ್ಳಿ.

೧೭. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೨, ಕೊಪ್ಪಳ ಜಿಲ್ಲೆ ಗಂಗಾವತಿ ತಾಲ್ಲೂಕು, ಶಾಸನ ಸಂಖ್ಯೆ–೨, ಸಂ. ದೇವರಕೊಂಡಾರೆಡ್ಡಿ, ಭಟ್‌ಸೂರಿ, ಕಲವೀರ ಮನ್ವಚಾರ್, ಪರಮಶಿವಮೂರ್ತಿ.

೧೮. ಹೊಸತು–ಹೊಸತು ಎಂ. ಚಿದಾನಂದಮೂರ್ತಿ ಪು–೩೩, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

೧೯. ಕಲ್ಬುರ್ಗಿ ಜಿಲ್ಲೆಯ ಶಾಸನಗಳು, ಚಿತ್ತಾಪುರ ತಾಲ್ಲೂಕು ಶಾಸನ ಸಂಖ್ಯೆ–೩೮, ಸಂ. ಹನುಮಾಕ್ಷಿಗೋಗಿ ಶಿವಚಂದ್ರ ಪ್ರಕಾಶನ ಹುಬ್ಬಳ್ಳಿ.

೨೦. ಎಸ್.ಐ.ಐ. ಸಂಪುಟ ೩೦–೧೯೮೮ ಪುಟ ೨೦೫.

೨೧. ಧಾರವಾಡ ತಾಲ್ಲೂಕಿನ ಶಾಸನಗಳು, ಕೊಟಬಾಗಿ ಶಾಸನಸಂಖ್ಯೆ ೧೭, ಎಂ.ಎಂ. ಕಲ್ಬುರ್ಗಿ ಕನ್ನಡ ಅಧ್ಯಯನಪೀಠ, ಧಾರವಾಡ.

೨೨. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೧೦, ಬಿಜಾಪುರ ಜಿಲ್ಲೆ (ತಾ), ಶಾಸನ ಸಂಖ್ಯೆ–೭೯, ಸಂ. ದೇವರಕೊಂಡಾರೆಡ್ಡಿ, ಭಟ್‌ಸೂರಿ, ಕಲವೀರ ಮನ್ವಚಾರ್, ಪರಮಶಿವಮೂರ್ತಿ.

೨೩. ಅದೇ ಶಾಸನ ಸಂಖ್ಯೆ ೮೩.

೨೪. ಅದೇ ಇಂಡಿ ತಾಲ್ಲೂಕು ಸಂಖಗ್ರಾಮ ಶಾಸನ ಸಂಖ್ಯೆ ೬೯.

೨೫. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೧, ಬಳ್ಳಾರಿ ಜಿಲ್ಲೆ, ಹಡಗಲಿ ಶಾಸನ ಸಂಖ್ಯೆ–೫೨, ಸಂ. ದೇವರಕೊಂಡಾರೆಡ್ಡಿ, ಭಟ್‌ಸೂರಿ, ಕಲವೀರ ಮನ್ವಚಾರ್, ಪರಮಶಿವಮೂರ್ತಿ.

೨೬. ಎಂ.ಎಂ. ಕಲ್ಬುರ್ಗಿ, ಮಾರ್ಗ ಸಂಪುಟ–೩, ಪುಟ–೩೪೧, ೪೨,

೨೭. ಜೈನ ಪರಂಪರೆಗೆ ಬೆಳಗಾವಿ ಪ್ರಾದೇಶಿಕ ಕೊಡುಗೆ, ಪ್ರಕಟಿತ (ಪಿಹೆಚ್‌ಡಿ ಪ್ರಬಂಧ) ಪುಟ–೧೮, ಡಾ!! ಬಿ.ಆರ್. ಹಂದೂರ.

೨೮. ಎಸ್.ಐ.ಐ. ಸಂಪುಟ–೨೦.

೨೯. ಅದೇ.

೩೦. ಕನ್ನಡ ಶಾಸನಗಳಲ್ಲಿ ಇತಿಹಾಸ ಮತ್ತು ಪುರಾಣ ಪ್ರಜ್ಞೆ (ಕನ್ನಡ ಸಾಹಿತ್ಯದಲ್ಲಿ ಚರಿತ್ರೆ ಮತ್ತು ಪುರಾಣ, ಸಂ. ಬರಗೂರು ರಾಮಚಂದ್ರಪ್ಪ) ಪುಟ–೩೯, ಆರ್. ಶೇಷಶಾಸ್ತ್ರ.

೩೧. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೨, ಕೊಪ್ಪಳ ಜಿಲ್ಲೆ, ಯಲಬುರ್ಗ ಶಾಸನ ಸಂಖ್ಯೆ–೧೬, ಸಂ. ದೇವರಕೊಂಡಾರೆಡ್ಡಿ, ಭಟ್‌ಸೂರಿ, ಕಲವೀರ ಮನ್ವಚಾರ್, ಪರಮಶಿವಮೂರ್ತಿ.

೩೨. ಶಾಸನ ಸಾಹಿತ್ಯ ಸಂಚಯ, ಎ.ಎಂ. ಅಣ್ಣಿಗೇರಿ, ಮೇವುಂಡಿ ಮಲ್ಲಾರಿ ಪುಟ–ಸಂ. ೨೯, ಕನ್ನಡ ಸಂಶೋಧನಾ ಸಂಸ್ಥೆ ಧಾರವಾಡ.

೩೩. ಅದೇ ಪುಟ–೩೪.

೩೪. ಅದೇ ಪುಟ–೪೦, ೪೧.

೩೫. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೧, ಬಳ್ಳಾರಿ ಜಿಲ್ಲೆ, ಹಡಗಲಿ ಶಾಸನ ಸಂಖ್ಯೆ–೫೫, ಸಂ. ದೇವರಕೊಂಡಾರೆಡ್ಡಿ, ಭಟ್‌ಸೂರಿ, ಕಲವೀರ ಮನ್ವಚಾರ್, ಪರಮಶಿವಮೂರ್ತಿ.

೩೬. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೩, ಹಂಪಿ ಶಾಸನಗಳು, ಶಾಸನ ಸಂಖ್ಯೆ–೬೯, ಸಂ. ದೇವರಕೊಂಡಾರೆಡ್ಡಿ, ಭಟ್‌ಸೂರಿ, ಕಲವೀರ ಮನ್ವಚಾರ್, ಪರಮಶಿವಮೂರ್ತಿ.

೩೭. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಎಂ. ಚಿದಾನಂದಮೂರ್ತಿ, ಪುಟ ಸಂಖ್ಯೆ–೩೩೦, ಸ್ವಪ್ನ ಬುಕ್‌ಹೌಸ್, ಬೆಂಗಳೂರು.

೩೮. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೨, ಕೊಪ್ಪಳ ಜಿಲ್ಲೆ, ಕೊಪ್ಪಳ ಶಾಸನ ಸಂಖ್ಯೆ–೯೪, ಸಂ. ದೇವರಕೊಂಡಾರೆಡ್ಡಿ, ಭಟ್‌ಸೂರಿ, ಕಲವೀರ ಮನ್ವಚಾರ್, ಪರಮಶಿವಮೂರ್ತಿ.

೩೯. ಶೇಷಶಾಸ್ತ್ರೀ ಆರ್., ಕರ್ನಾಟಕದ ವೀರಗಲ್ಲುಗಳು, ಪುಟ ೩೦.

೪೦. ನಂಜುಂಡ., ರಾಮನಾಥ ಚರಿತೆ, ಭಾಗ–೩, ಆ–೯, ಸಂ–೧–೧೦೩.

೪೧. ಶೇಷಶಾಸ್ತ್ರೀ ಆರ್., ಕರ್ನಾಟಕದ ವೀರಗಲ್ಲುಗಳು, ಪುಟ ೯೨.

೪೨. ಶೇಷಶಾಸ್ತ್ರೀ ಆರ್., ಕರ್ನಾಟಕದ ವೀರಗಲ್ಲುಗಳು, ಪುಟ ೧೧೨.

೪೩. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೧, ಬಳ್ಳಾರಿ ಜಿಲ್ಲೆ, ಹರಪನಹಳ್ಳಿ ಶಾಸನ ಸಂಖ್ಯೆ–೨೧೧, ಸಂ. ದೇವರಕೊಂಡಾರೆಡ್ಡಿ, ಭಟ್‌ಸೂರಿ, ಕಲವೀರ ಮನ್ವಚಾರ್, ಪರಮಶಿವಮೂರ್ತಿ

೪೪. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೧, ಬಳ್ಳಾರಿ ಜಿಲ್ಲೆ, ಹರಪನಹಳ್ಳಿ ಶಾಸನ ಸಂಖ್ಯೆ–೧೪೬, ಸಂ. ದೇವರಕೊಂಡಾರೆಡ್ಡಿ, ಭಟ್‌ಸೂರಿ, ಕಲವೀರ ಮನ್ವಚಾರ್, ಪರಮಶಿವಮೂರ್ತಿ

೪೫. ಕನ್ನಡ ಶಾಸನಗಳಲ್ಲಿ ಇತಿಹಾಸ ಮತ್ತು ಪುರಾಣ ಪ್ರಜ್ಞೆ, ಆರ್. ಶೇಷಶಾಸ್ತ್ರಿ (ಕನ್ನಡ ಸಾಹಿತ್ಯದಲ್ಲಿ ಚರಿತ್ರೆ ಮತ್ತು ಪುರಾಣ) ಸಂ. ಬರಗೂರು ರಾಮಚಂದ್ರಪ್ಪ ಪು. ೬೫.

೪೬. ಅದೇ.

೪೭. ಶಾಸನ ಸಾಹಿತ್ಯ ಸಂಚಯ ಶಾಸನ ಸಂಖ್ಯೆ–೧೩, ಪುಟ–೧೯, ೨೦, ಸಂ. ಎ.ಎಂ. ಅಣ್ಣಿಗೇರಿ ಮೇವುಂಡಿ ಮಲ್ಲಾರಿ. ಕನ್ನಡ ಸಂಶೋಧನಾ ಸಂಸ್ಥೆ ಧಾರವಾಡ.

೪೮. ಪ್ರಪಂಚ ವಾರ ಪತ್ರಿಕೆ ೮-೯-೮೬, ಸಂಚಿಕೆ ರಾಧ ಚಿಕ್ಕಣ್ಣವರ ಲೇಖನ.

೪೯. ಸಂಸ್ಕೃತಿ ಅಧ್ಯಯನ, ಚೆನ್ನಕ್ಕ ಪಾವಟೆ, ಚನ್ನಗಂಗಾ ಪ್ರಕಾಶನ ೨೦೦೫ ಧಾರವಾಡ ಪುಟ ೬೭.

೫೦. ಅದೇ ಪುಟ ೬೮.

೫೧. ಕೆ.ಆರ್. ಸಂಪುಟ-೧, ಸವದತ್ತಿ ತಾಲ್ಲೂಕು ಶಿರಸಂಗಿ, ಶಾಸನ ಸಂಖ್ಯೆ-೨೫, ಪುಟ-೪೧,೪೨, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೨. ಅದೇ

೫೩. ಅದೇ ಪುಟ-೩೮

೫೪. ಎಸ್.ಐ.ಐ. ಸಂಪುಟ-೨೦ ಶಾಸನ ಸಂಖ್ಯೆ-೨೪೮, ಪುಟ-೨೦೭.

೫೫. ಅದೇ

೫೬. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧೦, ಬಿಜಾಪುರ ಜಿಲ್ಲೆ, ಇಂಡಿ ತಾಲ್ಲೂಕು ಶಾಸನ ಸಂಖ್ಯೆ-೭೨, ಸಂ. ದೇವರಕೊಂಡಾರೆಡ್ಡಿ, ಭಟ್‌ಸೂರಿ, ಕಲವೀರ ಮನ್ವಚಾರ್, ಪರಮಶಿವಮೂರ್ತಿ.

೫೭. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨, ಕೊಪ್ಪಳ ಜಿಲ್ಲೆ ಯಲಬುರ್ಗಾ ತಾಲ್ಲೂಕು, ಶಾಸನ ಸಂಖ್ಯೆ-೫೨, ಸಂ. ದೇವರಕೊಂಡಾರೆಡ್ಡಿ, ಭಟ್‌ಸೂರಿ, ಕಲವೀರ ಮನ್ವಚಾರ್, ಪರಮಶಿವಮೂರ್ತಿ.

೫೮. ಶಾಸನ ಸಾಹಿತ್ಯ ಪರಿಚಯ ಪುಟ-೪೪, ಮೇವುಂಡಿ ಮಲ್ಲಾರಿ, ಎ.ಎಂ. ಅಣ್ಣಿಗೇರಿ, ಕನ್ನಡ ಸಂಶೋಧನಾ ಸಂಸ್ಥೆ, ಧಾರವಾಡ.

೫೯. ಅದೇ ಪುಟ-೮೭, ೮೮.

೬೦. ಅದೇ.

೬೧. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩, ಹಂಪಿ ಶಾಸನಗಳು ಶಾಸನ ಸಂಖ್ಯೆ-೫೫, ಸಂ. ದೇವರಕೊಂಡಾರೆಡ್ಡಿ, ಭಟ್‌ಸೂರಿ, ಕಲವೀರ ಮನ್ವಚಾರ್, ಪರಮಶಿವಮೂರ್ತಿ.

೬೨. ಅದೇ ಶಾಸನ ಸಂಖ್ಯೆ ೫೫

೬೩. ಅದೇ.

೬೪. ಎಂ.ಎಂ. ಕಲ್ಬುರ್ಗಿ, ಮಾರ್ಗ ಸಂಪುಟ-೩, ಪುಟ-೩೪೧, ೪೨,

## ಅಧ್ಯಾಯ ಐದು

# ಐತಿಹ್ಯ – ಮತ್ತು ಕನ್ನಡ ಶಾಸನಗಳು

೧. ದೈವ ಪ್ರಧಾನ ಐತಿಹ್ಯಗಳು

೨. ಸ್ಥಳ ಪ್ರಧಾನ ಐತಿಹ್ಯಗಳು

೩. ವ್ಯಕ್ತಿ ಪ್ರಧಾನ ಐತಿಹ್ಯಗಳು

## ಅಧ್ಯಾಯ ಐದು

# ಐತಿಹ್ಯ – ಮತ್ತು ಕನ್ನಡ ಶಾಸನಗಳು

ಇತಿಹಾಸವನ್ನು ಕಟ್ಟುವ ಸಂದರ್ಭದಲ್ಲಿ ಹಲವಾರು ಆಕರ ಪರಿಕರಗಳನ್ನು ಆಧಾರವನ್ನಾಗಿಸಿಕೊಳ್ಳಬೇಕಾಗುತ್ತದೆ. ಕೆಲವು ಸಲ ಇಂತಹ ಆಕರಗಳು ಸರಿಯಾದ ತರ್ಕಕ್ಕೆ, ಭಾಷ್ಯಗೆ ನಿಲುಕದೇ ಹೋಗಬಹುದು. ಆದರೂ ಕೂಡ ಅವುಗಳನ್ನು ಇನ್ನಿತರ ಪರಿಕರಗಳ ಜೊತೆಗೆ ಸಮೀಕರಿಸಿ ಅಧ್ಯಯನ ಮಾಡಬೇಕಾಗುತ್ತದೆ. ಹೀಗೆ ಮಾಡಿದಾಗ ಸತ್ಯವೇ ಅನಾವರಣಗೊಳ್ಳುತ್ತದೆ ಎಂಬ ಅರ್ಥವೇನೂ ಇಲ್ಲ. ಆದರೆ ಸತ್ಯದ ಸಮೀಪದ ದಾರಿಯನ್ನು ಕಂಡುಕೊಳ್ಳಬಹುದಾಗಿದೆ. ಹೀಗಾಗಿ ಇತಿಹಾಸದ ಶೋಧನೆಯ ಸಂದರ್ಭದಲ್ಲಿ ಕೇವಲ ದೃಢೀಕೃತ ಆಕರಗಳನ್ನು ಮಾತ್ರವಲ್ಲ ಇನ್ನಿತರ ಪರಿಕರಗಳ ವಿಶ್ಲೇಷಣೆ ಕೂಡ ನಡೆಯುತ್ತದೆ. ಈ ಕಾರಣದಿಂದಲೇ ಇತಿಹಾಸಕ್ಕೆ ಪೂರಕವಾದ ಶಾಸನಗಳನ್ನು ಮುಂದಿಟ್ಟುಕೊಂಡು ಅಧ್ಯಯನ ನಡೆಸುವ ಇತಿಹಾಸಕಾರರೂ ಅಧ್ಯಯನಕಾರರೂ ಕೂಡ ಆಯಾ ಪರಿಸರ ಅಥವಾ ಪರಿಕ್ರಮಗಳಿಗೆ ಅನುಗುಣವಾಗಿ ಮೂಡಿ ನಿಂತಿರುವ ಪುರಾಣ ಪುಣ್ಯಕಥೆ, ಕಟ್ಟು ಕಥೆ, ಜನಮಾನಸದಲ್ಲಿ ನೆಲೆ ನಿಂತಿರುವ ನಂಬಿಕೆಗಳು, ಐತಿಹ್ಯಗಳು, ಸಾಂದರ್ಭಿಕ ಕಡತ, ನಿರೂಪ, ಬಿನ್ನವತ್ತಳೆ, ದಿನಚರಿ, ಕೈಫಿಯತ್ತು, ಬಖೈರುನಾಮೆ, ಸ್ಥಳ ಪುರಾಣ ಮೊದಲಾದವುಗಳನ್ನು ಗಮನಿಕೆಯಲ್ಲಿ ಇಟ್ಟಿರುತ್ತಾರೆ. ಇವೆಲ್ಲವುಗಳ ಅಧ್ಯಯನದಿಂದ ನಿಷ್ಪನ್ನವಾಗುವ ವಸ್ತು–ವಿಷಯವನ್ನು ಪರಾಮರ್ಶನಕ್ಕೆ ಒಳಪಡಿಸಿ ಸಮೀಪ ನಿಖರತೆಯ ಪ್ರಮೇಯವನ್ನು ಸೃಷ್ಟಿಸುತ್ತಾರೆ.

ಈ ವಿಷಯವನ್ನು ಮತ್ತಷ್ಟು ಸ್ಪಷ್ಟಪಡಿಸಬೇಕೆಂದರೆ ಮೊದಲು ಪುರಾಣ, ಐತಿಹ್ಯಗಳ ಮೂಲಾರ್ಥವನ್ನು ಗ್ರಹಿಸಬೇಕಾಗುತ್ತದೆ. ಯಾಕೆಂದರೆ ಪುರಾಣ ಪುಣ್ಯಕಥೆಗಳು ಮತ್ತು ಐತಿಹ್ಯಗಳಲ್ಲಿ ಹೇಳಿಕೊಳ್ಳುವಂತಹ ವ್ಯತ್ಯಾಸಗಳೇನೂ ಕಂಡುಬರುವುದಿಲ್ಲ. ಅವರೆಡೂ ಒಂದೇ ನಾಣ್ಯದ ಎರಡು

ಮುಖಗಳಿದ್ದಂತೆ. ಸೂಕ್ಷ್ಮ ಗಮನಿಕೆಯಿಂದ ಮಾತ್ರ ಅವುಗಳಲ್ಲಿರುವ ಅಂತರಗಳನ್ನು ಕಂಡುಕೊಳ್ಳಬೇಕಾಗುತ್ತದೆ. ಅವು ಹೊರಹೊಮ್ಮಿಸುವ ವ್ಯಾಖ್ಯಾನಗಳನ್ನು ಮುಂದಿಟ್ಟುಕೊಂಡು ಮುಂದುವರಿಯಬೇಕಾಗುತ್ತದೆ. ಹೀಗಾಗಿ ಇಲ್ಲಿ ಪುರಾಣ ಕಲ್ಪನೆಯ ಉಕ್ತಿಯೊಂದಿಗೆ ಐತಿಹ್ಯಗಳ ಪರಂಪರೆಯನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

**ಐತಿಹ್ಯಗಳು :** ಮನುಷ್ಯನ ಕಲ್ಪನಾಶಕ್ತಿ ಅಗಾಧವಾದುದು. ಅದು ಸೃಷ್ಟಿಸುವ ಪ್ರಮೇಯಗಳಿಗೆ ಎಣೆಯೇ ಇಲ್ಲ. ಹಸಿ ಹಸಿಯಾಗಿದ್ದನ್ನು ತಿಂದು ಬದುಕು ನಡೆಸುತ್ತಿದ್ದ ಮನುಷ್ಯ ಯಾವಾಗ ಬೇಯಿಸಿಕೊಂಡು ತಿನ್ನುವುದನ್ನು ಕಲಿತುಕೊಂಡನೋ ಅಂದಿನಿಂದಲೇ ಮಾನವ ವಿಕಾಸ ಸಾಧ್ಯವಾಯಿತು ; ಮನುಷ್ಯನ ವಿಚಾರಶಕ್ತಿಯ ವಿಕಾಸ ಆರಂಭಗೊಂಡಿತು. ವಿಚಾರಶಕ್ತಿಯ ವಿಕಾಸದೊಂದಿಗೆ ಕಲ್ಪನಾ ಸಾಮ್ರಾಜ್ಯವೂ ಬೆಳೆಯಿತು. ಯಾವಾಗ ಕಲ್ಪನೆಗಳು ಆರಂಭಗೊಂಡವೋ ಆಗ ಮನುಷ್ಯನಲ್ಲಿ ಸ್ವಾರ್ಥ, ಪ್ರಲೋಭನೆ, ವಿಕ್ಷಿಪ್ತತೆ, ಸಂಕೋಚಿತತೆ ಮತ್ತು ಭಯಗಳೂ ಹುಟ್ಟಿಕೊಂಡವು. ಈ ಕಾರಣದಿಂದಲೇ ಮನುಷ್ಯನ ಬದುಕು ಬಹಳಷ್ಟು ಬದಲಾವಣೆಯನ್ನು ಕಂಡುಕೊಂಡಿತು. ಈ ಬದಲಾವಣೆಗೆ ಪೂರಕವಾಗಿ ಅಥವಾ ತನ್ನ ಮನಃಸ್ಥಿತಿಯನ್ನು ಹತೋಟಿಗೆ ತಂದುಕೊಳ್ಳಲು ಮನುಷ್ಯ ಹಲವಾರು ಕತೆಗಳನ್ನು ಸೃಜಿಸಿಕೊಂಡ. ಬದುಕುವ ಆಸೆ ಮತ್ತು ಬದುಕನ್ನು ಸುಂದರಗೊಳಿಸುವ ಉದ್ದೇಶಗಳೇ ಮನುಷ್ಯನ ಕಲ್ಪನಾಶಕ್ತಿಗೆ ಹೆಚ್ಚು ಪ್ರೇರಕಶಕ್ತಿಯಾಗಿ ಪರಿಣಮಿಸಿತು. ಹೀಗಾಗಿ ಹೊಸ ಹೊಸ ವ್ಯಾಖ್ಯಾನಗಳೊಂದಿಗೆ ಮನುಷ್ಯ ಬದುಕನ್ನು ಕಟ್ಟಿಕೊಳ್ಳುವ ಉಮೇದಿಗೆ ಬಿದ್ದ ಎನ್ನುವುದು ಮಾನವಶಾಸ್ತ್ರೀಯ ಅಧ್ಯಯನವೂ ಹೇಳುತ್ತದೆ. ತನ್ನ ಸುತ್ತಲಿನ ಪರಿಸರದ ಬಗ್ಗೆ ಅತೀವವಾದ ಗರಿಮೆಯನ್ನು ಹೇಳಿಕೊಳ್ಳಲು ಕೂಡ ಐತಿಹ್ಯಗಳನ್ನು ಪಸರಿಸುವ ಕಾರ್ಯ ನಡೆಯುತ್ತದೆ ಎಂಬುದನ್ನು ನಾವು ಮರೆಯುವಂತಿಲ್ಲ.

ಇಂತಹ ಬದಲಾವಣೆಗಳು ತನ್ನ ಇತಿಹಾಸವನ್ನು ಕಟ್ಟಿಕೊಳ್ಳಲು ಮಾನವನಿಗೆ ಪ್ರೇರಕವಾದವು. ಮೌಖಿಕ ಪರಂಪರೆಯಲ್ಲಿ ಕಂಡುಬರುವ ಇಂತಹ ಬದಲಾವಣೆಗಳಿಗೆ ಪೂರಕವಾದ ಕಲ್ಪನಾತ್ಮಕತೆ ಹೊಸದನ್ನು ಸೃಜಿಸುವ ಅಥವಾ ಯಾವುದೋ ಅಗೋಚರವಾದುದಕ್ಕೆ ತೆರೆದುಕೊಳ್ಳುವುದಕ್ಕೆ ಕಾರಣವಾಯಿತು. ಸಾಂದರ್ಭಿಕ ಅವಘಡಗಳನ್ನು ಮುಂದಿಟ್ಟುಕೊಂಡು ಬದುಕನ್ನು ಕಟ್ಟಿಕೊಳ್ಳುವ ಮತ್ತು ಸುಂದರಗೊಳಿಸುವ ಪರಿಕಲ್ಪನೆ ಮನುಷ್ಯನಲ್ಲಿ ಹುಟ್ಟಿಕೊಂಡಿತು. ಹೀಗಾಗಿಯೇ ಕೆಲವು ಭಯಭಕ್ತಿಗಳ ಅಭಿವ್ಯಕ್ತಿಗೆ ಆತ ವಿಕ್ಷಿಪ್ತವಾದ ಕತೆಗಳನ್ನು ಕಟ್ಟಿಕೊಂಡ. ಕಾಲಕ್ರಮೇಣ ಅವುಗಳನ್ನು ಪರಿಷ್ಕರಿಸುತ್ತಲೂ ಬಂದ. ಇದೇ ಕಾರಣದಿಂದಲೇ ಐತಿಹ್ಯಗಳ ಸೃಷ್ಟಿ ಕೂಡ ಆಯಿತು ಎಂದರೆ ತಪ್ಪಾಗುವುದಿಲ್ಲ. ಹೀಗಾಗಿ ಒಂದು ಕಡೆ ಇರುವ ಐತಿಹ್ಯ ಮತ್ತೊಂದು ಕಡೆಯೂ ಇರಬಹುದು. ಅವು ಒಂದೇ ವಿಷಯವನ್ನು ಹೇಳುತ್ತಿದ್ದರೂ ಅವುಗಳಲ್ಲಿ ಕೆಲವು ಮಾರ್ಪಾಟುಗಳೂ ಕಾಣಿಸಿಕೊಳ್ಳಬಹುದು.

'ಐತಿಹ್ಯವೆಂದರೆ ಮೌಖಿಕ ಸಂಪ್ರದಾಯದಲ್ಲಿ ಉಳಿದುಕೊಂಡು ಬಂದಿರುವ, ಹಿಂದೆ ವಾಸ್ತವವಾಗಿ ನಡೆದದ್ದೇ ಎಂಬುದಾಗಿ ಅದರ ಪ್ರಸಾರಕರಿಗೆ ವಿಶ್ವಾಸವಿರುವ ಘಟನೆಗಳ ಗದ್ಯರೂಪದ ನಿರೂಪಣೆ. ಒಂದು ದೃಷ್ಟಿಯಿಂದ ಇದು ಜನಪದರ ಇತಿಹಾಸ. ಇಲ್ಲಿ ಲಿಖಿತ ದಾಖಲೆಗಳೇನೂ ಇರುವುದಿಲ್ಲ'[೧] ಎಂಬುದು ಇತ್ತೀಚಿನ ಮಾತಾಯಿತು. ಕೆಲವು ಕಡೆ ಲಿಖಿತ ದಾಖಲೆಗಳು ದೊರೆತಿದ್ದರೂ ಕೂಡ ಅವು ನಂಬಲರ್ಹವಲ್ಲದ ದಾಖಲೆಗಳಾಗಿವೆ. ಐತಿಹ್ಯಗಳು ಇತಿಹಾಸದ ಭಾಗವೇ ಆಗಿವೆ ಎನ್ನುವುದು ಸೂಕ್ತವೆನಿಸುವುದಿಲ್ಲ. ಆದರೆ ಇತಿಹಾಸವನ್ನು ನಿರ್ಮಿಸುವಲ್ಲಿ ಅವುಗಳನ್ನೂ ಹಿಂಜಬೇಕಾಗುತ್ತದೆ.

'ಜರ್ಮನ್ ಭಾಷೆಯಲ್ಲಿ 'ಸಾಗೆ' (Segen) ಎಂದೂ ಆಂಗ್ಲ ಭಾಷೆಯಲ್ಲಿ ಲೆಜೆಂಡ್ (Legend) ಎಂದೂ ಬಳಕೆಯಲ್ಲಿರುವ ಪದಕ್ಕೆ ನಮ್ಮಲ್ಲಿರುವ ಸಂವಾದಿ ಪದವೇ ಐತಿಹ್ಯ'[೨] ಎಂದು ಹೇಳಲಾಗುತ್ತದೆ. ಬಾಸ್ಸ್, ಸ್ಟಿಥ್ ಥಾಂಪ್ಸನ್ ಆದಿಯಾಗಿ ಕನ್ನಡದ ಪುರುಷೋತ್ತಮ ಬಿಳಿಮಲೆ, ದೇ. ಜವರೇಗೌಡ, ಶಿವರಾಮ ಕಾರಂತ, ಎಂ.ಜೆ. ಈಶ್ವರಪ್ಪ, ತಾಳ್ತಜೆ ವಸಂತಕುಮಾರ, ಮಚ್ಚಿಮಲೆ ಶಂಕರನಾರಾಯಣರಾವ್, ಆರ್.ಎಸ್. ನಾವೂರಕರ್, ಸೇಡಿಯಾಪು ಕೃಷ್ಣಭಟ್ಟ ಮೊದಲಾದವರು ಐತಿಹ್ಯದ ಬಗ್ಗೆ ವಿವರಣೆಗಳನ್ನು ನೀಡಿದ್ದಾರೆ. ಜೊತೆಗೆ ಹಲವಾರು ಶಬ್ದಕೋಶಗಳು ಮತ್ತು ನಿಘಂಟುಗಳಲ್ಲಿಯೂ ಈ ಕುರಿತಾದ ವಿವರಣೆ ಕಾಣಿಸಿಕೊಳ್ಳುತ್ತದೆ.

'ಜಾನಪದ ನೆಲೆಗಟ್ಟಿನಲ್ಲಿ ಐತಿಹ್ಯವೂ ಕಥೆಯ ಸ್ಥಾನವನ್ನು ಪಡೆದುಕೊಳ್ಳುತ್ತದೆ. ಏಕೆಂದರೆ ಐತಿಹ್ಯವು ಇತಿಹಾಸದಿಂದ ಬಹುದೂರ ಸಾಗಿರುತ್ತದೆ. ಹಾಗೆಂದು ಅದು ಪೂರ್ತಿ ಕಲ್ಪಿತ ದಂತಕಥೆಯೂ ಅಲ್ಲ. ಎಲ್ಲೋ, ಯಾವಾಗಲೋ ಘಟಿಸಿದ ಒಂದು ಘಟನೆ ಅಥವಾ ಒಂದು ಸ್ಥಳದ ವೈಶಿಷ್ಟ್ಯ ಅಥವಾ ವ್ಯಕ್ತಿಯೊಬ್ಬನ ಸಾಧನೆಯು ಆ ಪರಿಸರದ ವ್ಯಕ್ತಿಗಳ ಮೇಲೆ ಪ್ರಭಾವ ಬೀರಿರುತ್ತದೆ. ಈ ಪ್ರಭಾವವೇ ಪರಿಣಾಮವಾಗಿ ಅವರಲ್ಲೊಬ್ಬ ಪ್ರತಿಭಾಶಾಲಿ ಆ ನಿರ್ದಿಷ್ಟ ಘಟನೆಗೆ ಅಥವಾ ಸ್ಥಳಕ್ಕೆ ಅಥವಾ ವ್ಯಕ್ತಿಗೆ ತನ್ನ ಕಲ್ಪನೆಯ ವೈಭವೀಕರಣದ ಅಂಶವನ್ನು ಸೇರಿಸಿ ಬಿಡುತ್ತಾನೆ. ಆ ಪರಿಷ್ಕೃತ ಅಂಶವನ್ನು ಹರಡುತ್ತಾನೆ. ಹೀಗೆ ಒಂದು ಘಟನೆಗೆ ಅಥವಾ ಸ್ಥಳಕ್ಕೆ ಅಥವಾ ವ್ಯಕ್ತಿಗೆ ಸಂಬಂಧಿಸಿದ ಐತಿಹ್ಯ ರೂಪು ತಾಳುತ್ತದೆ'[೩]

ಐತಿಹ್ಯವನ್ನು ಒಂದು ಜಾನಪದ ಕಥೆಯನ್ನಾಗಿ ನೋಡಿಕೊಳ್ಳುವುದು ಕೂಡ ಇದೇ ದೃಷ್ಟಿಯಿಂದ ಎನಿಸುತ್ತದೆ. ಇತಿಹಾಸ ಪದಕ್ಕೆ ಐತಿಹ್ಯ ಪದ ಸಮೀಪವರ್ತಿಯಾಗಿದ್ದರೂ ಐತಿಹ್ಯ ಇತಿಹಾಸವಲ್ಲ ಎನ್ನುವುದು ಸಾಮಾನ್ಯವಾದ ಗ್ರಹಿಕೆ ಎಲ್ಲ ಕಡೆಯೂ ಕಂಡುಬರುತ್ತದೆ. ಹಾಗೆಂದುಕೊಂಡು ಅದನ್ನು ಇತಿಹಾಸವಲ್ಲ ಎಂದು ಪೂರ್ತಿಯಾಗಿ ಬಿಡುವಂತೆಯೂ ಇಲ್ಲ ; ಎಲ್ಲೋ ಅದರಲ್ಲಿ ಒಂದು ಎಳೆ ಇತಿಹಾಸಕ್ಕೆ ಪೂರಕವಾಗಿ ಬಂದಿರಬಹುದು. ಆದರೆ ಪಾವಾಡಿಕ ಎನ್ನುವಂತೆ ಅಲ್ಲಿ

ಕಥೆ ಬಿಚ್ಚಿಕೊಳ್ಳುತ್ತ, ಬದಲಾವಣೆಯಾಗುತ್ತ ಹೋಗುವುದರಿಂದ ಮತ್ತು ಹೆಚ್ಚೆಚ್ಚು ವೈಭವೀಕರಣಗೊಳ್ಳುತ್ತ ಸಾಗುವುದರಿಂದ ಅದನ್ನು ಸಂಪೂರ್ಣ ಸತ್ಯವೆಂದು ನಂಬಲು ಸಾಧ್ಯವಿಲ್ಲ. ಐತಿಹ್ಯ ಇತಿಹಾಸಕ್ಕೆ ಪೂರಕವಾಗಿ ಇರಬಹುದೇ ಹೊರತು ಅದೇ ಇತಿಹಾಸ ಎನ್ನುವುದು ಸಮಂಜಸನೀಯವಲ್ಲ.

'ಇಂದು ನಾವು ಕೇಳುವ ಐತಿಹ್ಯಕ್ಕೂ, ತತ್ಸಂಬಂಧವಾದ ಕುರುಹಿಗೂ ಇರುವ ಸಂಬಂಧವು ನೈಜವೆಂದಾದಲ್ಲಿ ಆ ಐತಿಹ್ಯದ ಘಟನೆಯೂ ನೈಜವಾಗಿರಬೇಕು. ಹಾಗಿದ್ದ ಪಕ್ಷದಲ್ಲಿ ನಿರ್ದಿಷ್ಟ ಐತಿಹ್ಯಕ್ಕೂ ಅದು ಬೆಟ್ಟು ಮಾಡುವ ಕುರುಹಿಗೂ ಒಂದು ಬಗೆಯ ಸಮಕಾಲೀನತೆಯಿರುತ್ತದೆ. ಕುರುಹುಗಳಾಗಿ ತೋರುವ ವಸ್ತುಗಳೇ ಮೊದಲಿದ್ದು, ಆಮೇಲೆ ಅವುಗಳಿಗೆ ಸರಿಹೊಂದುವಂತೆ ಐತಿಹ್ಯಗಳು ಹುಟ್ಟಿಕೊಳ್ಳುವುದು ಸ್ವಾಭಾವಿಕ. ಅಸಾಮಾನ್ಯವಾದ – ಗಮನ ಸೆಲೆಯುವಂತಹ ವಸ್ತುಗಳೇನಾದರೂ ಕಣ್ಣಿಗೆ ಬಿದ್ದಲ್ಲಿ ಅದು ಏನು ? ಅದು ಯಾಕೆ ಹಾಗೆ ? ಎಂದು ವಿಚಾರಿಸುವ ಕುತೂಹಲ ಪ್ರಜ್ಞೆ ಎಂಬುದು ಮನುಷ್ಯ ಸಹಜ ಗುಣ. ಅದಕ್ಕೆ ಉತ್ತರವಾಗಿ ಪ್ರತಿಭಾನ್ವಿತ ವ್ಯಕ್ತಿಯೋರ್ವ ರಂಗು ರಂಗಾಗಿ ಕಥೆಗಳನ್ನು ಹೇಳುವುದೂ ಸ್ವಾಭಾವಿಕ. ಹಾಗೆ ಹೇಳಿದ ಕಥೆ, ಹಿಂದೆ ನಡೆದಿರಬಹುದಾದ ಘಟನೆಯೊಂದರ ವಿವರಣೆಯಾಗಿರುವುದಕ್ಕೂ ಸಾಧ್ಯತೆಯಿದೆ. ಕೆಲವೊಮ್ಮೆ ಇಂತಹ ವಿಶಿಷ್ಟ ವಸ್ತು, ಅವಶೇಷಗಳಿಗೆ ಸಂಬಂಧಿಸಿದ ವಾಸ್ತವ ಘಟನೆ ಬೇರೆಯೇ ಇದ್ದು, ಐತಿಹ್ಯವು ಅದಕ್ಕಿಂತ ತೀರಾ ಭಿನ್ನವಾದ ರೀತಿಯಲ್ಲಿ ಬೆಳೆದುಕೊಂಡು ಬಂದಿರಬಹುದು. ಅಂದರೆ ಕೆಲವು ಐತಿಹ್ಯಗಳಿಗೂ ಅವುಗಳು ಸೂಚಿಸುವ ಕುರುಹುಗಳಿಗೂ ಏನೇನೂ ಸಂಬಂಧವಿರದ ಸಂದರ್ಭಗಳೂ ಇವೆ. ಒಟ್ಟಿನಲ್ಲಿ ಹೇಳುವುದಾದರೆ ನಮ್ಮ ಜನಪದರು ನೋಡಿದ ಘಟನೆಯೊಂದರ, ಕೇಳಿದ ಸುದ್ದಿಯೊಂದರ ಕಂಠಸ್ಥ – ಪರಂಪರಾಗತ ನಿರೂಪಣೆಯೇ ಇಂದು ಐತಿಹ್ಯವಾಗಿ ಕಂಡುಬರುತ್ತದೆ'[೪] ಈ ವ್ಯಾಖ್ಯಾನ ಐತಿಹ್ಯದ ಅರ್ಥವನ್ನು ಬಿಡಿಸಿಡಲು ಪ್ರಮುಖ ಪ್ರಯತ್ನ ಎನ್ನುವಂತೆ ತೋರುತ್ತದೆ. ಒಂದು ಊರಿನಲ್ಲಿ ಇರುವ ಗುಡ್ಡವನ್ನು ನೋಡಿದಾಗ, ಮನುಷ್ಯ ಅದರ ಬಗ್ಗೆ ಕುತೂಹಲ ತಳೆಯಬಹುದು. ಅದಕ್ಕೆ ಸಂಬಂಧಿಸಿದಂತೆ ಕೆಲವು ವಿಷಯಗಳನ್ನು ತಿಳಿದುಕೊಳ್ಳಲು ಪ್ರಯತ್ನಿಸಬಹುದು. ಹಾಗೆ ತಿಳಿದುಕೊಂಡು ವಿಷಯಗಳನ್ನು ಮತ್ತಷ್ಟು ರಂಜನೀಯವಾಗಿ ಆತ ಮತ್ತೊಬ್ಬರಿಗೆ ಹೇಳಬಹುದು. ಐತಿಹ್ಯ ರೂಪುಗೊಳ್ಳುವುದು

ಹೀಗೆ 'ಮನುಷ್ಯ ಕೇಳಿ ತಿಳಿದ, ಸಂಗ್ರಹಿಸಿದ ವಿಷಯಗಳು ಸತ್ಯವಾಗಿರಬಹುದು ಇಲ್ಲವೆ ಕಲ್ಪನಾ ವ್ಯವಹಾರವೇ ಆಗಿರಬಹುದು. ಕೆಲವು ಸಲ ಅಂತಹ ಕತೆಗಳು ಜನಸಾಮಾನ್ಯರನ್ನು ಸೆಳೆಯುತ್ತವೆ. ಇಷ್ಟೇ ಅಲ್ಲ ಅವುಗಳನ್ನು ಅತಿಯಾಗಿ ನಂಬುವ ಜನರೂ ನಮ್ಮ ನಡುವೆ ಇದ್ದಾರೆ. 'ಭೌತಿಕ ಆಧಾರ ಅಥವಾ ಸತ್ಯಗಳೆಲ್ಲವೂ ಐತಿಹ್ಯಕ್ಕೆ ವಸ್ತುವಾಗಲಾರವು. ಅವು ಸಾಮಾನ್ಯ ಜೀವನ, ಶಿಷ್ಟಕ್ಕಿಂತ ಭಿನ್ನವಾಗಿದ್ದು ವಿಶಿಷ್ಟವಾಗಿರಬೇಕು ಅಥವಾ ಅಸಾಮಾನ್ಯವಾಗಿರಬೇಕು'[೫] ಎನ್ನುವ ವ್ಯಾಖ್ಯಾನ ಹುಟ್ಟಿಕೊಳ್ಳಲೂ ಕೂಡ ಇಂಥದ್ದೇ ನಂಬಿಕೆಗಳ ಅಧ್ಯಯನ ಫಲವಲ್ಲದೆ ಬೇರೇನೂ ಅಲ್ಲ.

'ಐತಿಹ್ಯದ ಒಂದು ವೈಶಿಷ್ಟ್ಯವೆಂದರೆ, ಅದು ಹಿಂದೆ ವಾಸ್ತವವಾಗಿ ನಡೆದ ಘಟನೆಯ ನಿರೂಪಣೆಯೇ ಹೌದೆಂಬುದಕ್ಕೆ ಕುರುಹಾಗಿ ಅದರ ನಿರೂಪಕರು (ಜನಪದರು–ಪ್ರಸಾರಕರು) ಇಂದು ತೋರಿಸುತ್ತಿರುವ ಕೆಲವೊಂದು ಅವಶೇಷ, ಪಳಿಯುಳಿಕೆ, ವಸ್ತು, ಸ್ಥಳಗಳು. ಅದು ಕೆರೆಯಾಗಿರಬಹುದು, ಗುಡ್ಡವಾಗಿರಬಹುದು, ಬೆಟ್ಟವಾಗಿರಬಹುದು, ಹೆಬ್ಬಂಡೆಯಾಗಿರಬಹುದು, ಅಸಾಧಾರಣ ದಿನ್ನೆಯಾಗಿರಬಹುದು, ಹಿಂದಿನ ಕಾಲದ ವ್ಯಕ್ತಿಗಳು ಉಪಯೋಗಿಸುತ್ತಿದ್ದ ಉಡುಗೆ–ತೊಡುಗೆ, ಆಭರಣಗಳಾಗಿರಬಹುದು, ವೀರ ಪುರುಷರು ಬಳಸಿದ್ದ ಆಯುಧ– ಸಾಮಗ್ರಿಗಳಾಗಿರಬಹುದು. ಅಷ್ಟು ಮಾತ್ರವಲ್ಲ – ಕೆಲವೊಂದು ಸ್ಥಳನಾಮ, ಗಾದೆ, ಒಗಟು, ಪಡೆನುಡಿ – ನುಡಿಗಟ್ಟು, ನಂಬಿಕೆ, ಆಚರಣೆ – ಇತ್ಯಾದಿಗಳೂ ನಿರ್ದಿಷ್ಟ ಘಟನೆಗಳ (ಐತಿಹ್ಯಗಳ) ಕುರುಹುಗಳಾಗಿ ಬಳಕೆಯಲ್ಲಿರುವುದುಂಟು. ಒಟ್ಟಿನಲ್ಲಿ ಮೇಲಿನ ಕುರುಹುಗಳ ವಿವಿಧ ಹಿನ್ನೆಲೆಯಲ್ಲಿ ಬೆಳೆದುಕೊಂಡು ಬಂದಿರುವ, ಪೂರ್ವದಲ್ಲಿ ನೈಜವಾಗಿ ನಡೆದದ್ದೇ ಎಂಬುದಾಗಿ ಅದರ ಪ್ರಸಾರಕರಲ್ಲಿ ವಿಶ್ವಾಸವಿರುವ ಘಟನೆಯ (ಗಳ) ಮೌಖಿಕ ಸಂಪ್ರದಾಯದ ಗದ್ಯ ನಿರೂಪಣೆಯೇ ಐತಿಹ್ಯ.'[೬] ಜನಮಾನಸದಲ್ಲಿ ಐತಿಹ್ಯ ಅಚ್ಚಳಿಯದೇ ನಿಂತಿರುತ್ತದೆ. ಯಾವುದೇ ಒಂದು ಊರಿನಲ್ಲಿ ಒಂದು ಕಲ್ಲು ಪೂಜಿಸತಗೊಂಡರೆ ಕಾಲಕ್ರಮೇಣ ಅದರ ಬಗ್ಗೆ ವಿಭಿನ್ನವಾದ ಕಥೆಗಳು ಹುಟ್ಟಿಕೊಳ್ಳಲು ಸುರುವಾಗುತ್ತವೆ. ಒಬ್ಬರಿಂದ ಮತ್ತೊಬ್ಬರಿಗೆ ಈ ವಿಷಯದ ಪ್ರಸರಣವಾದಾಗ ಅದು ಯಾವುದೋ ಪುರಾಣದ ದೈವವಾಗಿಯೋ ಅಥವಾ ಇತಿಹಾಸದಲ್ಲಿ ಆಗಿಹೋದ ವ್ಯಕ್ತಿಯೊಬ್ಬನಾಗಿಯೋ ಕಾಣಿಸಿಕೊಳ್ಳಲು ಸುರುವಾಗುತ್ತದೆ. ಭಾವಿಕತೆಯಿಂದಾಗಿ ಇಂತಹ ಕತೆಗಳು ಹುಟ್ಟಿಕೊಂಡಿರುವುದು ಆರಂಭದಲ್ಲಿ ಇದ್ದವರಿಗೆ ಮಾಹಿತಿಯಿದ್ದರೂ ಆನಂತರದಲ್ಲಿ ಬರುವ ಮುಂದಿನ ತಲೆಮಾರು ಆ ಬಗ್ಗೆ ಮತ್ತಷ್ಟು ರಂಜನೀಯವಾಗಿ ಕಥೆಯನ್ನು ವಿಸ್ತರಿಸುತ್ತ ಬರುತ್ತಾರಲ್ಲದೇ ತಾವೇ ಸ್ವತಃ ಅದನ್ನು ನಂಬುತ್ತಾರೆ,

'ಐತಿಹ್ಯ ಕೆಲವು ವೇಳೆ ಸತ್ಯ ಘಟನೆಯೊಂದರಿಂದಲೇ ಹುಟ್ಟಿಕೊಂಡಿರಬಹುದು ; ಎಂದರೆ ಅದು ನಿಜವಾದ ಚರಿತ್ರೆಯನ್ನೊಳಗೊಂಡಿರಬಹುದು. ಆದರೆ ಯಾವತ್ತೂ ಅದರಲ್ಲಿ ಚರಿತ್ರೆ ಇರುತ್ತದೆಂದು ಅಪೇಕ್ಷೆ ಪಡುವುದು ಮಾತ್ರ ತಪ್ಪು. ಹೆಚ್ಚಿನ ಸಂದರ್ಭಗಳಲ್ಲಿ ಐತಿಹ್ಯದಲ್ಲಿ ಚರಿತ್ರೆ ಎಳ್ಳಷ್ಟೂ ಇರದೇ ಇರಲೂ ಬಹುದು. ಆದರೆ ಐತಿಹ್ಯ ಚರಿತ್ರೆಯ ವೇಷವನ್ನು ಮಾತ್ರ ತಪ್ಪದೇ ಧರಿಸುತ್ತದೆ. ಅಷ್ಟೇ ಅಲ್ಲ, ಅದು ಅದರ ಪ್ರಧಾನ ಲಕ್ಷಣಗಳಲ್ಲಿ ಒಂದು'[೭] ಅಂದರೆ ಇತಿಹಾಸದ ಅಂಶಗಳೂ ಐತಿಹ್ಯದಲ್ಲಿ ಕೆಲವು ಸಲ ಸೇರಿಕೊಂಡಿರಬಹುದು ಎಂಬ ಅಭಿಪ್ರಾಯ ಇಲ್ಲಿ ಕಾಣಿಸಿಕೊಳ್ಳುತ್ತದೆ. ಇದು ಕೂಡ ಮೇಲೆ ತಿಳಿಸಿದ ವ್ಯಾಖ್ಯಾನದ ಮುಮದುವರಿಕೆಯೇ ಆಗಿದೆ. ಬೆಕ್ಕು ಕೂಡ ದೇವರು ಎನ್ನುವುದನ್ನು ಪಾಲಿಸಿಕೊಂಡ ಬಂದುದರ ಬಗ್ಗೆ ಇರುವ ಕತೆಯೊಂದನ್ನು ಇಲ್ಲಿ ದಾಖಲಿಸಬೇಕೆನಿಸುತ್ತದೆ.

ಒಬ್ಬ ಗೃಹಸ್ಥ ತುಂಬ ದೈವಭಕ್ತ. ಆತ ಬೆಳಿಗ್ಗೆ ಸ್ನಾನವಾದ ನಂತರ ಮಡಿಯಿಂದ ಬಂದು ಪೂಜೆಗೆ ಕುಳಿತುಕೊಳ್ಳುತ್ತಿದ್ದ. ದೇವತೆಗೆ ನೈವೇದ್ಯ ಇಡಲು ಆತನ ಹೆಂಡತಿ ಹಾಲು ತಂದಿಡುತ್ತಿದ್ದಳು. ಗೃಹಸ್ಥ ಕಣ್ಣು ಮುಚ್ಚಿಕೊಂಡು ಪೂಜೆ ನೆರವೇರಿಸುತ್ತಿದ್ದ. ಒಂದು ದಿನ ಪೂಜೆ ಮುಗಿಸಿ ಆ ಗೃಹಸ್ಥ ಮೇಲೆದ್ದಾಗ ಆತನಿಗೆ ಅಚ್ಚರಿಯಾಯಿತು. ನೈವೇದ್ಯಗೆ ಇಟ್ಟಿದ್ದ ಹಾಲು ಪಾತ್ರೆಯಲ್ಲಿ ಇರಲೇ ಇಲ್ಲ. ಆತನಿಗೆ ತುಂಬ ಖುಷಿಯಾಯಿತು. ತಾನಿಟ್ಟ ಹಾಲನ್ನು ದೇವತೆ ಕುಡಿಯಿತಲ್ಲ ಎಂದುಕೊಂಡ. ಮರುದಿನವೂ ಹಿಂದಿನ ದಿನದಂತೆಯೇ ಆಯಿತು. ಕೆಲವು ದಿನ ಕಳೆದ ಮೇಲೆ ದೇವತೆ ಹಾಲನ್ನು ಹೇಗೆ ಕುಡಿಯಬಹುದು ಎಂದು ನೋಡುವ ಆಸೆ ಆತನಿಗೆ ಆಯಿತು. ಪೂಜೆಯ ಸಂದರ್ಭದಲ್ಲಿ ಕಣ್ಣು ಮುಚ್ಚಿ ಕುಳಿತುಕೊಳ್ಳುತ್ತಿದ್ದ ಆತ ಒಂದು ದಿನ ಕಣ್ಣು ಮುಚ್ಚಿದಂತೆ ನಟನೆ ಮಾಡಿ ಪೂಜೆ ಸಲ್ಲಿಸತೊಡಗಿದ. ಆಗಲೇ ನಡೆದದ್ದು, ಅವರ ಮನೆಯಲ್ಲಿ ಇದ್ದ ಬೆಕ್ಕು ನಿಧಾನವಾಗಿ ಬಂದು ಹಾಲನ್ನು ಕುಡಿದು ಹೋಯಿತು. ಆತನಿಗೆ ವಾಸ್ತವ ಏನು ಎನ್ನುವುದು ಗೊತ್ತಾಯಿತು. ಹಾಗಾಗಿ ಆತ ಮರುದಿನದ ಪೂಜೆಗೆ ಕುಳಿತುಕೊಳ್ಳುವಾಗ ಮನೆಯ ಅಂಗಳದಲ್ಲೊಂದು ಗೂಟ ಹುಗಿದು, ಬೆಕ್ಕನ್ನು ಅದಕ್ಕೆ ಕಟ್ಟಿ, ಅದರ ಮೇಲೆ ಒಂದು ಬುಟ್ಟಿಯನ್ನು ಹೊದೆಸಿ, ಆ ಬುಟ್ಟಿಯ ಮೇಲೆ ದೊಡ್ಡ ಕಲ್ಲೊಂದನ್ನು ಇಟ್ಟು ಪೂಜೆಗೆ ಕುಳಿತ. ಇದು ದಿನವೂ ನಿರಂತರವಾಯಿತು.

ಮುಂದೊಂದು ದಿನ ಆ ಗೃಹಸ್ಥ ತೀರಿಕೊಂಡ. ಪೂಜೆಯ ಜವಾಬ್ದಾರಿ ಆತನ ಮಗನಿಗೆ ವರ್ಗಾವಣೆಯಾಯಿತು. ಆತ ಕೂಡ ಅಪ್ಪ ಹೇಗೆ ಪೂಜೆ ಮಾಡುವುದನ್ನು ನೋಡಿದ್ದ. ಆದರೆ ಈಗ ಮನೆಯಲ್ಲಿ ಬೆಕ್ಕು ಇರಲಿಲ್ಲ. ಆತ ಇಡೀ ಊರನ್ನು ಸುತ್ತು ಹಾಕಿ ಒಂದು ಬೆಕ್ಕನ್ನು ಹಿಡಿದು ತಂದು, ಅಂಗಳದಲ್ಲಿ ಅಪ್ಪ ನೆಟ್ಟಿದ್ದ ಗೂಟಕ್ಕೆ ಪೂಜೆ ಸಲ್ಲಿಸಿ, ಬೆಕ್ಕನ್ನು ಅದಕ್ಕೆ ಕಟ್ಟಿದ, ಮನೆಯಲ್ಲಿದ್ದ ಹಳೆಯ ಬುಟ್ಟಿಯ ಬದಲಾಗಿ ಹೊಸ ಬುಟ್ಟಿಯನ್ನು ಖರೀದಿಸಿ ತಂದು ಅದರ ಮೇಲೆ ಮುಚ್ಚಿದ. ಬುಟ್ಟಿಯ ಮೇಲೆ ತೊಳೆದು ಸ್ವಚ್ಛ ಮಾಡಿ ಪೂಜಿಸಿದ ಕಲ್ಲನ್ನು ಇಟ್ಟು ಪೂಜೆಗೆ ಕುಳಿತುಕೊಂಡ.

ಇಲ್ಲಿಯ ವಿಚಾರವೆಂದರೆ ಗೃಹಸ್ಥನಿಗೆ ಬೆಕ್ಕನ್ನು ಕಟ್ಟಿ ಹಾಕುವ ಕಾರಣ ಗೊತ್ತಿತ್ತು. ಆದರೆ ಆತನ ಮಗನಿಗೆ ಅದು ಗೊತ್ತಿಲ್ಲ. ಆತ ತಿಳಿದುಕೊಂಡಿರುವುದು ಎಂದರೆ ಅಪ್ಪ ಮಾಡಿದ ಹಾಗೆಯೇ ತಾನೂ ಪೂಜೆ ಮಾಡಬೇಕು ಎಂಬುದನ್ನು ಮಾತ್ರ. ಹೀಗೆ ಕಾರ್ಯಕಾರಣವನ್ನು ತಿಳಿಯದೇ ಹಿರಿಯರು ಮಾಡಿದ ಕೆಲವು ವಿಷಯಗಳನ್ನು ಪುನಾರಾವರ್ತನೆ ಮಾಡಿದಾಗ ಐತಿಹ್ಯಗಳು ಗೊತ್ತಿಲ್ಲದಂತೆಯೇ ಹಬ್ಬಿಕೊಳ್ಳುತ್ತವೆ. ಗೃಹಸ್ಥನ ಮನೆಯ ವಿಷಯವನ್ನೇ ಮುಂದುವರಿಸಬೇಕಾದರೆ ಅಲ್ಲಿ ಕಟ್ಟುತ್ತಿದ್ದ ಬೆಕ್ಕು ಕ್ಷುದ್ರ ದೇವತೆಯಾಗಿ ಕಥೆಯಾಯಿತು. ಮನೆಯಲ್ಲಿ ಪೂಜೆ ಮಾಡುವ ದೈವಕ್ಕೆ ಸಂಬಂಧಿಸಿದಂತೆ, ಕ್ಷುದ್ರದೇವತೆಯ ಕಥೆ ಬೆಳೆಯಿತು. ಮುಂದೆ ಬಂದವರು ಅದನ್ನು (ಆ ಕಥೆಯನ್ನು) ಪೋಷಿಸಿಕೊಂಡು ಬಂದರಲ್ಲದೇ ತಮಗೆ ತಿಳಿದ ಮತ್ತಷ್ಟು ಸಂಗತಿಗಳನ್ನು ಸೇರಿಸಿ

ಹೇಳತೊಡಗಿದರು. ಕೇಳಿದವರು ಇನ್ನೊಂದಿಷ್ಟು ರಂಜನೀಯವಾಗಿ ಅದನ್ನು ಮಾರ್ಪಾಡಿಸಿದರು. ಹೀಗೆ ಅಲ್ಲಿಯೂ ಒಂದು ಐತಿಹ್ಯ ಹುಟ್ಟಿಕೊಂಡಿತು.

ಈ ವಿಚಾರವನ್ನು ಗಮನಿಸಿದಾಗ ಐತಿಹ್ಯಗಳು ಕೆಲವು ಸಲ ಪ್ರಜ್ಞಾಪೂರ್ವಕವಾಗಿ ಹುಟ್ಟಿಕೊಳ್ಳುವುದಿಲ್ಲ ಎಂಬ ಪ್ರಮೇಯ ಸಿದ್ಧಗೊಳ್ಳುತ್ತದೆ. ನಮ್ಮಲ್ಲಿ ಇರುವ ಸಪ್ತ ಮಾತೃಕೆಯರು, ಜೋಕುಮಾರಸ್ವಾಮಿ, ಹೊಳಲಮ್ಮ, ಕರಿಯಮ್ಮ, ಕಾಮಣ್ಣ, ರೇಣುಕಾದೇವಿ ಮೊದಲಾದವರ ಬಗ್ಗೆ ಹಬ್ಬಿಕೊಂಡಿರುವ ಐತಿಹ್ಯಗಳೂ ಕೂಡ ಇದೇ ತೆರನಾಗಿ ಪ್ರಸರಣವಾಗಿರುವುದರಲ್ಲಿ ಯಾವುದೇ ಸಂದೇಹಗಳಿಲ್ಲ.

೨೨, ೨೩, ೨೪ ಸೆಪ್ಟೆಂಬರ್ ೨೦೧೨ ರಲ್ಲಿ 'ಶೃಂಗೇರಿಯಲ್ಲಿ ಕರ್ನಾಟಕ ಇತಿಹಾಸ ಸಮ್ಮೇಳನದಲ್ಲಿ ಐತಿಹ್ಯದ ವಿಷಯ ವ್ಯಾಪಕ ಚರ್ಚೆಗೆ ಒಳಗಾಯಿತು. ಒಬ್ಬ ಪ್ರತಿನಿಧಿ ಶಾಸನ ಆಧಾರಿತ ಐತಿಹ್ಯಗಳು ಎಂಬ ಸಂಪ್ರಬಂಧ ಮಂಡಿಸಿದರು. ಆಗ ಗಂಭೀರ ಚರ್ಚೆಯಾಗಿ ಪ್ರಬಂಧದ ಶೀರ್ಷಿಕೆಯನ್ನೇ ಬದಲಾಯಿಸಲು ಸಲಹೆ ಮಾಡಲಾಯಿತು ; ಕಾರಣ ಐತಿಹ್ಯವನ್ನು ಇತಿಹಾಸಕ್ಕೆ ಏಕಮೇವ ಆಧಾರವಾಗಿ ಪರಿಗಣಿಸುವ ಹಾಗಿಲ್ಲ. ಅದು ಇತಿಹಾಸವಲ್ಲ. ಅದು ಬರೀ ಬಾಯಿ ಮಾತಿನಿಂದ ಪ್ರಚಲಿತವಾದ ವಿಚಾರ. ಅದಕ್ಕೆ ಖಚಿತವಾದ ಶಾಸನ, ಲಿಖಿತ ಹಾಗೂ ನಾಣ್ಯದ ಆಧಾರವಿದ್ದರೆ ಅದನ್ನು ಐತಿಹ್ಯ ಎನ್ನಲಾಗದು ಎಂದು ಇತಿಹಾಸತಜ್ಞರು ಅಭಿಪ್ರಾಯ ವ್ಯಕ್ತಪಡಿಸಿದರು. ಐತಿಹ್ಯವು ಸತ್ಯವಾಗಿರಬಹುದು ಇಲ್ಲವೆ ಕಪೋಲಕಲ್ಪಿತವಾಗಿ ಒಬ್ಬರಿಂದ ಒಬ್ಬರಿಗೆ ಹರಡುವಾಗ ಉತ್ಪ್ರೇಕ್ಷೆಗಳಿಂದ ಕೂಡಿದ ಮಾಹಿತಿಯಾಗಬಹುದು'[೮] ಎಂಬ ವಿಚಾರ ಮೂಡಿಬಂದಿದೆ. ಈ ಬಗ್ಗೆ ಗೊಂದಲಗಳು ಇಂದಿಗೂ ಮುಂದುವರಿದುಕೊಂಡು ಬಂದಿವೆ ಎಂಬುದನ್ನು ಕಂಡುಕೊಂಡಾಗ ಐತಿಹ್ಯವು ಇತಿಹಾಸಕ್ಕೆ ಪೂರಕವಾಗಿ ನಿಲ್ಲಬಹುದೇ ಹೊರತು ಅದೇ ಒಂದು ಇತಿಹಾಸವಾಗಲಾರದು ಎಂಬುದು ಬಹುತೇಕ ಇತಿಹಾಸತಜ್ಞರ ಅಭಿಪ್ರಾಯವಾಗಿದೆ.

'ಮಧ್ಯಯುಗದ ಐತಿಹ್ಯಗಳಲ್ಲಿ ಇತಿಹಾಸ ಮತ್ತು ನೀತಿಕಥೆಗಳು ಬಿಡಿಸಲಾಗದ ರೀತಿಯಲ್ಲಿ ಸೇರಿಕೊಂಡಿರುವುದನ್ನು ಕಾಣಬಹುದು. ಇತಿಹಾಸದ ಬರವಣಿಗೆ ಹೆಚ್ಚು ವ್ಯವಸ್ಥಿತವಾಗಿ ಬಂದು, ತನ್ನ ವಸ್ತುವಿನ ನಿಜತ್ವವನ್ನು ದೃಢಪಡಿಸಿಕೊಂಡ ಮೇಲೆ ಉಳಿದ ನೀತಿಕಥೆಗಳು ಮತ್ತು ನಂಬಲಾಗದ ಕಥೆಗಳು ಐತಿಹ್ಯದ ಕ್ಷೇತ್ರಕ್ಕೆ ಬಂದುವೆಂದು ಕೆಲವರ ಅಭಿಪ್ರಾಯ. ಆಧುನಿಕ ಬಳಕೆಯಲ್ಲಿ ಈ ಪದಕ್ಕೆ ಪ್ರಧಾನವಾಗಿ ಎರಡು ಅರ್ಥಗಳಿವೆ ; ಒಂದು – ನಾಣ್ಯ, ಸ್ಮಾರಕಪದಕ ಇತ್ಯಾದಿಗಳ ಮೇಲಿನ ಶಾಸನ ; ಮತ್ತೊಂದು – ಇತಿಹಾಸದ ಹಾಗೆ ತಾಳೆ ನೋಡಲಾಗದ ಮತ್ತು ಪುರಾತನ ಮೂಲವುಳ್ಳದ್ದೆಂದು ಗ್ರಹಿಕೆಯಾಗಿರುವ ಬರವಣಿಗೆಯ ಕಥನ. ಕೆಲವು ಆಧುನಿಕ ಲೇಖಕರು ಆರ್ಷೇಯ ಶೈಲಿಯಲ್ಲಿ ಶುದ್ಧ ಕಲ್ಪನಾತ್ಮಕ ಕಥೆಗಳನ್ನು ಬರೆದು, ಅದನ್ನು ಲೆಜೆಂಡ್‌ಗಳೆಂದು

ಕರೆದಿರುವುದೂ ಉಂಟು. ಇದರಿಂದಾಗಿ ಅಕ್ಷರಸ್ಥರ ನಡುವೆ ಈ ಪದ ಜಾನಪದಕ್ಕಿಂತ ಭಿನ್ನವಾದ ಪುರಾತನ ಗ್ರಂಥವೊಂದರಿಂದ ಬಂದ ಕಥೆಯೊಂದಕ್ಕೆ ಅನ್ವಯಿಸುತ್ತಿದ್ದಂತೆ ತಿಳಿಯುತ್ತದೆ. ಆದರೆ ಇತ್ತೀಚೆಗೆ ಜಾನಪದ ವಿದ್ವಾಂಸರು ಇದನ್ನು ಕಂಠಸ್ಥವಾಗಿ ಸಂವಹನಗೊಂಡ ಕಥೆಗಳಿಗೆ ಅನ್ವಯಿಸಿ, ಇದರ ಅರ್ಥವನ್ನು ನಿಗದಿಪಡಿಸಿದ್ದಾರೆ. ಈ ದೃಷ್ಟಿಯಲ್ಲಿ ಐತಿಹ್ಯವೆಂದರೆ ವ್ಯಕ್ತಿ, ಸ್ಥಳ ಅಥವಾ ಘಟನೆಯೊಂದನ್ನು ಕುರಿತಂತೆ ಸಾಂಪ್ರದಾಯಿಕ ಮೂಲವಸ್ತುಗಳೊಡನೆ ನಿಜಾಂಶವೊಂದರ ಮೇಲೆ ಆಧಾರಿತವಾಗಿದೆಯೆಂದು ಭಾವಿಸುವ ಕಥನವೇ ಆಗಿದೆ'' ಈ ಮಾತನ್ನೇ ನಾವು ಐತಿಹ್ಯದ ಗಟ್ಟಿಯಾದ ವ್ಯಾಖ್ಯಾನಕ್ಕೆ ಬಳಸಿಕೊಳ್ಳಲು ಅಡ್ಡಿಯಿಲ್ಲ.

ಐತಿಹ್ಯಗಳನ್ನು ಹಲವಾರು ವಿಧದಲ್ಲಿ ವಿಂಗಡಿಸಲಾಗುತ್ತದೆ. ವಸ್ತುವಿನ ದೃಷ್ಟಿಯಿಂದ ಐತಿಹ್ಯಗಳನ್ನು ಮೂರು ವಿಧವಾಗಿ ವರ್ಗೀಕರಣ ಮಾಡಲಾಗಿದೆ. ಅವುಗಳಲ್ಲಿ ಮೊದಲನೆಯದು ಸೃಷ್ಟಿ ಅಥವಾ ಜಗತ್ತಿನ ಮೂಲವನ್ನು ಕುರಿತಾದ ವಿವರಣಾತ್ಮಕ ಐತಿಹ್ಯಗಳು, ಎರಡನೆಯದು ಅತಿಮಾನುಷ ವ್ಯಕ್ತಿಗಳ ಬಗೆಗಿನ ಐತಿಹ್ಯಗಳು ಹಾಗೂ ಮೂರನೆಯದು ಐತಿಹಾಸಿಕ ಅಥವಾ ಮಿಥ್ಯೈತಿಹಾಸಿಕ ಐತಿಹ್ಯಗಳು.[೧೦] ಸೃಷ್ಟಿ ಅಥವಾ ಜಗತ್ತಿನ ಮೂಲವನ್ನು ಕುರಿತಾದ ಐತಿಹ್ಯಗಳು ಸಾಮಾನ್ಯವಾಗಿ ಸೃಷ್ಟಿಯ ಉಗಮ, ಭೂಮಿಯ ಉಗಮ ಮತ್ತು ಬೆಳವಣಿಗೆ ಮೊದಲಾದ ವಿಷಯಗಳನ್ನು ಒಳಗೊಂಡಿದ್ದು ಪೌರಾಣಿಕ ಹಿನ್ನೆಲೆಯಲ್ಲಿ ಕಂಡುಬರುತ್ತವೆ. ಇನ್ನು ಅತಿಮಾನುಷ ವ್ಯಕ್ತಿಗಳ ಬಗೆಗಿನ ಐತಿಹ್ಯಗಳು ಜಾನಪದ ಸಾಹಿತ್ಯದಲ್ಲಿ ಬರುವ ಕಿನ್ನರ, ದೆವ್ವ, ಭೂತ, ಪಿಶಾಚಿ, ರಾಕ್ಷಸ ಮೊದಲಾದವುಗಳ ಬಗ್ಗೆ ಕಥೆಗಳನ್ನು ಹೊಂದಿರುತ್ತವೆ. ಐತಿಹಾಸಿಕ ಅಥವಾ ಮಿಥ್ಯೈತಿಹಾಸಿಕ ಐತಿಹ್ಯಗಳು ಚಾರಿತ್ರಿಕ ಗುಣಗಳನ್ನು ಆಧಾರವಾಗಿಟ್ಟುಕೊಂಡು ರಚನೆಯಾಗಿದ್ದು ಇಂತಹ ಐತಿಹ್ಯಗಳು ಇಡಿಯಾಗಿ ಕಲ್ಪನೆಯಲ್ಲಿಯೇ ಜನ್ಮ ತಳೆದಿರುತ್ತವೆ ಎನ್ನುವಂತಿಲ್ಲ. ಆದರೂ ಇವು ಕೆಲವು ಸಲ ಭ್ರಾಂತಿಮೂಲವೂ ಅಸಂಬದ್ಧವೂ ಆಗಿರುತ್ತವೆ.

ಇನ್ನೊಂದು ರೀತಿಯಲ್ಲಿ ಐತಿಹ್ಯಗಳನ್ನು ಎರಡು ರೀತಿಯಲ್ಲಿ ವಿಂಗಡಿಸಲಾಗುತ್ತದೆ. ಮೊದಲನೆಯದು ಸ್ಥಳೀಯ ಐತಿಹ್ಯ ಹಾಗೂ ಎರಡನೆಯದು ವಲಸೆ ಐತಿಹ್ಯಗಳು. 'ಸ್ಥಳೀಯ ಐತಿಹ್ಯಗಳು ಗೊತ್ತಾದ ಸ್ಥಳವೊಂದಕ್ಕೆ ಸಂಬಂಧಿಸಿದವು. ಭೂವಲಯದ ಅಥವಾ ಹೆಸರಿನ ಕೆಲವು ಸ್ಥಳೀಯ ವೈಲಕ್ಷಣ್ಯಗಳನ್ನು ವಿವರಿಸುವುದಕ್ಕಾಗಿಯೋ ಸ್ಥಳೀಯ ಸಂಪ್ರದಾಯದ ಕಥೆಯೊಂದನ್ನು ಹೇಳುವುದಕ್ಕಾಗಿಯೋ ಅವು ಸೃಷ್ಟಿಯಾಗಿರುತ್ತವೆ. ಸಂಗ್ರಹವಾಗಿ ಹೇಳುವುದಾದರೆ ಸ್ಥಳೀಯ ಐತಿಹ್ಯ ಚಿಕ್ಕದಾದುದು, ಘಟನಾತ್ಮಕವಾದುದು, ವಿವರಣಾತ್ಮಕವಾದುದು. ಇದರ ರಚನೆ ಸರಳ, ತಂತ್ರದಲ್ಲಿ ಕಿನ್ನರ ಕಥೆಯನ್ನು ಇದು ಹೋಲುತ್ತದೆ. ಇದರ ಕ್ಷೇತ್ರ ತುಂಬ ಪರಿಮಿತ. ಬಹು ಹಿಂದಿನ ಸಂಪ್ರದಾಯಗಳನ್ನೂ ನೀತಿ ಪದ್ಧತಿಗಳನ್ನೂ ಹೊಂದಿ ಪುರಾತನತ್ವದ ಸೂಚಿಯಾಗಿರುತ್ತದೆ.'[೧೧]

ಇದರಲ್ಲಿ ಕೆರೆ, ಪ್ರವಾಹ, ಪ್ರಳಯ, ಕೋಟೆ, ಗುಡ್ಡ, ಬಲಿ, ಕೌಟಂಬಿಕ, ಇತಿಹಾಸದ ಎಳೆ ಮೊದಲಾದ ವಿಷಯಗಳು ಇಲ್ಲಿ ಬರುತ್ತವೆ.

ವಲಸೆಯ ಐತಿಹ್ಯ ಯಾವುದೋ ಒಂದು ಸ್ಥಳದಲ್ಲಿ ಹುಟ್ಟಿಕೊಂಡು ಕಾಲಾಂತರದಲ್ಲಿ ವಿಶ್ವವ್ಯಾಪಕತೆಯನ್ನು ಪಡೆದುಕೊಂಡಿರುತ್ತದೆ. 'ವಲಸೆಯ ಐತಿಹ್ಯ ದೇಶ, ಧರ್ಮಗಳ ತಾರತಮ್ಯವಿಲ್ಲದ, ವಿಸ್ತೃತ ಆಧಾರದ ಸಾಮಾನ್ಯ ಮಾನವಮೂಲವಸ್ತುವನ್ನು ಒಳಗೊಂಡಿರುವುದಿಲ್ಲ. ಅವು ಒಂದು ಕಡೆ ಹುಟ್ಟುತ್ತಲೇ ಅಲ್ಲಿನ ಸ್ಥಿತಿ, ಅನುಷ್ಠಾನ, ನಂಬಿಕೆ ಹಾಗೂ ಸಾಂಪ್ರದಾಯಿಕ ಪದ್ಧತಿಗಳನ್ನು ಮೈಗೂಡಿಸಿಕೊಳ್ಳುತ್ತವೆ. ಬೇರೆ ಕಡೆಗೆ ವಲಸೆ ಹೋದಾಗ ಅಲ್ಲಿನ ಪರಿಸ್ಥಿತಿಗೆ ಅನಾಮತ್ತಾಗಿ ಒಪ್ಪಿಗೆಯಾಗಬಹುದು ಅಥವಾ ಅಲ್ಲಿನ ಧಾರ್ಮಿಕ ಪದ್ಧತಿಗಳಲ್ಲಿ ವಿಲೀನವಾಗಬಹುದು. ಕೆಲವು ವೇಳೆ, ಹೆಸರಿನ ಆಕಸ್ಮಿಕ ಉಲ್ಲೇಖ ತನ್ನ ಎಲ್ಲ ಪರ್ಯಾಯಗಳ ಮೂಲಕ ಪಟ್ಟು ಹಿಡಿದು ಅಮಟಿಕೊಂಡಿದ್ದು, ಬೆಲೆಯುಳ್ಳ ಸೂಚನೆಯನ್ನು ಒದಗಿಸುತ್ತವೆ. ಮತ್ತೇ ಮತ್ತೇ ಹೇಳುವಾಗ ಕಥಾವಕ್ತೃಗಳ ಔದಾಸೀನ್ಯದಿಂದಾಗಿ ಕಥೆಗಳು ಆಗಾಗ್ಗೆ ಬದಲಾಗುವುದುಂಟು'[೧೨] ಎಂಬ ಮಾತಿನ ಮೂಲಕ ವಲಸೆಯ ಐತಿಹ್ಯಗಳ ಸ್ವರೂಪ ಬದಲಾವಣೆಯ ವಿಷಯ ಮನದಟ್ಟಾಗುತ್ತದೆ.

ಹಾಗೆಯೇ ದೈವ ಪ್ರಧಾನ ಐತಿಹ್ಯಗಳು, ಸ್ಥಳ ಪ್ರಧಾನ ಐತಿಹ್ಯಗಳು ಹಾಗೂ ವ್ಯಕ್ತಿ ಪ್ರಧಾನ ಐತಿಹ್ಯಗಳು ಎಂಬುದಾಗಿಯೂ ವಿಂಗಡನೆ ಮಾಡಲಾಗುತ್ತಿದ್ದು, ಈ ವರ್ಗೀಕರಣ ಹೆಚ್ಚು ಬಳಕೆಯಲ್ಲಿದೆ. ಹೀಗಾಗಿ ಇದನ್ನೇ ಮುಖ್ಯವಾಗಿಟ್ಟುಕೊಂಡು ಇಲ್ಲಿ ಶಾಸನಗಳಲ್ಲಿ ಬಂದಿರುವ ಐತಿಹ್ಯಗಳನ್ನು ವಿವೇಚಿಸಲಾಗಿದೆ.

**೧. ದೈವ ಪ್ರಧಾನ ಐತಿಹ್ಯಗಳು :** ಜಗತ್ತಿನಲ್ಲಿ ದೈವವನ್ನು ನಂಬಿ ಬದುಕು ನಡೆಸುವವರ ಸಂಖ್ಯೆ ಹೆಚ್ಚಾಗಿದೆ. ಇದಕ್ಕೆ ಅವರಲ್ಲಿ ಇರುವ ಸಾತ್ವಿಕತೆ ಮತ್ತು ಸಾಂದರ್ಭಿಕ ಭಯ ಕಾರಣವೇ ಆಗಿವೆ. ಈ ನಿಟ್ಟಿನಲ್ಲಿ ದೈವಿ ಪ್ರಧಾನ ಐತಿಹ್ಯಗಳೂ ಹುಟ್ಟಿಕೊಂಡಿವೆ. ಪವಾಡ ಸದೃಶವಾದ ಸಂಗತಿಗಳು ಇಲ್ಲಿ ಹೆಚ್ಚು ಎಡೆ ಪಡೆಯುತ್ತವೆ. 'ಪ್ರಾಚೀನ ಕಾಲದ ಜನರಲ್ಲಿ ದೇವಾಲಯಗಳ ನಿರ್ಮಾಣ ಅವರಲ್ಲಿ ಬೇರೂರಿದ್ದ ಜೀವನ ಶ್ರದ್ಧೆ ಹಾಗೂ ನಿಷ್ಠೆಗಳ ಪ್ರತೀಕವೂ ಆಗಿವೆ. ಸಮಾಜದಲ್ಲಿಯ ಎಲ್ಲಾ ವರ್ಗದ ಜನರು ದೇವಾಲಯಗಳೊಡನೆ ಸಂಬಂಧ ಇರಿಸಿಕೊಂಡಿದ್ದು ಶಾಸನಗಳಿಂದ ತಿಳಿದು ಬರುತ್ತದೆ. ವ್ಯಕ್ತಿಗಳು ಯಾವುದಾದರೊಂದು ಸಂದರ್ಭದಿಂದ ಪ್ರಚೋದನೆಯನ್ನು ಪಡೆದು ತನ್ನ ಹೆಸರಿನ ಜೊತೆಗೆ ಇಷ್ಟದೈವದ ಹೆಸರನ್ನು ಸೇರಿಸಿ ದೇವಾಲಯವನ್ನು ಸ್ಥಾಪಿಸಿರುವ ವಿವರಗಳು ಶಾಸನಗಳ ಅಧ್ಯಯನದಿಂದ ತಿಳಿದು ಬರುತ್ತದೆ.'[೧೩] ಎನ್ನುವ ಸಿ. ನಾಗಭೂಷಣ ಅವರ ಮಾತುಗಳು ದೈವಿ ಪ್ರಧಾನ ಐತಿಹ್ಯಗಳ ಬಗ್ಗೆ ಆಂಶಿಕವಾದ ವಿಚಾರಗಳನ್ನು ವ್ಯಕ್ತಪಡಿಸುತ್ತವೆ. ಆದರೆ ದೈವಿ ಪ್ರಧಾನ ಐತಿಹ್ಯಗಳು ಕೇವಲ ದೇವಾಲಯ ನಿರ್ಮಾಣದಂತಹ ಸಂಗತಿಗಳಲ್ಲಿ ಮಾತ್ರವಲ್ಲ ; ಇನ್ನಿತರ ಪ್ರಸಂಗಗಳಲ್ಲಿಯೂ ಹುಟ್ಟಿಕೊಳ್ಳುತ್ತವೆ.

ಯಾವುದೋ ಒಂದು ಕಲ್ಲನ್ನು ಪೂಜಿಸುವ ಮೂಲಕ ಆ ಕಲ್ಲಿಗೆ ಒಂದು ಹೆಸರು ಪ್ರಾಪ್ತವಾಗುತ್ತದೆ. ಹಾಗೆಯೇ ಅದರ ಸುತ್ತ ಕೆಲವು ಕಥೆಗಳೂ ಹುಟ್ಟಿಕೊಳ್ಳುತ್ತವೆ. ಆ ಕಥೆಗೆ ಪೂರಕವಾಗಿ ಕೆಲವು ವಸ್ತುಗಳನ್ನೂ ಗುರುತಿಸಲಾಗುತ್ತದೆ. ಹಾಗೆಯೇ ದೈವವನ್ನು ಪೂಜಿಸುವ ವ್ಯಕ್ತಿಗಳ ಮರಣದ ನಂತರ ಅವರ ಬಗ್ಗೆಯೂ ಕೆಲವು ದೈವಿಕ ಸ್ವರೂಪದ ಐತಿಹ್ಯಗಳು ಜನ್ಮ ತಳೆಯುತ್ತವೆ. ಮುಂದೊಂದು ದಿನ ಆ ವ್ಯಕ್ತಿಯೇ ದೈವವಾಗಿ ಪರಿಣಮಿಸಬಹುದು. ಹೀಗಾಗಿ ದೈವಿ ಪ್ರಧಾನ ಐತಿಹ್ಯಗಳು ಭಾವುಕ ಮನಸ್ಸುಗಳ ಭಕ್ತಿಯ ನೆಲೆಯಲ್ಲಿ ರೂಪುಗೊಳ್ಳುತ್ತವೆ ಎನ್ನಬೇಕಾಗುತ್ತದೆ.

ಕುಮಾರಸ್ವಾಮಿ: ಸಂಡೂರಿನಿಂದ ಸುಮಾರು ೧೨ ಕಿ.ಮೀ. ದೂರದಲ್ಲಿ ಕುಮಾರಸ್ವಾಮಿ ದೇವಸ್ಥಾನವಿದೆ. ಈ ದೇವಸ್ಥಾನದಲ್ಲಿ ಮಹಿಳೆಯರಿಗೆ ಪ್ರವೇಶವಿರಲಿಲ್ಲ. ಈ ಪ್ರವೇಶ ನಿರಾಕರಣೆಯ ಕುರಿತ ಕುಮಾರಸ್ವಾಮಿಯ ಐತಿಹ್ಯ ಹೀಗಿದೆ. ಕುಮಾರಸ್ವಾಮಿಯು ಮದುವೆಯ ವಯಸ್ಸಿಗೆ ಬಂದಿದ್ದರಿಂದ ಅವನ ತಾಯಿ ಅವನಿಗೆ ದಕ್ಷಿಣ ದೇಶದ ಕನ್ಯೆಯನ್ನು ನೋಡಿಕೊಂಡು ಬಂದಿದ್ದಳು. ಇದನ್ನು ಮಗನಿಗೆ ಹೇಳಲಾಗಿ, ಅವನು ಹುಡುಗಿ ಹೇಗಿದ್ದಾಳೆ ಎಂದು ಕೇಳಲು ಆಕೆಯು ನನ್ನಂತೆ ಸುಂದರವಾಗಿದ್ದಾಳೆ ಎನ್ನುತ್ತಾಳೆ. ಇದನ್ನು ಕೇಳಿದ ಕುಮಾರಸ್ವಾಮಿ ನಿನ್ನಂತೆ ಇದ್ದಾಳೆ ಎಂದರೆ ಅವಳು ತಾಯಿ ಸಮಾನ ಎನ್ನುತ್ತಾನೆ. ಅವನ ತಾಯಿ ಅವನಿಗೆ ಏನೆಲ್ಲಾ ರೀತಿಯಿಂದ ಒಪ್ಪಿಸಲು ಪ್ರಯತ್ನಿಸಿದರು ಅವನು ಒಪ್ಪಲಿಲ್ಲ. ಕೊನೆಗೆ ಅವಳು ಅವನನ್ನು ಕುರಿತು ಹೀಗೆ ಹೇಳುತ್ತಾಳೆ. ನಾನು ಹೆತ್ತು ಹೊತ್ತು, ಎದೆಹಾಲು ಕುಡಿಸಿ ಸಾಕಿ ದೊಡ್ಡವನನ್ನಾಗಿ ಮಾಡಿದ್ದೇನೆ. ನೀನು ನನಗೆ ಕೊಡುವ ಪ್ರತಿಫಲ ಇದೇನಾ ಎಂದು ಹಂಗಿಸುತ್ತಾಳೆ. ಇದನ್ನು ಕೇಳಿದ ಕುಮಾರಸ್ವಾಮಿ ನನಗೆ ನಿನ್ನ ಹಂಗೆ ಬೇಡ ತೆಗದಿಕೊ ಎಂದು ಹಾಲನ್ನು ಕಕ್ಕುತ್ತಾನೆ. ಜೊತೆ ರಕ್ತವು ಹೊರಬರುತ್ತದೆ. ಹಾಲಿನ ಭಾಗವೆಲ್ಲಾ ವಿಭೂತಿಯ ಕಣಿವೆಯಾಯಿತು. ರಕ್ತದ ಭಾಗವೆಲ್ಲಾ ಜಾಜಿ ಕಣಿವೆಯಾಯಿತು ಎಂಬ ಐತಿಹ್ಯವಿದೆ. ಇಂದಿಗೂ ಅಲ್ಲಿಯ ವಿಭೂತಿ ತಿಂದರೆ ಒಳ್ಳೆಯದು ಎಂಬ ನಂಬಿಕೆ ಚಾಲ್ತಿಯಲ್ಲಿದೆ. ಕುಮಾರಸ್ವಾಮಿ ಬೆಟ್ಟದ ಮೇಲಿರುವ ಎಂಟು ಶಾಸನಗಳಲ್ಲಿ ಈ ಐತಿಹ್ಯಕ್ಕೆ ಸಂಬಂಧಿಸಿದಂತೆ ಯಾವುದೇ ಉಲ್ಲೇಖವನ್ನು ನೇರವಾಗಿ ಹೇಳುವುದಿಲ್ಲ. ಈ ಶಾಸನಗಳಲ್ಲಿ ಕೆಲವೊಂದು ಈ ದೇವಸ್ಥಾನಕ್ಕೆ ದಾನ, ದತ್ತಿ ನೀಡಿರುವುದರ ಉಲ್ಲೇಖಗಳಿವೆ.[೧೪] ಅದೇ ದೇವಾಲಯದ ಮಂಟಪದಲ್ಲಿರುವ ಶಾಸನ ರಾಷ್ಟ್ರಕೂಟವಂಶವನ್ನು[೧೫] ಪೌರಾಣಿಕವಾಗಿ ವರ್ಣಿಸುತ್ತದೆ. ಹಾಗೆಯೇ ಮುಂದುವರೆದು ಹೊಯ್ಸಳದೊರೆ ವೀರಬಲ್ಲಾಳನ ಆಜ್ಞೆಯಂತೆ ಅವನ ದಂಡನಾಯಕನಾದ ಮಹದೇವ ದಂಡನಾಯಕನು ಹಿಂದೆ ರಾಷ್ಟ್ರಕೂಟ ವಂಶದ ಕೃಷ್ಣರಾಜನು ಕುಮಾರಸ್ವಾಮಿ ದೇವರಿಗೆ ನೀಡಿದ್ದ ಕೆರೆಯಹಳ್ಳಿ ಗ್ರಾಮವನ್ನು ಪುನರ್ದತ್ತಿಯಗಿ ನೀಡುವ ವಿಷಯವನ್ನು ಒಳಗೊಂಡಿದೆ. ಆದರೆ ಕೆಲವು ಮಹಿಳೆಯರು ಇಂದಿಗೂ ಕುಮಾರಸ್ವಾಮಿ ಬೆಟ್ಟಕ್ಕೆ ಹೋದರೆ ಅಪಶಕುನವಾಗುತ್ತದೆ

ಎಂಬ ನಂಬಿಕೆಯಿಂದ ಪ್ರವೇಶವಿದ್ದರೂ ಅಲ್ಲಿಗೆ ಹೋಗಲು ನಿರಾಕರಿಸುತ್ತಾರೆ. ಜನರಲ್ಲಿ ಶಾಸನ ಉಲ್ಲೇಖಿತ ಅಂಶಗಳಿಗಿಂತ ಐತಿಹ್ಯದಲ್ಲಿರುವ ಸಂಗತಿಗಳೆ ಹೆಚ್ಚು ಪ್ರಭಾವಿಸಿವೆ ಎನ್ನುವುದನ್ನು ಇದು ಧ್ವನಿಸುತ್ತದೆ..

ಮೈಲಾರಲಿಂಗ: ಕರ್ನಾಟಕದ ಬಳ್ಳಾರಿ, ಕೊಪ್ಪಳ, ಬೀದರ್, ಹಾವೇರಿ ಮುಂತಾದ ಭಾಗಗಳಲ್ಲಿ ಮೈಲಾರಲಿಂಗನ ದೇವಸ್ಥಾನಗಳಿವೆ. ಅಲ್ಲಿ ಈ ದೈವಸಂಬಂಧಿ ಆಚರಣೆಗಳು ನಡೆದುಕೊಂಡು ಬಂದಿವೆ ಮತ್ತು ನಡೆಯುತ್ತಿವೆ. ಆದರೆ ಹಡಗಲಿ ತಾಲೂಕಿನಲ್ಲಿರುವ ಮೈಲಾರಲಿಂಗ ತುಂಬ ಪ್ರಸಿದ್ಧಿ ಪಡೆದಿದೆ. ಈ ಮೈಲಾರ ಎನ್ನುವ ಹೆಸರು ಆ ದೈವ ನೆಲೆಸಿರುವ ಸ್ಥಳ. ಈ ಕುರಿತು ಐತಿಹ್ಯವು ಹೀಗಿದೆ. ಮೈಲಾರನು ಮಣಿ ಮತ್ತು ಮಲ್ಲಾಪುರ ಎನ್ನುವ ರಾಕ್ಷಾಸರನ್ನು (ಮಣಿಯನ್ನು ಹರಪನಹಳ್ಳಿಯಲ್ಲಿ, ಮಲ್ಲಾಪುರನನ್ನು ಹಡಗಲಿಯಲ್ಲಿ) ಸಂಹಾರ ಮಾಡಿದ. ಮೈಲಾರ ಅವರನ್ನು ಸಂಹಾರ ಮಾಡಿದನೆಂದು ತಿಳಿದ ಜನರು ಆತನನ್ನು ಮಲ್ಲಯ್ಯ, ಮೈಲಾರ, ಮೈಲಾರಲಿಂಗ ಎಂಬುದಾಗಿ ಹಲವು ನಾಮಗಳಿಂದ ಕರೆಯುತ್ತಾರೆ. ಮಲೆಯ (ಪರ್ವತ)ದ ಒಡೆಯ ಎಂದು ಇದರ ಅರ್ಥ, ಪಶುಪಾಲಕ ವೃತ್ತಿಯನ್ನು ಕೈಗೊಂಡ ಮೈಲಾರಲಿಂಗನು ಬುಡಕಟ್ಟು ಜನರ ಸಾಂಸ್ಕೃತಿಕ ನಾಯಕ. ಶ್ರೇಷ್ಠ ಶಿವನ ಭಕ್ತನಾಗಿದ್ದ ಮೈಲಾರಲಿಂಗನ ಜಾತ್ರೆಯೂ ಪ್ರತಿ ವರ್ಷ ಭಾರತ ಹುಣ್ಣಿಮೆಯೆಂದು ನಡೆಯುತ್ತದೆ. ಈಗಲೂ ಹರಪನಹಳ್ಳಿಯಲ್ಲಿ ಈ ಸಂಬಂಧಿ ಆಚರಣೆಗಳು ನಡೆದ ಮೂರು ದಿನಕ್ಕೆ ಹಡಗಲಿಯಲ್ಲಿ ಮೈಲಾರನ ಆಚರಣೆಗಳು ನಡೆಯುತ್ತವೆ. ಮಣಿಯನ್ನು ಸಂಹರಿಸಿದ ಮೂರುದಿನಕ್ಕೆ ಮಲ್ಲಾರನನ್ನು ಸಂಹರಿಸಿದ್ದರ ಜ್ಞಾಪಕಾರ್ಥಕವಾಗಿ ಈ ಆಚರಣೆ ಇಂದಿಗೂ ಬೆಳೆದುಬಂದಿದೆ. ಈ ಕುರಿತು ಬೇರೆ ಬೇರೆ ಭಾಗಗಳಲ್ಲಿ ವಿಭಿನ್ನತೆಯಿಂದ ಕೂಡಿದ ಐತಿಹ್ಯಗಳಿವೆ. ಈ ಐತಿಹ್ಯಗಳಲ್ಲಿ ಹಿಂದೆ ಬ್ರಾಹ್ಮಣ ಸಮುದಾಯವು ಮಾಂಸಹಾರಿಗಳಾಗಿದ್ದು, ಯಾಗಯಜ್ಞಾದಿಗಳಿಗಾಗಿ ಪಶುಗಳನ್ನು ಬಲಿತೆಗೆದುಕೊಳ್ಳುತ್ತಿದ್ದರು. ಈ ಪರಿಣಾಮದಿಂದಾಗಿ ಬುಡಕಟ್ಟು ಸಮುದಾಯಗಳು ಶೋಷಣೆಗೆ ಒಳಗಾಗುತ್ತಿದ್ದವು. ಇದರ ವಿರುದ್ಧ ಈತನ ಹೋರಾಟವಿತ್ತೆಂದು ತಿಳಿದುಬರುತ್ತದೆ. ಈ ಮೇಲಿನ ಅಂಶವನ್ನು ಗಮನಿಸಿದಾಗ ಮೈಲಾರನು ಬುಡಕಟ್ಟು ಸಮುದಾಯದ ಅನನ್ಯತೆಯ ಭಾಗವಾಗಿ ಕಂಡುಬರುತ್ತಾನೆ. ಪ್ರತಿಯೊಂದು ಸಮುದಾಯಗಳು ಇಂದು ತಮ್ಮ ಆರಾಧ್ಯ ದೈವದ ಮೂಲಕ ತಮ್ಮನ್ನು ಗುರುತಿಸಿಕೊಳ್ಳುವುದು ಕಂಡುಬರುತ್ತದೆ. ಹೀಗೆ ಗುರುತಿಸಿಕೊಳ್ಳುವಾಗ ತಮ್ಮ ಸಮುದಾಯವು ಜಗತ್ತಿನ ಹುಟ್ಟಿವಿಕೆಗೆ ತಮ್ಮ ಸಮುದಾಯವೆ ಮೂಲವೆಂದು ಹೇಳುವ ಐತಿಹ್ಯಗಳು ಸಾಕಷ್ಟಿವೆ. ಇಂದು ಮೈಲಾರದಲ್ಲಿ ಆರು ಶಾಸನಗಳು ಮತ್ತು ಒಂದು ವೀರಗಲ್ಲು ಇದ್ದು ಮೈಲಾರಲಿಂಗನ ಚರಿತ್ರೆಯನ್ನು ಕುರಿತು ಮಾಹಿತಿಯನ್ನು ಉಲ್ಲೇಖಿಸಿಲ್ಲ. ಆದರೆ ಈ ದೇವಸ್ಥಾನದ ಉಲ್ಲೇಖವಿದೆ. ಮತ್ತು ಈ ದೇವಸ್ಥಾನಕ್ಕೆ ನೀಡಿದ ದಾನ ದತ್ತಿಯನ್ನು ಜೀರ್ಣೋದ್ಧಾರ,

ಕುರಿತು ವಿವರಿಗಳಿವೆ. ಹಾಗೆಯೇ ಮೈಲಾರಲಿಂಗ ದೇವಾಲಯದ ರಂಗಮಂಟಪದಲ್ಲಿರುವ ಶಾಸನ, ಮೈಲಾರನನ್ನು ಈ ಕೆಳಗಿನಂತೆ ಮಾಲಚೇಪತಿಯೆಂದು ಕರೆಯಲಾಗಿದೆ.

'ಣಾತು ಸ್ಟೋ ಮಾಲಚೇಪತಿರೀಸ್ವ ಮೈಲಾರೇತಿ ಪ್ರಸಿ

ದ್ಧೋಯಂ ಪಾತುವಃಶ್ಚಂದ್ರಸೇಖರಃ ಶ್ರೀ ಶ್ರೀ ಶ್ರೀ'[೧೬]

**ಬಸವಣ್ಣನವರ ಐತಿಹ್ಯ ಹೇಳುವ ಶಾಸನ**

ಬಾದಾಮಿ ತಾಲೂಕಿನ ಯಂಡಿಗೇರಿ ಗ್ರಾಮದ ಪಶ್ಚಿಮಕ್ಕೆ ಸುಮಾರು ಒಂದು ಮೈಲು ದೂರದ ಹೊಲದಲ್ಲಿರುವ ಬಸವಣ್ಣ ಗುಡಿಯಲ್ಲಿ ನಿಲ್ಲಿಸಿರುವ ಕಲ್ಲಿನ ಮೇಲಿನ ಶಾಸನದಲ್ಲಿ ಹೀಗೆ ಹೇಳಲಾಗಿದೆ ;

'೧. ಮಹಲಿಂಗ ಶ್ರೀ ॥ ಯಿದು ಬಸವಂಣನ । ... ... ... ... ...। ಕಟಿದರು

೨. ಯಿ ಬಸ್ವಂಣನೆ ॥ ದನಕ ಉಣವರ

೩. ಹಸ್ತದಲ್ಲಿ ಪುಟದಾ । ಪುಟದರೆ ಯಿವರು

೪. ಯಿಲೇಕೆ [ಆ]ದರೆಂದು ಕಾದವರ ಕಳಿದಾ ನಿರ್ವ್ವಣ

೫. ವನು ಕೇಳಿದಾ... ... ... ಬಸವನಾಗಿ ಹೋಗುತಿರ ಅಂ

೬. ದ ॥ ಹಾದಿ ಬಸನಾಗಿ ನಾಲು ಹೋಗದಿಲ್ಲ ಮುಂದೆ

೭. . . . . ಮಿ ಆಗ ಪಾವಾಡ ಮೆರಿಬೇಕೆಂದು ಬಂದಿವಿ ॥

೮. . . . . [ಎ]ಂದರೆ ಅವರ ಪಾದಾವಿಡಿದು

೯. . . . . ಪುದಿಗೊಳ್ಳಾವಾ ॥ ಪುದಿಗೊಳ್ಳಸಲ

೧೦. ಕ ॥ ಅವರ ಮನೆಯೊಳಗೆ ಪ

೧೧. ವಾಡವಾ ಮಾಡಿದರು

೧೨. ಮಾಡಿದರೆ ಅವರ ಪಾದವಿ

೧೩. ಡಿದು . . . . ಸಲ . . .

೧೪. . . . . . .ಯಿಬ್ಬರು ಕುಡಿಕೊಂ

೧೫. ಡ . . . . . । ಶ್ರೀ ಶ್ರೀ ಶ್ರೀ

೧೬. ಯೆಂಡಿಗೇರಿ ಪೋತರ

೧೭. ಯೀರಂಣ ಯೀ ಅಕ್ಷರ

೧೮. ಬರದವಾ ॥ ಶ್ರೀ ಶ್ರೀ ಶ್ರೀ'[೧೭]

ಅಂದರೆ '... ... ಶಾಸನದ ಭಾಷೆ ಶುದ್ಧವಾಗಿಲ್ಲ. ಅದರ ಸಾರಾಂಶ ಹೀಗಿದೆ. ಬಸವಣ್ಣನ ಕಟ್ಟಿದವರು ಊಟ ಮಾಡುವವರ ಹಸ್ತದಲ್ಲಿ ಹುಟ್ಟಿದವರು. ಇವರು ಇಲ್ಲೇಕೆ ಹುಟ್ಟಿದರು ಎಂದರೆ ನಾನು ಊರಬಸವನಾಗಿ ಹೋಗುತ್ತೇವೆ. ಹಾದಿ ಬಸವನಾಗಿ ಹೋಗುವುದಿಲ್ಲ ಎಂದರು. ಮುಂದಿನ ದಿನಗಳಲ್ಲಿ ಪವಾಡ ಮೆರೆಯಬೇಕೆಂದು ಬಂದಿದ್ದೀವಿ ಎಂದರು. ಪವಾಡ ಮಾಡಿದರು ಎಂದೂ ಇದೆ. ಅಲ್ಲಲ್ಲಿ ಶಾಸನ ತ್ರುಟಿತವಾಗಿರುವುದರಿಂದ ಅರ್ಥ ಸರಿಯಾಗುವುದಿಲ್ಲ'.[೧೮] ಎಂಬುದಾಗಿ ವಿವರಣೆ ನೀಡಲಾಗಿದೆ. ಇಲ್ಲಿ ಬಸವಣ್ಣನನ್ನು ಒಬ್ಬ ದೇವತೆಯಾಗಿಯೇ ನೋಡಲಾಗಿದೆ. ಆ ಬಸವಣ್ಣ ಪವಾಡವನ್ನು ಮೆರೆದ ಬಗ್ಗೆಯೂ ಉಲ್ಲೇಖ ದೊರೆಯುತ್ತದೆ. ಇದು ಚರಿತ್ರೆಯ ಪುರಾಣೀಕರಣವಾಗಿದ್ದರೂ ಜನರ ನಂಬಿಕೆಯ ನೆಲೆಯಲ್ಲಿ ಬಸವಣ್ಣ ಹೀಗೆ ಕಾಣಿಸಿಕೊಂಡಿದ್ದಾನೆ ಎನ್ನಬೇಕಾಗುತ್ತದೆ.

**ರಂಭಲದೇವಿಯ ಕುರಿತ ಐತಿಹ್ಯ ಹೇಳುವ ಶಾಸನ**

ನ ತಶೂರಂ ಚಲದಂಗ [೦]
ಗ ಮಹಿಪಂ ತತ್ಪುತ್ರಕಂ
ಬಾಸಂಭೂಪತಿಗೆ ತತ್
ಪ್ರಿಯಂ ಕಾವಣಬ್ಬರಿಸಿ
ಗಂ ಸ್ತ್ರೀ ರತ್ನಮೆಂಬನ್ನದುನ್ನ
ತಿಯಿಂ ರಂಬಲದೇವಿ ಪುಟ್ಟಿ
ಜಗದಿಂದ ರಂಭಾರುರಂಭಾಭಿಮಾರೆ
ಸತಿ ತಾಂ ಬಿಕ್ಕಲದೇವ ಪ
ತಿಯೆನಿಸಲ್ಕಂ ನೊನ್ತಳೆಲ್ಲ
ದಿಂ ॥ ಇನ್ತೆನೆ ಧಾತ್ರಿಯೊ
ಳ್ ನೆಗಳ್ದಿ ರಂಬಲದೇವಿ
ವಿಳೋಳ ನೇತ್ರವಾಕಾನ್ತೆ
ಯೆನಿಪ್ಪಿನಂ ಶ್ರುತ[ದೇ]
ಳವಾಗಿ ಬಜೆಕ್ಕೈವಾದತ[ನ್ನ]
ನ್ವ ವಿಧಾನದೊಳೆ ಜಿನಪ
ದದ್ವಯಮುಂ ನೆನೆಯುತ್ತ
ವಿಟ್ಟು ಪೂವಿಂತಳೆರ್ವ್ವೊನ್ದು ಕಂಪೆ[ನಿ]
ಸಿ ಪೊಗಿ ಸುರೋತ್ತಮೆಯಾಗಿ

ಪುಟ್ಟಿದಳ್ ॥

**ಎಡಭಾಗ**

ಅಳಿನೀಳಾಳಕಿ ಲೋಳ

ಲೋಚನೇ ಚಳದೆ ಭ್ರೂ

ಯುಗ್ಮೆ ಬಿಂಬೋಷ್ಟಿಕೆ

ಳ ಬಾಹುಯುಗೆ ತುಂಗ[ವೃ]

ತ್ತ ಕುಚೆ ರಂಭಾಭೋರು

ಸತ್ಕರ್ಣ್ಣಿಕಾರ ಲತಾಂ ತೋ

ಳ ವರ್ಣ್ಣೇ ಹಂಸಗತಿ

ರಂಭಾದೇವಿಯನ್ದನ್ದೆ ತ

ದ್ವಿಳಸದೆ ರೂಪ ಕಳಾ

ಪವಿಭ್ರಮಮಾ ನಿನ್ನೇ

ವರ್ಣ್ಣಿಪೊಂ ಬಣ್ಣಿಪಂ

ಮಿಗಿಲೆನಿಪ ಪಣ್ಡಿ

ರೆಲ್ಲೀ ಜಗದೊಳ್ ದೊರೆಯ[ಪ್ಪೊ]

ಕ್ಕಮೇನಾನುಂ ಪನ್ನಗಶಯ

ನ ವಿಪುಳ ವಕ್ಷ ಸ್ಥಗಿತ ಶ್ರೀ

ದೇವಿ ನಿನಗೆ ರಂಭಾದೇವಿ

ಶ್ರೀ ಚನ್ದ್ರಭಟ್ಟಾರಕರ ಗು

[ಡ್ಡಿ] ರಂಭಾದೇವಿ ॥

**ಹಿಂಭಾಗ**

ಸ್ವಸ್ತಿ ಸಕವರ್ಷ ೯೦೯ನೆ

ಯ ಸರ್ವ್ವಜಿತ್ಸಂವತ್ಸರದಾ

ಶ್ವಯುಜ ಬಹುಳ ಪಞ್ಚಮಿ

[ವಿ] ಸುಗತಿಯಂ ಸಾಧಿಸಿದಳ್॥[೯೯]

ಅಂದರೆ ಇಲ್ಲಿ ಚಲದಂಕಗಂಗನ ಮಗನಾದ ಬಾಸ-ಕಾವಣಬ್ಬರಸಿ ದಂಪತಿಗಳ ಮಗಳು ರಂಬಲದೇವಿಯು ಶ್ರೀಚಂದ್ರಭಟ್ಟಾರಕನ ಗುಡ್ಡಿಯಾಗಿ ಜಿನಪದವನ್ನು ನೆನಯುತ್ತ ಮರಣಿಸಿ ಸುರಲೋಕದಲ್ಲಿ ಸುರೋತ್ತಮೆಯಾಗಿ ಹುಟ್ಟಿದಳು ಎಂಬ ಉಲ್ಲೇಖ ಬರುತ್ತದೆ. ಆಕೆ ದೇವತೆಯಾದಳು ಎಂಬುದು ದೈವಮೂಲ ಐತಿಹ್ಯವಾಗುತ್ತದೆ. ಇಂತಹ ಶಾಸನೋಕ್ತ ವಿಚಾರಗಳು ಬಹಳಷ್ಟು ಕಡೆ ದೊರೆಯುತ್ತವೆ.

ಹಾವೇರಿ ಜಿಲ್ಲೆಯ ಹಿರೇಕೆರೂರ ತಾಲೂಕಿನ ಅಬಲೂರ ಶಾಸನದಲ್ಲಿ ಶರಣ ಏಕಾಂತ ರಾಮಯ್ಯನ ಕತೆಯನ್ನು ಹೇಳಲಾಗಿದೆ. ಅಬಲೂರಿನ ಸೋಮನಾಥ ದೇವಾಲಯದ ನವರಂಗದ ಎಡಪಕ್ಕದ ದ್ವಾರದ ಬಳಿ ನಿಲ್ಲಿಸಿರುವ ೧೦ಳ ಸಾಲಿನ ಈ ಶಾಸನವು ಏಕಾಂತರಾಮಯ್ಯನ ಪವಾಡವನ್ನು ತಿಳಿಸುತ್ತದೆ. ಕಾವ್ಯಾತ್ಮಕವಾಗಿ ಕಾಣಿಸಿಕೊಳ್ಳುವ ಈ ಶಾಸನವು ಜೈನ ಮತ್ತು ವೀರಶೈವ ಪರಂಪರೆಗಳ ನಡುವಿನ ಸಂಘರ್ಷದ ಕುರಿತಾಗಿಯೂ ಬೆಳಕು ಚೆಲ್ಲುತ್ತದೆ.

ಶಿವನು ತನ್ನ ಸಕಲ ಗಣಗಳೊಂದಿಗೆ 'ಸುಖಸಂಕಥಾ ವಿನೋದದಿಂದ ಇರುವಾಗ ಅಲ್ಲಿಗೆ ಆಗಮಿಸುವ ನಾರದ (ನಾರದನನ್ನು ಇಲ್ಲಿ ಗಣೇಶ್ವರ ಎಂದು ಕರೆಯಲಾಗಿದೆ) ಬಂದು ಭೂಲೋಕದ ಸಮಾಚಾರವನ್ನು ಹೇಳುತ್ತಾನೆ.

ಓಂ[॥*] ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ ತ್ರೈಳೋಕ್ಯ-ನಗರಾರಂಭಮೂಲಸ್ತಂಭಾಯ ಶಂಭವೇ ॥ ಶ್ರೀಮದ್ಗಂಗಾತರಂಗೋ-

ಚ್ಚಳಿತಜಳಕಣಶ್ರೇಣಿಪುಃಪಾಳಿಶೋಭಾಧಾಮಂ ಚಂಚಜ್ಜಟಾಪಲ್ಲವಮಮ್ರಿ-(ಮೃ)ತಕರೋದ್ಯತ್ಫಳಂ ಬಾಹುಶಾಖಾರಾಮಂ ಗೌರೀಲತಾ

ಲಿಂಗಿತಮಮರನುತಂ ಶಂಭುಕಳ್ಪದ್ರುವಾದಂ ರಾಮಂಗೀಗರ್ತ್ಥಿಯಿಂ ವಾಚ್ಛಿತಫಳಚಯಮಂ ಸಂತತೋತ್ಸಾಹದಿಂದಂ ॥ ಶ್ರೀಕಣ್ಠಂ ರಾಮ-ದೇವಂಗನುಪ್ಪ(ಪ)ಮ

ಮಹಿಮಂಗೀಗೆ ಸಂಪತ್ತನೆಂದುಂಣನಾ ನಾಕೌಕಾನೀಕಮೌಳಿಪ್ರಕರಮಣಿಗಣಶ್ರೇಣಿಶೋಣಾಂಶುಜಾಳಬ್ಯಾ ಕೀರ್ಣ್ಣಾ[೦*] ಘ್ರಿದ್ವಯಾಳಂಕೃ(ಕೃ)ತನಮರ ವರಂ ಶೀತಶೈಲೇ[೦*]ದ್ರ-

ಕನ್ಯಾಲೋಕಾಂಶುಶ್ರೀನಿವಾಸಂ ಸಕಳಗಣವ್ರಿ(ವೃ)ತಂ ವಿರಸೋಮೇಶನೀಶಂ ॥ ಚಳದುಗ್ರಗ್ರಾಹವಕ್ತ್ರಚ್ಚು (ಚ್ಯು)ತತಿಮಿನಿಕರಾತುಚ್ಛಪುಚ್ಛಾಗ್ರಘಾತುಕುಳಿತಾಂ

ಭಃಕುಂಭಿಯೂಥಪ್ರಕರಸಜಳಘೂತ್ಕಾರಹಸ್ತಾಭ್ರಿ(ಭ್ರ) ಮಾಳಾಮಿಳಿತಂ ಸುತ್ತಿ ಪ್ಪೊ(ರ್ಪ್ಪ)ದು ದ್ಯನ್ಮಣಿಕಿರಣಸ್ಫಾರಮುಕ್ತಾಂಶು ವೇಳಾಚಳಮಾಳಂ

ಭೂರಮಾಮಣ್ಡನವಿಪುಳಕಟೀದೇಶಮುದ್ರಂ ಸಮುದ್ರಂ ॥ವ॥ ಅಂತನೇಕ ಜಳಚರನಿವಾ[ಸ*]ಮುಂ ಸ[ಮು*]ತ್ತುಂಗಲಹರೀನಿವಾಸಮುಮೆನಿಸಿ ಸೊಗಯಿಸುವ

ಲವಣಸಮುದ್ರದಿಂ ಪರವ್ರಿ(ವೃ)ತವಾದ ಜಂಬೂದ್ವೀಪದ ತೆಂಕಲು ನೀಳ-ನಿಶದ (ಧ) ಹಿಮವನ್ತಪರ್ವ್ವತಂಗೊಳೊಳವಲ್ಲಿ ॥ವ್ರಿ॥ ಎಸಗುಂ ಪೂರ್ವಾಪರಾಂಭೋನಿಧಿಮಿ[ತಿ]

ವಿತತಾಯಾಮದಿಂ ಸಿದ್ಧಕನ್ಯಾವಿಸರಾನಂಗೋರು ಕೇಳೀಶ್ರಮಶಮಮ ಹಿಮಾಕಂದರಂ ಸ್ವರ್ಧುನೀವಾಃ ಪ್ರಸರೋಪಕ್ಷುಣ್ಣ ನಾನಾ [ನಗನಿ]

ಕರಗಳಧ್ಗಣ್ಡಶೈಳಾಳಿಮಾಳಾವಿಸರಂ ಪ್ರಸ್ಫಾರಶೀತದ್ಯುತಿರುಚಿನಿಚಯಭ್ರಾಜಿತಂ [ಶೀ]ತಶೈಲಂ ॥ವ। (॥) ಆ ಮಹಿಗಿ [ರೀ]ನ್ದ್ರದ ದಕ್ಷಿಣಪಾರ್ಶ್ವ[ತ್ತಿ]

ಯತ್ತಿಪ್ಪ ಭಾರತವರ್ಷದೊಳು ಕುಂತಳದೇಶವೆಂಬುದಧಿಕ ಶೋಭೆವೆತ್ತೆಸುವುದಲ್ಲಿ ॥ಕ॥ ಸೊಗಯಿಪುದಲನ್ದೆಯೆಂಬುದು ನಗರಂ ಚೆಲುವೆಸೆದು ನಾಡೆವ(ಯ)ಮ

ರಾವತಿಗಂ ಮಿಗಿಲೆನಿಸಿ ವಿಬುಧಜನದಿಂದಗಣಿತ ಧನಧಾನ್ಯಜಲಸಮ್ರಿ(ಮೃ)ದ್ಧಿಯಿನೆಂದು ॥ ಮತ್ತ ॥ ಪ್ರಕಟಿತಕಮರಾವತಿಯೊಳು ಸುಕೇಶಿಯುಂ [೦] ಮಂಜುಘೋಷೆಯುಂ ತಾಮಿರ್ಬ್ಬರ್ಸ ಕಳವಧೂತತಿಯೆಲ್ಲಂ ಸುಕೇಶಿಯರ್ಮ್ಮಂಜುಘೋಷೆಯರ್ತ್ತತ್ಪುರದೊಳ್ ॥ವ್ರಿ॥ ಅದು ನಾನಾವಿಧ ಗನ್ಧಸಾಳಿವನದಿಂ ಸರ್ವ್ವತ್ತುಕೋದ್ಯಾನನಂದನದಿಂ ಪೊರ್ನ್ನ (ರ್ಣ್ಣ) ತಟಾಕಕೂಪ ಸರಸೀಸಂನ್ದೋಹದಿಂ ಸಾರಸೋನ್ಮದಬ್ರಿ(ಭೃ)ಂಗೀಪಿಕಕೋಕಕೇಕಿಶುಕಸಂಘಾ ನೀಕಶಾಕುಂತ ನಾದದಿನೆತ್ತಂ ಗಣಿಕಾವಿನೋದಕ್ರಿ(ಕೃ)ತವೀಣಾನಾದಗರದಿಂದೊಪ್ಪಗುಂ೧ । (॥) ವ। (॥) ಅಂತಪರಿಮಿತಕೇ

ದಾರಭೂಮಿಯುಂಮಪರಾಜಳಾಶ್ರಯಾಭಿರಾಮಮುಂ ಬಹುಜನಾಕೀರ್ನ್ನ(ರ್ಣ್ಣ) ಮುಮಮೇಯ ಗಣಿಕಾನಿವಾಸಮುಮಗಣಿತವಣಿಗ್ಜನಾಶ್ರಯಮುಮಮೆನಿಸಿ ಶೋಭಾನಿವಾಸಮಾಗೆ ॥

ವ್ರಿ॥ ಅವತರಿಸಿರ್ದ್ದನಲ್ಲಿ ರಜತಾಚಳದಿಂ ಗಿರಿಜಾಸಮೇತಮುತ್ಸವದೊಳೆ ಸೋಮನಾಥನಖಿಳಾಮರಮೋ (ಮೌ)ಳಿವಿನದ್ಧರತ್ನಸಂಭವ [ಕಿ*]ರಣ ಪ್ರಭಾಪಟಲಪುಂಜಪರಾಗಪದಾ(ಬ್ಜ) ನರ್ತಿಯಿಂದ

ವನತಭಾಕ್ತಿಕಾಭಿಮತಸಿದ್ಧಿಫಳೋದಯಕಳ್ಪಭೂರುಹಂ ॥ಕ॥ ಆ ಸೋಮನಾಥಪುರ ಸವಾಸಿತರೊಳು ಬ್ರಹ್ಮಪುರಿಗಳೊಳ್ಪಿ(ಳ್ವಿ)ಪ್ರರೊಳಾ ಬ್ಯಾ(ವ್ಯಾ)ಸಶುಕವಾಮದೇವಪರಾಶರಕಪಿಳಾದಿ ಸದ್ರಿ(ದೃ)ಶನೋ ರ್ಬ್ಬನ್ನೆಗಳ್ದಂ ॥ ಕಂ ॥ ಶ್ರೀವತ್ಸಗೋತ್ರನುರ್ಬ್ಬಿ (ರ್ವ್ವೀ)ದೇವನುತಂ ನಿಖಿಳವೇದವೇದಾಂಗವಿದಂ ಪಾವನಚರಿತ್ರಗುಣಸದ್ಭಾವಂ ಪುರುಷೋತ್ತಮಂದ್ಬಿ(ದ್ವಿ)ಜೋತ್ತಮನೆನಿಪಂ ॥ ಕಂ ॥ ಆ ವಿಪ್ರನ ಸತಿ ಸೀತಾದೇವಿಗವಾ [ಸ]ತ್ಯ

ತಪನಸತಿಗಂ ಗುಣಸದ್ಭಾವದೆ ಪದ್ಮಾಂಭಿಕೆ ಸಲೆ ಪಾವನಸುಚರಿತೆ ಪತಿಹಿತಬ್ರ(ವ್ರ)ತೆಯೆನಿಪಳ್ ॥ ಆ ದಂಪತಿಗಳ್ಬಲಕಾಲವನಪತ್ಯರಾಗಿರ್ದ್ದೊಂದು ದೆವಸಂ ನಾಪುತ್ರಸ್ಯ ಲೋಕೋಸ್ತಿ ಎಂಬ ವೇದವಾಕ್ಯಮ[೦*]ತಿ

[ಳಿದು] ॥ಕ । (॥) ಪುತ್ರಾರ್ತ್ಥವಾಗಿ ಸತ್ಯಪವಿತ್ರಾಚರಣಂ ನೆಗಟ್ದ ಪುರುಷೋತ್ತಮನಾಪತ್ರಾ(ತ್ತ್ರಾ)ಣ ನೀಶನೆಂದು ಕಳತ್ರಾನ್ವಿತನಾಗಿ ಶಂಭುವಂ ಪೂಜಿಸಿದನ್ ॥ ವ [॥*] ಅಂಗನೆಮಿತ್ತ ದಿವಿಜದನುಜವ್ರಿ(ವೃ)ಂದ ವಂದಿತಪಾದಾರವಿಂದ

[ನಪ್ಪ] ಮಹೇಶ್ವರಂ ಕವಿಳಾಸರ್ಬ್ಬ(ರ್ವ)ತದ ರಮ್ಯಭೂಮಿಯೊಳು ಕೇಶವ ವಾಸವಾಬ್ಜಭವ ರೋಲಗಿಸಲಸಂಖ್ಯಾತಗಣಪರಿವ್ರಿ(ವೃ)ತನುಮಾಸಹಿತಂವ [ವೊ]ಡ್ಡೋಲಗದೊಳು ಸುಖಸಂಕಥಾ ವಿನೋದದಿಂದಮಿರೆ ನಾರದನೆಂಬ ಗಣೇಶ್ವರನಿನ್ತೆಂದ ॥ ವ್ರಿ ॥ ಓಹಿಲ ದಾಸಿ (ಸ) ಚೆಂನ ಸಿರಿಯಾಳ ಹಳಾಯುಧ ಬಾಣನುದ್ಭಟರ್ದೇಹ ದೊಳೊಂದಿಗ ಬಂದ ಮಳಯೇಶ್ವರ ಕೇಶವರಾಜರಾದಿಯಾಗೈಹಿ

ಕಸೌಖ್ಯಮಂ ಬಿಸುಟಸಂಖ್ಯಗಣಂ ನಿಜವಾದ ಭಕ್ತಿಸದ್ಗೇಹದೊಳಿಲ್ಲಿರಲು ಸಮಯಮುತ್ಕಟ ವಾದುವು(ದು) ಜೈನಬೌಧ[ದ್ಧ]ರೊಳ(ಳ್) ॥ ಎಂಬುದಂ ಮಹೇಶ್ವರಂ ದರಹಸಿತವದನಾರವಿಂ ದನಾಗಿ ವೀರಭದ್ರನಂ ನೀಂ ಮನುಷ್ಯಲೋಕದೊಳು ನಿಂನಂಶದೊಳೊರ್ಬ್ಬ(ರ್ಬ್ಬ)ನಂ ಪುಟ್ಟಿಸಿ ಪರಸಮಯಗಳಂ ನಿಯಾಮಿಸೆಂಬುದುಂ ವೀರಭದ್ರನುಂ ಪುರುಷೋ

ತ್ತಮಭಟ್ಟರ್ಗ್ಗೆ ಸ್ವಪ್ನದೊಳ್ತಾಪಸರೂಪದಿಂ ಬಂದು ಪುತ್ರಂ ಪರಸಮ ಯನಿಯಾಮಕಂ ನಿಮಗೆ ಪುಟ್ಟುಗುಮೆ [ಂ*]ದು ಮತ್ತಂಮಿಂತೆಂದ ॥ಶ್ಲೋಕ॥ ಜೈನಮಾರ್ಗ್ಗೇಷು ಯೇ ಯಾ ತಾ ಬಹವೋ ದಕ್ಷಿಣಾಪಥೇ ತೇ ದೂಷಿತಾ ಭವನ್ತು ಸರ್ವ್ವೇ ರಾಮೇಣ ತವಸೂನುನಾ ॥ವ॥ ಎನ್ದು ವ (ಪ) ರಮಪ್ರಸಾದಂ ಮಾಡಿ ಪೋಪುದುಂ ಪುರುಷೋತ್ತಮಭಟ್ಟರು

ಕ್ರಿ[ಕೃ]ತಾರ್ತ್ಥರಾಗಿ ಸಂತಸಂಬಟ್ಟು ಮಗನಂ ಪಡೆದು ಜಾತಕರ್ಮಾದಿ ಕ್ರಿಯೆಗಳಂ ಮಾಡಿ ದೇವತೊ[ದ್ದೇ]ಶದಿಂದ ರಾಮನೆಂದು ಪೆಸರನಿಟ್ಟರಾತನುಂ ತನ್ನ ದಿವ್ಯ (ವ್ಯ) ಜನ್ಮಾನುರೂಪಮಾ ಗೆ ಶಿವಯೋಗಯುಕ್ತನಾಗಿ ನಿಸ್ಪೃಹವ್ರಿ(ವೃ)ತ್ತಿಯಿಂ ಚರಿಯಿಸುತ್ತುಂ ॥ ಕಂದ ॥ ಏಕಾಗ್ರಭಕ್ತಿಯೋಗದಿನೇಕಾಕಿಯೆನಲ್ಕೆ ಸಂದು ಶಿವನಂ ಪಿರಿದಪ್ಪೇಕಾನ್ತದೊಳಾರಧಿ

ಸಿ ಯೆಕಾನ್ತದ ರಾಮನೆಂಬ ಪೆಸರ (ಂ*) ಪಡದಂ ॥ ವ್ರಿ ॥ ಸತತಂ ಸಂದು ಶಿವಾಗಮೋಕ್ತ ವಿವಿಧಕ್ಷೇತ್ರಂಗಳೊಳು ಶಾಂಭವಾಯತನಾನೇಕನದೀನದಪ್ರಕರದೊಳು ೧ಗೌರಿ(ರೀ)ವರಾಂಘ್ರಿದ್ವ೧

ಯಾಶ್ರಿತ ವಾಕ್ಕಾಯಮನೋನುಗಂ ಚರಿಯಿಸುತ್ತಂ ಬಂದು ಕಣ್ಡಂ ಸುರಾರ್ಚ್ಚಿತನಂ ದಕ್ಷಿಣಸೋಮನಾಥನನಘೌಘತ್ರಾಸಿಯಂ ಪ್ರೀತಿಯಿಂ ॥ ವ ॥ ಅನ್ತು ಬಂದನವರ

ತ ವಿನಮದಮರವರಮೌಳಿಮಣಿಕಿರಣಮಂಜರೀರಂಜಿತಾಂಘ್ರಿಯುಗ್ಮನಪ್ಪ ಹುಲಿಗೆಱೆಯ ಸೋಮನಾಥನನಾರಾಧಿಸುತ್ತಮಿಪ್ಪುದುಮಾ ಪರಮೇಸ್ವರ ಪ್ರತ್ಯಕ್ಷವಾಗಿ ॥

ಅತ್ರ ಶೋಕದ್ವಯಂ ॥ ಅಲ್ಬಲೂರು ವರಗ್ರಾಮಂ ಗತ್ವಾ ರಾಮ ಮಮಾಜ್ಞೆ(ಜ್ಞ)ಯಾ [।*] ತತ್ರ ವಾಸಂ ಕುರು ಸ್ವಸ್ಥಂ ಯಜಮಾಂಭಕ್ತಿಯೋಗತಃ ॥ ಜೈನ್ಯೈ[ಃ*]ಸಹ ವಿವಾದಂ ಚ ಶಂಕಾಂ ಹಿತ್ವಾಕು

ರುಪ್ಪಥ । ಸ್ವಶಿರೂಪಿ ಪಣಂ ಕ್ರಿ(ಕೃ) ತ್ವಾ ಪುತ್ರ ತ್ವಂ ವಿಜಯೀ ಭವ ॥ ಎಂದು ಸೋಮನಾಥ ದೇವರ್ಬೆಸಸಿದಡೇಕಾನ್ತದ ರಾಮಯ್ಯನಬ್ಬಲೂರು ಬ್ರಹ್ಮೇಶ್ವರಗ ಸ್ಥಾನುದೊಳುಂಗ ನಿಷ್ಟಿ(ಷ್ಟ) ಹವ್ರಿ(ವೃ)ತ್ತಿಯಿಂದಮಿರೆ । ಕ ॥

ಯು(ಉ)ಲಿದಡ್ಡಿಬಂದು ಜೈನರ್ಪಲರನ್ತಾ ಸಂಕಗೌಣ್ಡಸಹಿತಂ ಪಿರಿದುಂ ಚಲದಿಂ ಕೈವಾರಿಸಿದರ್ತ್ತೊಲಗದೆ ಜಿನ ದೈವನೆನ್ದು ಶಿವಸಂನಿಧಿಯೊಳು ॥ ವ ॥ ಅದಂ ಕೇಳ್ದೇಕಾನ್ತದ ರಾಮಯ್ಯಂ

ನತಿಕ್ರುದ್ಧ(ಧ)ನಾಗಿ ಶಿವಸಂನಿಧಿಯೊಳನ್ಯದೇವತಾಸ್ತವನಂ ಮಾಡಲಾಗದೆಂದಡ(ದ)ಂ ಮಾಣದೆ ನುಡಿ [ಯು*]ತ್ತಿರಲಿಂತೆಂದಂ ॥ ವ್ರಿ ॥ ಜಗಮಂ ಮಾಡುವನಾವನಾವನದನಾ

ಪತ್ಕಾ[ಲ]ದೊಳ್ ಕಾವನಿಂ ಮಿಗೆ ಕೋಪಂ ತನಗಾಗೆ ಸಂಹರಿಸಲಾವಂ ದಕ್ಷನಾ ಶಂಭು ಸರ್ವ್ವಗನಿರ್ದನ್ತೆ ಗತಪ್ರಭಾವವಿಭವಂ ಸಂಸಾರದೊಳು ಬಿದ್ದು ದಂದುಗದೊಳು ಬರ್ದ್ವು(ರ್ದ್ದು) ತಪಕ್ಕೆ (ಕೆ) ಸಾರ್ದ್ದು

ಸುಖಮಂ ಪೊರ್ದ್ದಿರ್ಪ್ಪನುಂ ದೇವನೇ ॥ಕ॥ ಹರನರ್ತ್ತಿವನೇ ನಿಂಮುರುಹಂ ಮುಂಕೊಟ್ಟಟಾ[ವು]ದಾವುದು ಮುನ[ನ್ನಂ] ಹರನೊಳ್ಪಡದರನೇ ಕರ್ವ್ವರಮಂ ಬಾಣದಿನಿಶಾಳಭಕ್ತಗಣಂಗಳು ॥ಕ॥ ಎನೆ ಜೈ

ನರೆಂಗು ನೀಂ ಮುಂನಿನ ಹಿತರರ ಹೇಳಲೇಕೆ ನಿಂನಯ ಸಿ(ಶಿ)ರಮಂ ಜನಮಱಿಯಲರಿದು ಕೊಟ್ಟಾತನೊಳಿಂ ಪಡೆ ನೀನೆ ಭಕ್ತನಾತನೆ ದೇವಂ ॥ ಕ ॥ ಎನಲೇಕಾನ್ತದ ರಾಮಂ ಮನಸಿಜರಿಪುಗಿತ್ತು ತಲೆಯ

ನಾಂ ಪಡೆದಡೆ ನೀವೆನಗೀವ ಪಣಮದೇನೆನೆ ಮುನಿದೆಂದರ್ಜ್ಜಿನನ ಕಿತ್ತು ಶಿವನಂ ನಿಲಿಪೆವು ॥ಕ॥ ಎನೆ ಕುಡುವುದೋಲೆಯಂ ನೀವೆನಗೆಂದಿತ್ತೋಲೆಗೊಂಡು ಶಿರಮಂ ತಾ ಭೋ[ಂ*]ಕೆಲನರಿದು ಕುಡುವ ಪದದೊ

ಳು ಶಿವನಂ ಸಾಂನಿಧ್ಯಮಾಡಿ ರಾಮಂ ನುಡಿಗುಂ ॥ವ್ರಿ॥ ಉಡುಗದೆ ಶಂಭು ನೀನೆ ಶರಣೆಂನದಡಂ ಮನಮನ್ಯಬಾ(ಭಾ)ವದೊಳೊಡರ್ದಮೀ ಕ್ರಿ(ಕೃ)ಪಾಣಮುಖದಿಂ ತಲೆ ಪೋಗದೆ ನಿಲ್ಕದಲ್ಲದಿ

ರ್ದ್ದಡೆ ಶಿವ ನಿಂನ ಮುಂನಡಿಗುರುಳುಗೆನುತಂ ಕಲಿ ರಾಮನಾರ್ದ್ದು ಕೆಯ್ದುಗಿಡದರಿದಿಗಕ್ಕಲುಂರಯಿಸಿದಂಗ ಶಿರಮಂ ಶಿವನಂಘ್ರಿಯುಗ್ಮದೊಳು ॥ವ್ರಿ॥ ೨ಅರೆಗಯಿಗೊಂಡನೆ೨ ಕಿತ್ತು ನೋಡಿದನೆ ಕೊರ್ಪ್ಪಂಗ

ಳುಕಿ ೩ಮೆಯಿಗಯ್ದನೆ೩ ಸೆರಗಂ ಪಾರ್ದ್ದನೆ ಬಾಳ್ಗೆ ಭಕ್ತರೆನುತಂ ಬಲ್ಲಾಳು ರಾಮಂ ಸ್ವಕಂಧರಮಂ ಚಕ್ಕನೆ ಹುಲ್ಲಕಟನರಿವಂತಕ್ಲೇಶದಿಂದಾಗಳಂ ತರಿದೀಶಾಂಘ್ರಿಯೊಳಿ[ಕ್ಕಿ ಶಂಕರ]ಗಣ[ಕ್ಕಾ]ನ[ಂ*]ದ

ವಂ ಮಾಡಿದಂ ॥ಕ॥ ಅರಿದ ತಲೆ ಏಳು ದೇವಸಂಬರೆಗಂ ಮೆಱದಿಂ ಬಳಿಕ್ಕವಿತ್ತಂ ಹರನಾದರದಿಂ ತಲೆ ಕಲೆಯಿಲ್ಲದೆ ತಿರವಾದುದು ಲೋಕವಟಿ(ಟ)ಯೆ ರಾಮ [೦*] ಪಡದಂ ॥ಕ॥ ಬೞ

ಗಾಗಿ ಜೈನರೆಲ್ಲಂ ಮುಱುಗಿ ಜಿನಪ್ರಳೆ(ಳ)ಯವೆಂಬುದಂ ಮಾಡದಿರಿಂನೆಂದೆಱಗಿ ಕಾಲ್ವಿಡಿಯೆ ಮಾಣದೆ ಬಿಜೆಸಿಡಿಲಂತೆಱಗಿ ಜಿನನ ತಲೆಯಂ ಮುಱಿದಂ ॥ವ್ರಿ॥ ಬಡಿಗೊಂಡೊರ್ಬ್ಬನೆ ಸೊಕ್ಕಿ ಬಾಳೆ

ವನಮಂ ಕಾಡಾನೆ ೪ಪೊಕ್ಕನ್ತಿರು ಕಡಗಲುಳ ಕಾಪಿನ ವೀರರಂ ತುರುಗಮಂ ಸಾಮನ್ತರಂ ತೊಳ್ದು ಮಾಮಾರ್ಪ್ಪಡೆಗಳು ಜೈನರ ಮಾರಿ ಬಂದುದೆನುತುಂಬೆ [೦*]ಗೊಟ್ಟು ಪೋಗಲು ಜಿನಂ ಕೆಡವ [ವಂ]ನಂ ಬಡಿದಲ್ಲಿ ಕೈಕೊ

ಳಿಸಿದಂ ಶ್ರೀವೀರಸೋಮೇಶನಂ ॥ವಿ॥ ಅದನೆಲ್ಲಂ ನೆಱಪೋಗಿ ಬಿಜ್ಜಣಮಹೀಪಾಳಂಗೆ ಜೈನರ್ಕ್ಕಳುರ್ಕ್ಕವದಿಂ ಪೇಳ್ದು ವಿರೋಧವಾಗಿ ಪಿರಿದುಂ ದೂಱುತ್ತಿರಲು ಕೋಪ ದುರ್ಮ್ಮದನಾ ಬಿಜ್ಜಣಭೂಭುಜಂ ಮುನಿಸಿನಿಂ

ರಾಮ್ಮೈಯನಂ ಕಂಡು ನೀನಿದನನ್ಯಾಯಮನೇಕೆ ಮಾಡಿದೆಯೆನಲ್ಕೊಟೊ[ಟ್ಟೋ]ಲೆಯಂ ತೋಱಿದಂ ॥ಕ॥ ಅವರಿತ್ತಯೋಲೆಯಿದೆ ನೀನವಧರಿ ಸುವುದಿಕ್ಕು ನಿಂನ ಭಂಡಾರದೊಳಿಂ

ನವರೊಡ್ಡವಿರಲಿಯಿನ್ನೊಡ್ಡುವುದಾರ್ಪ್ಪಡೆ ನಿಂನ ಮುನ್ದೆ ಜಿನರಂ ಪಲರಂ ॥ [ವ*] ॥ ಅನ್ತಪ್ಪಡೀ ತಲೆಯನರಿದವರ ಕೈಯೊಳೊ[ಡ್ಡು]ವೆನವರದಂ ಸುಟ್ಟಿಂ ಬಳಿಕವಾಂ ಪ[ಡು*]ವೆನೆನಗಾನೆಸಜ್ಜೆಯ ಬಸ

ದಿ[ಮು*]ಖ್ಯವಾಗಿ ಯಂನುಱುವ ಬಸದಿ ಜಿನರಂ ಬಸದಿ ಜಿನರಂ ಪಲರನೊಡ್ಡುವುದೆನೆ ಬಿಜ್ಜಣರಾಯಂ ನಾಮೀ ಕೌತುಕಮಂ ೧ನೋಡುವವೊಂದು೧ ಬಸದಿಗಳ ಪಂಡಿತರುಮಂ ಜೈನವಂ ಕರದು ನೀಮಾ(ಮ)ಪ್ಪಡೆ

ಬಸದಿಗಳಂ ಪಣಂಮಾಡಿ ಓಲೆಯಂ ಕುಡಿವೆನ್ದಡವರಾವೀ ಮುಂನೊಡದ ಬಸದಿಯಂ ದೂಱಲ್ ಬನ್ದೆವಲ್ಲದಿನೊಡ್ಡಿ ಜಿನಪ್ರಳೆ(ಳ) ಯಂ ಮಾಡಲು ಬಂದವರಲ್ಲೆ(ಲ್ಲ) ವೆನೆ ಬಿಜ್ಜಣರಾಯಂ ನಕ್ಕು ನೀವಿಂನುಸಿ

ರದೆ ಪೋಗಿ ಸುಖದಿನಿರಿವೆಂದವರಂ ಕಳಿಪಿ ರಾಮಯ್ಯ [೦*]ಗಳಿಗೆಲ್ಲರುವ ಱಯೆ ಜಂ೧ು ಪ್ರತವು೦ ಕೊಟ್ಟು (ಟ್ಟಂ) । (॥) ವ್ರಿ ॥ ಅರಿರಾಯಕ್ಷಿತಿಭ್ರಿ(ಭೃ)ಂನಗಾರಿಯರಿರಾಯಾಂಭೋಧಿಕುಂಭೋದ್ಭ

ವಂ ಅರಿರಾಯೇಂಧನತೀವ್ರ(ವ್ರ)ವಹ್ನಿ ಅರಿರಾಯಾನಂಗಭಾಳೇಕ್ಷಣಂ ಅರಿರಾಯೋಗ್ರಭುಜಂಗ ಭೂರಿಗರುಡಂ ಶ್ರೀಬಿಜ್ಜಣಂ ವೈರಿರಾಜ್ಯರಮಾಕ ರ್ಷಣದೋಲೆ (ಲಿ) ತಾಸಿ ಸುಧ್ರಿ(ಹೃ)ದಂ ಕೀರ್ತ್ಯಂಗನಾವಲ್ಲಭಂ ॥

ಚೋಳನನಿಕ್ಕ ಲಾಳನನಧಕ್ಕರಿಸಿ ಸ್ಥಿತಿಹೀನಮಾಡಿ ನೇಪಾಳನನಂದ್ರನಂ ತುಳಿದು ಗುರ್ಜ್ಜರನಂ ಸೆಱೆಯಿಟ್ಟು ಚೇದಿಭೂಪಾಳನ ಮೈಮೆಯಂ ಮುಱಿದು ವಂಗನ ಬೀಸಿ (ಸಿ) ಕಾದಿಕೊಂದು ಬಂ

ಗಾಳಕಳಿ(ಂ)ಗಮಾಗಧಪಟಸ್ವರಮಾಳವಭೂಮಿಪಾಳರಂ ಪಾಳಿಸಿದಂ ಧರಾವಳೆ (ಳ)ಯಮಂ ಕಲಿ ಬಿಜ್ಜಣರಾಯಭೂಭುಜಂ ॥ ಕ ॥ ಕೊಡದೊಳಗೆ ಪುಟ್ಟಿ ಕಡಲಂ ಕುಡಿದಂ ಘಟಯೋನಿ ಪುಟಿ [ಟ್ಟಿ] ಕಳಚುರ್ಯ್ಯ

ರೊಳೋಗಿಸದೆ ಚಳಿಕ್ಯರನ್ವಯಗಡಲಂ ಕುಡಿದುರ್ಕ್ಕು ಸಜ್ಜನಂ ಬಿಜ್ಜಣನೊಳು ॥ವ॥ ಸ್ವಸ್ತಿ ಸಮಧಿಗತಪಂಚಮಹಾಶಬ್ದ ಮಹಾಮಣ್ಡಳೇಶ್ವರಂ ಕಾಳಾ(ಳ)ಂಜರಪುರವರಾಧೀಶ್ವರಂ[*।] ಸುವರ್ನ್ನ(ರ್ಣ್ಣ) ವ್ರಿ(ವೃ)ಷ

ಭಧ್ವಜಂ । ಡಮರುಗತೂರ್ಯ್ಯನಿರ್ಘೋಷಣಂ । ಕಳಚುರ್ಯ್ಯಕುಳಕ [ಮಳ] ಮಾರ್ತ್ತ [೯*]ಣ್ಡಂ [।*] ಕದನಪ್ರಚಣ್ಡಂ । ಮೊನೆಮುಟ್ಟೆಗಣ್ಡಂ [।*] ಸುಭಟರಾದಿತ್ಯಂ । ಕಲಿಗಳಂಕುಸ(ಶ)ಂ ಗಜಸಾ

ಮನ್ತ ಶರಣಾಗತವಜ್ರಪಂಜರಂ[।*]ಪ್ರತಾಪಲಂಕೇಶ್ವರಂ [।*] ಪರನಾರೀ ಸಹೋದರಂ [।*] ಸ(ಶ) ನಿವಾರಸಿದ್ಧಿ[।*] ಗಿರಿದುರ್ಗ್ಗಮಲ್ಲಂ [।*] ಚಲದ [ಂ*]ಕ ರಾಮ[ಂ।*] ನಿಸ್ಸ(ಶ್ಯ)ಂಕಮಲ್ಲನಿತ್ಯಖಿಲನಾಮಾದಿಸ

ಮಸ್ತಪ್ರಶಸ್ತಿಸಹಿತ [ಂ*] ಶ್ರೀಮತು ಬಿಜ್ಜಣದೇವಂ ರಾಮಯ್ಯಂಗಳು ಮಾಡಿದ ಪರಮಸಾಹಸಕಂ ನಿರತಿಶಯವಪ್ಪ ಮಾಹೇಶ್ವರಭಕ್ತಿಗ[ಂ*] ಮೆಚ್ಚಿ ವೀರ ಸೋಮನಾಥದೇವರ ದೇಗುಲ

ದ ಮಾಟಕೂಟಪ್ರಾಕಾರಖಣ್ಡಸ್ಫುಟಿತಜೀರ್ನ್ನೋದ್ಧಾರಕ್ಕ ದೇವರಂಗ ಭೋಗನೈವೇದ್ಯಕ(ಕಂ)ಂ ಬನವಸೆ ೧ಎನಿಚ್ಚಾಸಿರದ೧ ಕಂಪಣೆ(ಣಂ) ಸ[ತ್ತ]ಳಿಗೆಯೆಪ[ಪ್ಪ]ತ್ತಱ ಮ[ಂ*]ನೆಯ ಚ[ಟ್ಟ]ರಸನುಮಾಕ [ಂ] ಪಣದಗ್ರಾಯಿತಪ್ರ

ಭುಗೌಣ್ಡುಗಳಂ ಮುಂದಿಟ್ಟು ಶ್ರೀಮದು ಬಿಜ್ಜನದೇವ [ಂ*] ಸತ್ತಳಿಗೆಯೆಪ್ಪತ್ತ ಱೊಳಗೆ ಮುಳಗುಂದದಿಂ ತೆಂಕಣ ಗೋವಾವೆಯೆಂಬ ಗ್ರಾಮಮಂ ಪ್ರಸಿದ್ಧಸೀಮಾಸಹಿತಂ ತ್ರಿಭೋಗಮುಮಂ

ಶ್ರೀಮದೇಕಾನ್ತದ ರಾಮೈ(ಮ)ಯ್ಯಂಗಳ ಕಾಲಂ ಕರ್ಚ್ಚಿ ಧಾರಾಪೂರ್ಬ್ಬ(ರ್ವ್ವ)ಕಂ ಮಾಡಿಕೊಟ್ಟು [ಪ್ರ]ತಿಪಾಳಿಸಿದಂ ॥ಓಂ [॥*] ಶ್ರೀನುತಕೀರ್ತಿ ವಿಕ್ರಮದೊಳೊಂದಿದ ಸೋಮಕುಳೈಕಭೂಷಣಂ ತಾನೆನಿಪೀ

ಚಳುಕ್ಯನ್ರಿ(ನೃ) ಪರನ್ವಯದೊಳು ವಸುಧಾಧಿನಾಥರಾಖ್ಯಾನಪರಾಕ್ರಮರ್ಕಳಿಯೆ ಧಾತ್ರಿಪರಾಪ್ರಿ(ಹೃ) ತೆಯಾಗೆ ತೈಲಪಂ ತಾನೆ ತಳುಕ್ಯಧಾತ್ರಿಕುಲಶೈಲನೆನಲು ಮುದದಿಂದೆ ತಾಳ್ದಿದಂ ॥

ಅಂತಾ ತೈಲಪದೇವಂಗೆ ಸತ್ಯಾಶ್ರಯದೇವನೆಂಬ ಮಗಂ ಪುಟ್ಟಿದಂ ತತ್ತನಯಂ ವಿಕ್ರಮದೇವಂ ೨ತತದನುಜಂ೨ ದಶವರ್ಮ್ಮದೇವನಾತನ ಮಗಂ ಜಯಸಿಂಗರಾಯನಾತನ ಮಗನಾಹವ

೬೪. ಮಲ್ಲನಾತನ ಮಗಂ ತ್ರಿಭುವನಮಲ್ಲಪೆರ್ಮ್ಮಾಡಿರಾಯನಾತನ ಮಗಂ ಭೂಲೋಕಮ[ಲ್ಲ] ಸೋಮೇಶ್ವರದೇವನಾತನ ಮಗ ಪ್ರತಾಪಚಕ್ರವರ್ತಿ ಜಗದೇಕಮ[ಲ್ಲ]ನಾತನ ತಂಮಂ ತ್ರೈಳೋ

ಕ್ಯಮಲ್ಲನೊರ್ಮ್ಮಡಿತೈಲಪನಾತನ ಮಗಂ ತ್ರಿಭುವನಮಲ್ಲ ಸೋಮೇಶ್ವರ ದೇವನಾತನ ಪರಾಕ್ರಮ ಪ್ರಭಾವಮೆಂತೆಂದಡೆ ॥ವ್ರಿ॥ ಕೋಡುಳ್ಳುಗ್ರ ಮದೇಭವೊಂದೆರಡೆನಿಃ[ಲ್ಕೆ]ಂಪತ್ತು ವೊಡಾಗಿರಲ್ಕೋಡಿ

ಟ್ಟಾನದೆ ತಳ್ತು ಕಾದಿ ಗೆಲ್ದಂ ಕೋಡಿಲ್ಲದೊಂದಾನೆಯಿಂ ನಾಡಂ ಬೀಡ ನಿಭಂಗಳಂ ತುರಗಮಂ ಸೋಮೇಶ್ವರಂ ಬಿಲ್ಲಮಂ ನೋಡಲ್ಕಾ ಕಳಚೂ(ಚು)ರ್ಯ್ಯವಂಶಮನದಂ ನಿರ್ಮೂಳವಂ ಮಾಡಿದಂ ॥ವ್ರಿ॥ ದ(ಧ)

ರೆ ನಿಸಾಪತ್ನವಾಗಲು ಸಿರಿ ನಿಜವಸ (ಶ)ದಿಂ ಸ[ಂ*]ದುದಾರಕ್ಕೆ ತಾನಾಗರವಾಗಲು ಕೀರ್ತ್ತಿ ದಿಕ್ಪಾಳಕನಿಕರಮುಖಾದೇಶವಾಗಲು ಜಯಾಸೌಂದರಿ ನಿಚ್ಚ[ಂ*] ತೋಳಬಾರಂ ಸಜೆವಿಡಿದಿರೆ ಸಾಮ್ರಾಜ್ಯಮಂ ತಾಳ್ದಿದಂ ದು

ರ್ದ್ಧರಶೌರ್ಯ್ಯಂ ವೀರಸೋಮೇಶ್ವರನಹಿತವಧೂನೇತ್ರನೀರೇಜಸೋಮಂ ॥ ಅನ್ಧತಮಮೆನಿಪ ಕಳಚುರ್ಯ್ಯಾಂಧುಂ ಮಸುಳಲ್ಕೆ ತಂನ ತೇಜದೆ ಧರೆಗನುಬನ್ಧಂ ತಂನೊಳೆ ಸಲೆ ಸಮ್ಮಂ ಧಿಸೆ ಚಾಳ್ (ಳು)ಕ್ಯರಾಯ ಸೋಮಂ ನೆಗಳ್ದಂ ॥ ವ ॥ ಅನ್ತಾ ತ್ರಿಭುವನಮಲ್ಲ ಸೋಮಶ್ವರದೇವಂ ಸಕಳಚಮೂನಾಥಶಿರೋಮಣಿಯುಂ ಚಾಳುಕ್ಯರಾಜ್ಯ ಪ್ರತಿಷ್ಠಾಪಕನಪ್ಪ ಕು

ಮಾರ ಬಮ್ಮೆಯಂನುಂ ತಾನು [ಂ*] ಸೆಲೆಯಹ [ಳ್ಳಿ]ಯ ಕೊಪ್ಪದೊಳು ಸುಖಸಂಖ (ಕ) ಥಾವಿನೋದದಿನಿರ್ದ್ದೊಂದು ದೇವಸಂ ಧರ್ಮ್ಮಗೋಷ್ಟಿ(ಷ್ಠಿ)ಯೊಳಿರ್ದ್ದು ಪುರಾತ ನೂತ [ನ*]ರಪ್ಪ ಶಿವಭಕ್ತರ ಗು

ಣಸ್ತವನಂ ಮಾಡುತ್ತಮಿರ್ದ್ದೇಕಾನ್ತದ ರಾಮಯ್ಯಂಗಳಬ(ಬ್ಬ)ಲೂರಲಿದ್ದಲ್ಲಿ ಜೈನರೆಲ್ಲಂ ನೆರದು ಬಂದು ಮಹಾವಿವಾದಮಂ ಮಾಡಿ ನೀ[ಂ*] ತಲೆಯ ನರಿದುಕೊಂಡು ಶಿವನ ಕೈಯೊಳ್ಪಡದೆಯಪ್ಪಡೆ ಜಿನ

ನನೊಡೆದು ಶಿವನಂ ಪ್ರತಿಷ್ಟೆ(ಷ್ಠೆ) ಮಾಡುವೆಂದೊಡ್ಡಮನೊಡ್ಡಿಯೋಲೆಯಂ [ಕೊ]ಟ್ಟಡವರು ಕೊಟ್ಟೋಲೆಯಂ ಕೊಂಡು ತಂನ ತಲೆಯನರಿದುಕೊಂಡು ಶಿವಂಗೆ ಪೂಜೆಮಾಡಿ ಬಳಿಕಾ ತಲೆಯಂ ಏಳು

ದೇವಸಕೆ ಮುನ್ನಿನನ್ತೆ ತಲೆಯಂ ಪೊ(?)ಲೆ(?) ವೀಜಿವನ್ತು ಪಡೆದು ಬಿಜ್ಜ(ಜ್ಜ)ಣದೇವನ ಕೈಯ್ಯಲು ಜಯಪತ್ರಮಂ ಪೂಜೆಸಹಿತಂ ಕೊಣ್ಡುದುಮಂ ಜಿನನನೊಡೆದು ಬಸದಿಯನಳಿದು ಬಿಸು

ಟು ನೆಲನಂ ಖ[ಂ*]ಡಿಸಿ ವೀರಸೋಮನಾಥದೇವರಂ ಪ್ರ[ತಿ]ಷ್ಠೆ ಮಾಡಿ ಶಿವಾಗಮೋಕ್ತವಾಗೆ ಪರ್ಬ್ಬ(ರ್ವ್ವ) ತಪ್ರ[ಮಾ*]ಣದ ದೇಗುಲಮಂ ತ್ರಿಕೂಟ ವಾಗೆ ಮಾಡಿಸಿದರೆಂಬುದಂ [ಕೇ]ಳ್ದು ತ್ರಿಭುವನಮಲ(ಲ್ಲ) ಸೋ

ಮೇಶ್ವರದೇವಂ ವಿಸ್ಮಯಂಬಿ(ಬ)ಟ್ಟು ನೋಡುವರ್ತ್ಥಿಯಿಂ ಬಿನ್ನವತ್ತಳೆಯಂ ಬರಯಿಸಿ ಬರಿಸಿಯವರನಿದಿರ್ಗೊ[ಳ್*]ಣ್ಡು ತನ್ನಂ ಮನೆಗೊಡಗೊಣ್ಡು ಪೋಗಿ ಪಿರಿದುಂ ಸತ್ಕಾರದಿಂ ಪೂಜಿ

ಸಿ ಶ್ರೀಮದ್ ವೀರಸೋಮನಾಥ ೧ದೇದೇ೧ವರ ದೇಗುಲ ವಾಟಕೂಟ ಪ್ರಾಕಾರಖಂಡಸ್ಫುಟಿತಜೀರ್ನ್ನೋ[ಳ್*]ದ್ಧಾರಕಂ ದೇವರ ಅಂಗಭೋಗರಂಗ ಭೋಗನೈವೇದ್ಯಕ್ಕಂ ಚೈತ್ರ

ಪವಿತ್ರವಸಂತೋತ್ಸವಾದಿ ಪರ್ವ್ವ[*]ಗಳಿಗವನ್ನದಾನ ವಿದ್ಯಾದಾನಕ್ಕ[ಂ*] ಬನವಸೆ ಪನಿಚ್ಚಾಸಿರದ ಕ[ಂ*]ಪಣಂ ನಾಗರಖಂಡವೆಪ್ಪತ(ತ್ತ)ಜೋಳಗಣಬ(ಬ್ಬ) ಲೂರನಾ ದೇವರ್ಗ್ಗೆ ವೂರಾಗ

ಲು ಬೇಳ್ಕುವೆಂದು ಪರಮಭಕ್ತಿಯಿಂದಾ ಕ[ಂ*]ಪಣ[ದ] ಮನ್ನೆಯ ಮಲ್ಲಿದೇವನಂ ಮು[ಂ*]ದಿಟ್ಟಾ ವೂರ ಮೇಲಾಳಿಕೆ ಮನ್ನೆ ಸುಂಕ ದಂಡದೋಷನಿಧ ನಿಕ್ಷೇಪಸಹಿತವಾಗಿ ಏಕಾನ್ತ

[ದ*] ರಾಮಯ್ಯ [ಂ*]ಗಳ ಕಾಲಂ ಕರ್ಚ್ಚಿ ಪೂರ್ವ್ವ ಪ್ರಸಿದ್ಧಸೀಮಾಸಹಿತಂ ತ್ರಿಭೋಗಸಹಿತಂ ಧಾರಾಪೂರ್ವಕಂ ಮಾಡಿ ಪಾರಮೇಶ್ವರದತ್ತಿಯಾಗೆ(ಗಿ) ತಾಂಬ್ರಶಾಸನಮಂ ಕೊಟಾ[ಟ್ಟಾ] ನೆಯನೇಱ(ಱ)ಸಿ ಮೆ

ಱಯಿಸಿ ಪರಮಭಕ್ತಿಯಿಂ ಪ್ರತಿಪಾಳಿಸಿದಂ [॥*] ಶ್ರೀಯಂ ದೀರ್ಗ್ಘಾ[ಯ*] ಯುವಂ ಕೀರ್ತ್ತಿಯ ನನುದಿನವುಂ ಮಾಳ್ಕೆ ಗೀರ್ವಾಣವ್ರಿ(ವೃ)ಂದಜ್ಯಾಯಂ ಶ್ರೀವೀರಸೋಮಂವಿಧ್ರಿ(ಧೃ)ತಹಿಮಕರಂ ಕಾಮದೇವಂಗುದಾರಶ್ರೀಯುಕ್ತಂ

ಗದ್ರಿಜಾಸಸ್ಮಿತಸಿತತರಾಲೋಲವಿಸ್ತಾರಲೀಲಾನೇಯಾ(ತ್ರಾ)ಳೋಕೊದ್ದ (?) ತಶ್ರೀಲಲಿತರತಿ ಕಳಾಲಾಸ್ಯಶೈಲೂಷವೇಷಂ ॥ ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಮಂ

ಡಳೇಶ್ವರಂ ಬನವಾಸೀಪುರವರಾದೀ(ಧೀ)ಶ್ವರಂ ಜಯನ್ತೀಮಧುಕೇಶ್ವರ ದೇವಲಬ್ಧವರಪ್ರಸಾದಂ ವಿದ್ವಜ(ಜ್ಜ) ನಾಹ್ಲಾದಂ ಮಯೂರವರ್ಮ್ಮ[ಕ*] ಕುಲಭೂಷಣಂ ಕಾದಂಬಕಣ್ಠೀರವಂ ಕದನಪ್ರಚಣ್ಡಂ ಸಾಹ

ಸೋತ್ತು[೦*]ಗಂ ಕಲಿಗಳಂಕುಸ(ಶ)೦ ಸತ್ಯರಾಧೇಯಂ ಶರಣಾಗತವಜ್ರ ಪಂಜರ [೦*] ಯಾಚಕಕಾಮ[ಧೇ]ನುವಿತ್ಯಖಿಳನಾಮಾವಳಿಸಹಿತನಪ್ಪ ಶ್ರೀಮನ್ಮಹಾಮಣ್ಡಳೇಶ್ವರ[೦*] ಕಾಮದೇವರಸ

ಪ್ಪಾನುಂಗಲ್ಲೈ(ಲ್ಲೈ) ನೂಱುವಂ ದುಷ್ಟನಿಗ್ರಹಶಿಷ್ಟಪ್ರತಿಪಾಳನದಿನಾಳುತ್ತ ಮಿರ್ದ್ದಬ್ಬಲೂರ ವೀರಸೋಮನಾಥದೇವರಂ ಬಂದು ಕಣ್ಣು ರಾಮಯ್ಯಂಗಳು ಶಿವಾಗವಾ(ಮ) ವಿಧಾ

ನದಿಂ ಮಾಡಿಸಿದ ಪರ್ಬ್ಬ(ರ್ವ್ವ) ತೋಪಮಾನಮಪ್ಪ ದೇಗುಲಮಂ ಕಣ್ಡವರು ಮಾಡಿದ ಸಾಹಸಮಂ ಸವಿಸ್ತರ[೦*] ಕೇಳ್ದು ಮೆಚ್ಚಿ ಪರಮಪ್ರೀತಿಯಿಂದೊಡಗೊಂಡು ಪೋಗಿ

ಪಾನುಂಗಲ್ಲ ನೆಲೆವೀಡಿಯೊಳ್ಪ್ರಧಾನರು [೦*] ತಾನುಂ ಮದುಕೆಯ ಮಂಡಳಿಂಕಸಹಿತಂ ಸುಖಸಂಕಥಾವಿನೋದದಿ [೦*] ಕುಳ್ಳಿರ್ದ್ದು ಪರಮ ಭಕ್ತಿಯಿಂ ವೀರಸೋಮನಾಥ

ದೇವರ್ಗ್ಗೆ ಪಾನು[೦*]ಗಲ್ಲೈನೂಱಱೊಳಗಣ ಕಂಪಣಂ ಹೊಸನಾಡೆಪ್ಪತ್ತಱೊಳಗೆ ಮುಣ್ಡಗೋಡೆ ಸಮೀಪದ ಜೋಗೆಸರದಿಂದ ಬಡಗಣ ಮಲ್ಲವಳ್ಳಿಯೆಂಬ ಗ್ರಾಮಮಂ ಪ್ರಸಿದ್ಧಸೀ

ಮಾಸಹಿತವಾಗಿ ತ್ರಿಭೋಗಾಭ್ಯನ್ತರಂ ನಮಸ್ಯಂಮಾಡಿಯಾ ದೇವರ ದೇಗುಲದ ಖಣ್ಡಸ್ಫುಟಿತಜೀರ್ನ್ನೋದ್ಧಾರಕಂ ದೇವರಂಗಭೋಗರಂಗ ಭೋಗನೈವೇದ್ಯ[ಕ್ಕಂ*]ಚೈತ್ರ

ಪವಿತ್ರವಸಂತೋತ್ಸವಾದಿ ಪರ್ಬ್ಬ(ರ್ವ್ವ)ಗಳ್ಗಮನ್ನದಾನಕ್ಕಂ ಯೆಂದು ರಾಮಯ್ಯಂಗಳ ಕಾಲಂ ಕರ್ಚಿ ಧಾರಾಪೂರ್ವ್ವಕಂ ಮಾಡಿ ಪರಮಭಕ್ತಿಯಿಂ ಕೊಟ್ಟು ಧರ್ಮ್ಮಮಂ ಪ್ರತಿಪಾಳಿಸಿದಂ

। (॥) ಸ್ವಸ್ತ್ಯಸ್ತು ಓಂ॥

ಇಂತೀ ಧರ್ಮ್ಮಂಗಳಂ ಪ್ರತಿಪಾಳಿಯಿಸಿದವರು ಶ್ರೀವಾರಣಾಸಿ ಪ್ರಯಾಗೆ ಕುರುಕ್ಷೇತ್ರ ಅರ್ಗ್ಘತೀರ್ತ್ಥ ಶ್ರೀಪರ್ವ್ವತಾದಿ ಪುಣ್ಯಕ್ಷೇತ್ರದಲ್ಲಿ ಸಾಯಿರ ಕವಿಲೆಗಳ ಕೋಡುಂ

ಕೊಳಗುವಂ ಹೊನ್ನೊಳ್ಕಟ್ಟಿಸಿ ಚತುರ್ವ್ವೆ[ೇ*]ದಪಾರಗರಪ್ಪ ಬ್ರಾಹ್ಮಣರ್ಗೆ ಸೂರ್ಯ್ಯಗ್ರಹಣಸೋಮಗ್ರಹ ಣಬ್ಯ(ವ್ಯ)ತೀಪಾತಸ[೦*]ಕ್ರಮಣ[ಣಾ]ಪುಣ್ಯಕಾಲ ದೊಳ್ವಿಧಿಯುಕ್ತವಾಗೆ ಕೊಟ್ಟ

ಪ(ಫ)ಲವಂ ಪಡೆವರು ಈ ಧರ್ಮ್ಮವನಳಿದವರಾ ಗಂಗೆ ವಾರಣಾಸಿ ಕುರುಕ್ಷೇತ್ರ ಪ್ರಯಾಗಾದಿ ಪುಣ್ಯಕ್ಷೇತ್ರಂಗಳೊಳಾ ಕವಿಲೆಗಳುವಂ ಬ್ರಾಹ್ಮಣರುವಂ ಕೊಂದ ಪಾಪಮಂ ಪಡೆವರೀಯರ್ತ್ಥಸಂ

ದೇಹವಿಲ್ಲೆಂಬುದಂ ಮುನ್ನಂ ಮನುವಾಕ್ಯಂಗಳು (ಳ)೦ ಪೇಳ್ದು [೦*] ॥ಶ್ಲೋಕ॥ ಬಹುಭಿರ್ವ್ವಸುಧಾ ಭುಕ್ತಾ ರಾಜಭಿಃ ಸಗರಾದಿಭಿಃ ಯಸ್ಯ ಯಸ್ಯ ಯದಾ ಭೂಮಿಸ್ತಸ್ಯ ತಸ್ಯ ತದಾ ಪ(ಫ)ಲಂ ॥ ಗಣ್ಯಂತೇ ಪಾಂವ(ಸ)ವೋ

ಭೂಮೇಗಣ್ಯಂ[೦*]ತೇ ವ್ರಿ(ವೃ)ಷ್ಟಿಬಿಂದವಃ ನ ಗಣ್ಯತೇ ವಿಧಾತ್ರಾಪಿ ಧರ್ಮಸಂರಕ್ಷಣೇ ಫಲಂ ॥ಸ್ವದ[ತ್ತಾ]ಂಪರದ[ತ್ತಾ*]ಂ ವಾಯೋ ಹರೇತ ವಸುಂಧರಾಂ । ಷಷ್ಟಿರ್ವ್ವರ್ಷಸಹಸ್ರಾಣಿ ವಿಷ್ಠಾಯಾಂ ಜಾ

ಯತೇ ಕ್ರಿಮಿಃ ॥ ಕರ್ಮಣಾ ಮನಸಾ ವಾಚಯ [ಃ*] ಸಮರ್ತ್ಥೋಽಪ್ಯುಪೇಕ್ಷತೇ । ಸಭ್ಯಾ(ಭ್ಯ)ಸ್ತಥೈವ ಚಾಂಡಾಲ [ಃ*] ಸರ್ವ್ವಧರ್ಮ್ಮಬಹಿಷ್ಕ್ರಿ(ಷ್ಕೃ)ತಃ ॥ ಕುಲಾನಿ ತಾರಯೇತ್ಕರ್ತ್ತಾ ಸಪ್ತ ಚ ಸಪ್ತ ಚ । ಅಧೋವಪಾ

ತಯೇದ್ಧರ್ತ್ತಾ ಸಪ್ತ ಸಪ್ತ ಚ ಸಪ್ತ ಚ ॥ ಶ್ಲೋಕ ॥ ಅಪಿ ಗಂಗಾದಿತೀ ರ್ತ್ಥೇಷು ಹಂತುರ್ಗಾಮಥವಾ ದ್ವಿಜಂ ನಿಷ್ಕ್ರಿ(ಷ್ಕೃ)ತಿಸಾನ್ನ[ದೇ*]ವಸ್ವಬ್ರಹ್ಮಸ್ವಹರಣ(ಣೇ) ನಿ(ನೃ)ಣಾಂ ॥ ಸಾಮಾನ್ಯೋಽಯಂ ಧರ್ಮ್ಮಸೇತು

ನ್ರಿಪಾಣಾಂ ಕಾಲೇ ಕಾಲೇ ಪಾಲನೀಯೋ ಭವದ್ಭಿಃ ಸರ್ವ್ವಾನೇತಾನು ಭಾವಿತ(ನ)ಃ ಪಾರ್ತ್ಥವೇಂದಾ ಭೂಯೋ ಭೂಯೋ ಯಾಚತೇ ರಾಮಚಂದ್ರಃ ॥ ಸ್ವಸ್ತ್ಯಸ್ತು ಮಂಗಳಂ ಚ । ಶ್ರೀಶ್ಚ ॥ ಓಂ

ಓಂ [॥*] ಹರನೊಳ್ತವಧಿಯಂ ತಾಂ ದರವುರವಿಲೆನಿಸಿ ಪಡೆದು ದೇಗುಲವಂ ಪುರಹರನ ಕೈಳಾಸದಂತಿರೆ ವಿರಚಿಸಿದಂ ಶಂಭುಭಕ್ತಿಧಾಮಂ ರಾಮಂ ॥ ವ್ರಿ ॥ ದೇಗುಲಕ್ಕೆಂದು ಭಕ್ತ ಜನವಾದರನ್ದಿದಿರೆರ್ದ್ದ ಕೂಟ(ಟ್ಟ)ಡ(ದ)ಂ ಹಾಗವನಾದಡಂ ಕಳದುಕೊಳ್ಳದೆ ಬೇಡದೆ ನಾಡೆ ದ್ವೆ(ದೈ)ನ್ಯದಿಂದ ಪೋಗಿ ನ್ರಿ(ನೃ)ಪಾಳರಂ ಶಿವನನು ಗ್ರಹವಕ್ಷಯವಾಗೆ ಮಾಡಿದಂ ದೇಗಲು [ವ]ಂ ಹರಾ[ದ್ರಿ]ಗೆ[ಣೆ]

ಯಾಗಿರೆ ರಾಮನಿರ್ದೆ ಕ್ರಿ(ಕೃ)ತಾರ್ತ್ಥನೋ ॥ಕ॥ ಕೇಶವರಾಜಚಮೂಪಂ ಶಾಸನವಂ ಪೇಳ್ದ ನಂತದಂ ತಿರ್ದ್ದಿ ನಿರಾಯಾಸನೆ ಬರದನೀಶನ ದಾಸಂ ಶಿವಚರಣಕಮಳಶರಣಂ ಸರಣಂ ॥ಓಂ॥ [॥*]

ಸ್ವಸ್ತಿ ಶ್ರೀ ಮತ್ತು ಹರಧರಣಿಪ್ರಸೂತ ಮುಕ್ಕಂಣಕಾದಂಬ[ವಂಶ*] ರುಂಬನ [ವಾ][ಸೀ] ಪುರವರಾಧೀಶ್ವರರುಂ ಶ್ರೀಮದು(ಧು)ಕನಾಥದೇವರದಿಬ್ಬ(ವ್ಯ)ಶ್ರೀಪಾದ

ಪದ್ಮಾರಧಕರು ॥ ಮಲಿ (ಲ್ಲಿ) ದೇವರಾಯರುಂ ॥ ನಾಗರಖ [೦*]ಡೆಯ ................ರಿಗೆ ನಾಡುಮಂ................

............... ಕೊಟ್ಟರು. ॥'[೨೦]

ಅಂದರೆ ಏಕಾಂತ ರಾಮಯ್ಯನ ಜನನಕ್ಕೆ ಕೂಡ ಪೌರಾಣಿಕವಾದ ಕಾರಣವಿದೆ ಎಂಬುದನ್ನು ಇಲ್ಲಿ ಹೇಳಲಾಗಿದೆ. ಹರಿಹರನ ರಗಳೆಯಲ್ಲಿಯೂ ಕಥಾನಕ ಹೀಗೆಯೇ ಬಿಚ್ಚಿಕೊಳ್ಳುತ್ತದೆ. ಭೂಲೋಕದಲ್ಲಿ ಎಲ್ಲರೂ ಸೌಖ್ಯದಿಂದ ಇದ್ದಾರೆ. ಆದರೆ ಜೈನ ಮತ್ತು ಬೌದ್ಧರ ಉಪಟಳ ಹೆಚ್ಚಾಗಿದೆ ಎನ್ನುತ್ತಾನೆ

ನಾರದ. ಆಗ ಶಿವನು ಜೈನ–ಬೌದ್ಧರನ್ನು ಸದೆಬಡೆಯಲು ಅಲ್ಲೇ ನಿಂತಿದ್ದ ವೀರಭದ್ರನಿಗೆ ಆಜ್ಞಾಪಿಸುವುದೇನೆಂದರೆ ಭೂಲೋಕದಲ್ಲಿ ತನ್ನ ಒಂದು ಅಂಶವನ್ನು ಕಳುಹಿಸಿಬೇಕು. ಅದೇ ಸಮಯದಲ್ಲಿ ಮಕ್ಕಳಿಲ್ಲದ ಕೊರಗಿನಲ್ಲಿದ್ದ ಏಕಾಂತ ರಾಮಯ್ಯನ ತಂದೆ–ತಾಯಿಗಳ ಕನಸಿನಲ್ಲಿ ಕಾಣಿಸಿಕೊಂಡು ತನ್ನ ಒಂದು ಅಂಶ ನಿಮ್ಮ ಉದರದಲ್ಲಿ ಹುಟ್ಟಿ ಬರುತ್ತದೆ ಎಂದು ಹೇಳುತ್ತಾನೆ. ಆನಂತರ ಏಕಾಂತ ರಾಮಯ್ಯ ಹುಟ್ಟಬರುತ್ತಾನೆ. ಇತಿಹಾಸದ ವ್ಯಕ್ತಿಯೊಬ್ಬನ್ನು ದೈವತ್ವಕ್ಕೇರಿಸಿರುವ ಈ ಸಂಗತಿಯು ಐತಿಹ್ಯದ ದೃಷ್ಟಿಯಿಂದ ತುಂಬ ಮಹತ್ವದ್ದು.

ರಾಮಯ್ಯ ಬೆಳೆದು ದೊಡ್ಡವನಾಗಿ ದೊಡ್ಡ ಶಿವಭಕ್ತನಾಗುತ್ತಾನೆ. ಶಿವಾಗಮೋಕ್ತ ತೀರ್ಥಕ್ಷೇತ್ರಗಳ ಪರ್ಯಟನೆ ಮಾಡುತ್ತ ಪುಲಿಗೆರೆಗೆ ಬರುತ್ತಾನೆ. ಅಲ್ಲಿ ಸಾಕ್ಷಾತ ಶಿವನೇ ಆತನಿಗೆ ದರ್ಶನ ನೀಡಿ ಅಬಲೂರಿಗೆ ಹೋಗಿ ಜೈನರಲ್ಲಿ ಕಲಹ ಉಂಟಾದರೆ ಅಳುಕದೇ ತಲೆಯನ್ನು ಪಣಕ್ಕೆ ಇಟ್ಟು ಜಯಶಾಲಿಯಾಗು ಎನ್ನುತ್ತಾನೆ.[೨೧]

ಆನಂತರ ಅಬಲೂರಿನಲ್ಲಿ ಜೈನರಿಗೂ ರಾಮಯ್ಯನಿಗೂ ವಿವಾದ ಏಳುತ್ತದೆ. ಜಿನನೇ ಶ್ರೇಷ್ಠ ಎಂದು ಜೈನರೂ ಶಿವನೇ ಶ್ರೇಷ್ಠ ಎಂದು ರಾಮಯ್ಯನೂ ವಾದ ಮಾಡುತ್ತಾರೆ. ಕೊನೆಗೆ ತಲೆಯನ್ನು ಕಡಿದುಕೊಂಡು ಬಿಡು ; ಆ ಶಿವನಿಂದ ಅದನ್ನು ಮರಳಿ ಪಡೆದರೆ ನಿಜವಾದ ಭಕ್ತ ಎನ್ನುತ್ತಾರಲ್ಲದೆ ಶಿವನನ್ನೇ ದೇವರು ಎಂದು ಒಪ್ಪುವುದಾಗಿಯೂ ಜಿನನನ್ನು ಕಿತ್ತೆಸೆದು ಶಿವನನ್ನು ಸ್ಥಾಪಿಸುವುದಾಗಿಯೂ ಜೈನರು ಸವಾಲು ಹಾಕುತ್ತಾರೆ. ರಾಮಯ್ಯ ಸವಾಲನ್ನು ಸ್ವೀಕರಿಸಿ ತನ್ನ ತಲೆಯನ್ನು ಯಾವ ಅಳುಕೂ ಇಲ್ಲದೆ ಕತ್ತರಿಸಿಕೊಳ್ಳುತ್ತಾನೆ. ಏಳು ದಿನಗಳ ಬಳಿಕ ಆ ತಲೆ ರಾಮಯ್ಯನ ಶರೀರಕ್ಕೆ ಬಂದು ಸೇರುತ್ತದೆ.

ಇಡೀ ಶಾಸನವು ಏಕಾಂತ ರಾಮಯ್ಯನ ವ್ಯಕ್ತಿತ್ವ, ಮಹಿಮೆ ಮತ್ತು ಪವಾಡಗಳನ್ನು ಕುರಿತು ಹೇಳುತ್ತ ಹೋಗುತ್ತದೆ. ಇದೊಂದು ರೀತಿಯಲ್ಲಿ ಶರಣನೊಬ್ಬನ ಜೀವನದ ಪೌರಾಣಿಕರಣ ಎಂದು ಎನಿಸಿದರೂ ಶಾಸನಕಾರರಲ್ಲಿ ಆ ಭಾವನೆ ಇತ್ತೆಂದು ಹೇಳಲಾಗದು.

**೨. ಸ್ಥಳ ಪ್ರಧಾನ ಐತಿಹ್ಯಗಳು :** ಪ್ರಾಚೀನ ಕಾಲದ ಜನವಸತಿ ಪ್ರದೇಶಗಳಲ್ಲಿ ಕೆಲವು ಸ್ಥಳಗಳು ಜನರ ಕುತೂಹಲಕ್ಕೆ ಕಾರಣವಾಗುತ್ತವೆ. ಈ ಕುತೂಹಲದ ಕಾರಣವಾಗಿಯೇ ಆ ಸ್ಥಳದ ಬಗ್ಗೆ ಕೆಲವು ಐತಿಹ್ಯಗಳು ಹುಟ್ಟಿಕೊಳ್ಳುತ್ತವೆ. ಗುಡ್ಡ, ಬೆಟ್ಟ, ಕಾಡು, ಬಯಲು ಮೊದಲಾದ ಕಡೆ ಇಂತಹ ಐತಿಹ್ಯಗಳು ಕಾಣಿಸಿಕೊಳ್ಳುತ್ತವೆ. ಕೆಲವು ಪ್ರದೇಶಗಳು ಪೌರಾಣಿಕ ವ್ಯಕ್ತಿಗಳ ಆವಾಸಸ್ಥಾನಗಳಾಗಿದ್ದವು ಅಥವಾ ಕೆಲವು ಕಾಲ ಪೌರಾಣಿಕ ವ್ಯಕ್ತಿಗಳು ಆ ಸ್ಥಳದಲ್ಲಿ ಇದ್ದರು ಅಥವಾ ಆ ಸ್ಥಳದಲ್ಲಿ ಹಾಯ್ದು ಹೋಗಿದ್ದರು ಎನ್ನುವ ಐತಿಹ್ಯಗಳು ಸಾಮಾನ್ಯವಾಗಿ ಪ್ರತಿಯೊಂದು ಊರಿನಲ್ಲಿಯೂ ಕಂಡುಬರುತ್ತವೆ. ಕೆಲವು ಸ್ಥಳಗಳು ಒಳ್ಳೆಯ, ಕೆಟ್ಟ ಎಂಬ ವಿಚಾರಗಳೂ ಕೂಡ

ಸ್ಥಳ ಪ್ರಧಾನ ಐತಿಹ್ಯಗಳು ಬೆಳೆದು ಬರಲು ಕಾರಣವಾಗುತ್ತವೆ. ಸ್ಥಳದ ಮಹಾತ್ಮೆಯನ್ನು ಬಿಂಬಿಸಲು ಕೂಡ ಇಂತಹ ಐತಿಹ್ಯಗಳು ಜನ್ಮ ಪಡೆದುಕೊಂಡಿರುತ್ತವೆ. ಇಂಥವುಗಳನ್ನು ಸ್ಥಳ ಪುರಾಣಗಳು ಎಂದು ಕೂಡ ಕರೆಯಲಾಗುತ್ತದೆ.

'ಎಲ್ಲಾ ಸ್ಥಳ ಪುರಾಣಗಳೂ ಸ್ಥಳನಾಮಕ್ಕೆ ಕಾರಣವಾದ ವಿವರಣೆಯನ್ನೊಳಗೊಂಡಿರುವುದಿಲ್ಲ. ಕೆಲವು ಆಯಾ ಸ್ಥಳದ ವೈಶಿಷ್ಟ್ಯಗಳನ್ನಷ್ಟೆ ಒಳಗೊಂಡಿರುತ್ತವೆ. ಇಂದು ದೇವಾಲಯಗಳಿಗಿರುವ ಹೆಚ್ಚಿನ ಕ್ಷೇತ್ರಗಳೂ ಒಂದಲ್ಲದಿದ್ದರೊಂದು ಪುರಾಣ (ಮಹಾತ್ಮೆ) ಇದ್ದೇ ಇರುತ್ತವೆ. ಇಂತಹ ಪುರಾಣಗಳು ಆಯಾ ಕ್ಷೇತ್ರಗಳ ದೈವ ದೇವರುಗಳ ಕಾರಣಿಕವನ್ನು ವಿವರಿಸುತ್ತವೆ. ಇವೆಲ್ಲಾ ಸಂಭಾವ್ಯವೋ? ಅಲ್ಲವೋ? ಎಂಬುದರ ಇತ್ಯರ್ಥ ಕಷ್ಟವೆನಿಸುವ ಮಟ್ಟಿಗೆ ಜನರಿಗೆ ಅವುಗಳ ಮೇಲೆ ನಂಬಿಕೆ ಬೇರೂರಿ ಬಿಟ್ಟಿರುತ್ತದೆ. ವೈಜ್ಞಾನಿಕವಾಗಿ ಇಂಥ ಘಟನೆಗಳನ್ನು ಪುರಾವೆಗಳೊಂದಿಗೆ ಸಂಭಾವ್ಯವೆಂದು ಸಾಬೀತುಪಡಿಸುವುದು ಕಷ್ಟಸಾಧ್ಯ'[೨೨] ಎನ್ನುವ ಮಾತುಗಳನ್ನು ಕೂಡ ಇಲ್ಲಿ ಲಕ್ಷ್ಯಿಸಬೇಕಾಗುತ್ತದೆ.

ಆನೆಗೊಂದಿ-ಮುನಿರಾಬಾದು ರಸ್ತೆಯಲ್ಲಿ ಒಂಟಿಬಾಗಿಲಿನ ಬಳಿ ಇರುವ ಶಾಸನ

'... ... ... ತ್ರಿಪೂರಾರಿದವ್ವೆಯ
ಗ್ಗಾಳ ಕುಮಾರ ಆನಂದ ಸಿದ್ಧದೇವನ ಭಕ್ತಿಗೆ ಯಿಷ್ಟ
ಲಿಂಗ ಬಂದು ಪೂಜೆಗೊಂಬ ಸಿಮ[ವ]ನುಂ ಸುದ್ದಾ
ತ್ಮ ಮಂತ್ರ ಪುಷ್ಪದಿಸದೆಂ ಪೂಜಿಪ ಪ್ರಸಂನ ಸಿದ್ಧ
ನ ಅತಿಸಯದಿಂದಂ//'[೨೩]

ಆನೆಗೊಂದಿ-ಮುನಿರಾಬಾದು ರಸ್ತೆಯಲ್ಲಿ ಒಂಟಿಬಾಗಿಲಿನ ಬಳಿಯ ಕಣಿವೆಯಲ್ಲಿನ ದೊಡ್ಡ ಗುಂಡಿನ ಮೇಲೆ ಬರೆದಿರುವ ಈ ಶಾಸನವು ತ್ರಿಪುರಾರಿದವ್ವೆಯ ಮಗ ಸಿದ್ಧದೇವನ ಭಕ್ತಿಗೆ ಮೆಚ್ಚಿ ಸ್ವತಃ ಶಿವನೇ ಇಷ್ಟಲಿಂಗ ರೂಪದಲ್ಲಿ ಕಾಣಿಸಿಕೊಂಡು ಪೂಜೆಗೊಂಡ ಎಂಬ ವಿಚಾರವಿದೆ. ಹೀಗಾಗಿ ಆ ಸ್ಥಳದಲ್ಲಿ ಸಿದ್ಧದೇವ ಅಥವಾ ಸಿದ್ಧೇಶ್ವರ ಎಂಬ ದೇವತೆ ಪ್ರಾಮುಖ್ಯತೆ ಗಳಿಸಿದ್ದಾನೆ ಎಂಬುದನ್ನು ಜನ ಹೇಳುತ್ತಾರೆ. ಶಿವನೇ ಸ್ವತಃ ಬರುವುದು ಮತ್ತು ಆ ಸ್ಥಳದಲ್ಲಿ ನೆಲೆ ನಿಲ್ಲುವುದು ಸ್ಥಳ ಐತಿಹ್ಯದ ದೃಷ್ಟಿಯಿಂದ ಮಹತ್ವ ಪಡೆದುಕೊಳ್ಳುತ್ತದೆ. ಇಲ್ಲಿ ಇದನ್ನು ಒಂದು ನಂಬಿಕೆಯನ್ನಾಗಿ ನೋಡಿಕೊಂಡು ಬರಲಾಗಿದೆ. ಇಲ್ಲಿ ಕಾರಣಗಳನ್ನು ಹುಡುಕಿಕೊಂಡು ಹೋದರೆ ಕೆಲವು ಸಲ ನಿರಾಸೆ ಕಾಡಬಹುದು ; ಜನರ ನಂಬಿಕೆಗೆ ಧಕ್ಕೆ ಆಗಬಹುದು. ಹೀಗಾಗಿ ಇಲ್ಲಿ ಸತ್ಯಾಸತ್ಯತೆಗಳನ್ನು ಒರೆಗಲ್ಲಿಗೆ ಹಚ್ಚುವುದು ಸರಿಯಲ್ಲ ಎನಿಸುತ್ತದೆ.

ಹಂಪಿಯ ಶಾಸನದಲ್ಲಿಯೂ ಕೂಡ ಮಲ್ಲಿಕಾರ್ಜುನ ದೇವರ ಪುಣ್ಯಕ್ಷೇತ್ರವನ್ನು ಕುರಿತಾದ ವಿವರಣೆ ಬರುತ್ತದೆ ;

'ಪಾತಾಳಗಂಗೆ ಗಉರಿಯ ಗಂಡ ಸಿರಿಸೆಳಲಿಂಗ ರಾತ್ರಿಯಲ್ಲಿ
ಗಂಟೆಯ ಬೇಂಟೆನಾಯಕ ಬಂದು ನಳಲಹುಣಿಸೆಯ ಗಿರಿಯ ಪಡೆಯ ಕೆ
ಳಗೆರೆಯಲ್ಲಿ ... ಡದು ಮೂಡಿ ಗುಡ್ಡದ ಮಾಇವೆ ಯೋಗದಂಡ
ದನವ ಗಂಟೆಯ ಜಂಗಮ ಭೈಇರವಮೂರ್ತಿ ಅಯ್ಯನ ಸಪನಕ್ಕೆ
ಹೋಗಿ ಹೇಳಿಡದೆ ಕ್ಷೇತ್ರವ ವಿರಚಿಸಿದ ಹೂವಿಗನು ಶ್ರೀ ಶ್ರೀ ಶ್ರೀ//'[೨೪]

ಇಲ್ಲಿ ಬಂದಿರುವ ವಿಷಯವೆಂದರೆ ನೆಳಲಹುಣಸೆ ಗಿರಿಯ ಗವಿಯ ಕಲ್ಲಿನಲ್ಲಿ ಪಾತಾಳಗಂಗೆ ಮತ್ತು ಗೌರಿಯ ಗಂಡನಾದ ಮಲ್ಲಿಕಾರ್ಜುನನು ಉದ್ಭವಮೂರ್ತಿಯಾಗಿ ಕಾಣಿಸಿಕೊಂಡ. ಇದನ್ನು ಕೇಳಿದ ಹೂವಿಗನು ಆ ಸ್ಥಳವನ್ನು ಪುಣ್ಯಕ್ಷೇತ್ರವನ್ನಾಗಿ ಮಾಡಿದನೆಂಬ ಉಲ್ಲೇಖ ಬರುತ್ತದೆ. ಈ ಪರಿಸರ ಪ್ರಸಿದ್ಧಿಯಾಗಿದ್ದಕ್ಕೆ ಮಲ್ಲಿಕಾರ್ಜುನ ಇಂತಹ ಐತಿಹ್ಯಗಳೇ ಕಾರಣ ಎನ್ನಬೇಕಾಗುತ್ತದೆ.

ಕುರುಗೋಡಿನ ೧೧೭೩ರ ಶಾಸನದಲ್ಲಿ ಪ್ರಸ್ತಾಪವಾಗಿರುವ ವಿಷಯ ತುಂಬ ಪರಿಣಾಮಕಾರಿಯಾಗಿ ಸ್ಥಳ ಮಹಾತ್ಮೆಯನ್ನು ಕಟ್ಟಿಕೊಡುತ್ತದೆ. ಅದು ಇಂತಿದೆ ;

'ದೇವರೊಂದುದಿವಸಂ ಪ್ರತ್ಯಕ್ಷದಿಂ ಬೆ(ಬ)ರ್ಪ್ಪುಧು(ದು)ಂ //ವ// ಆಗಳ್ ನಂದಿನಾಥ ನಂದಿ ಮಹಾಕಾಟ(ಳ) ವೀರಭದ್ರ ಪ್ರಮುಖಪ್ರಮಥಯೂಥ ಸಮೇತನುಂ ಹರಿವಿರಂಚಿ ಸುರಾಸುರೊರಗಾದಿ ಪ್ರಸಿದ್ಧಾ

ಮರ ಗಣ ಸೇವಿತನುಮೆನಿಸಿ ಪಾರ್ವ್ವತೀಪತಿ ಬಂದವತರಿಸಿ ನಿಂದಿರಲ್ ರಾಚಮಲ್ಲರಸಂ ಭೋಂಕನೆ ಕಂಡು ಪೊಡವಟ್ಟಾನಂದದಿಂ ಕರಕಮಳಮುಕುಳಿತನಾಗಿರಲ್ ಹರ[ಂ] ದರಹಸಿತವದನಾರವಿಂದಂ ಕೈಲಾಸಾವ

ಳೋಕನಾರ್ಥವಭಯ ಹಸ್ತಾವಳಂಬಕನಾಗೆ ಮಹಾಪ್ರಸಾದಮೆಂದು ಮಹಾವಿಭೂತಿಯಿಂ ಗಣಾಡಂಬರವಂ ಮಾಡಿ ಶಿವಾರ್ಚನೆಯನಾಡಿ //ವೃ// ಧರೆಗಿಂತತತ್ಯಂತಚೋದ್ಯಾವಹಮೆನೆ ಶಿವಲಿಂಗಾರ್ಚನಂ ಮಾಡಿ

ಪೃಥ್ವೀಭರ ರಾಜ್ಯಶ್ರೀಯುಮಂ ಸಂತತಿಗೆ ನಿಲಿಸಿದಂ ರಾಚಮಲ್ಲಂ ಶರೀರಂ ಬೆರೆಸುತ್ತುಂಗಾಶ್ವ ಚಂಚಚ್ಚಾಮರರುಹೆ(ಹ) ಶಿ(ಸಿ)ತ ಛತ್ರಚಿಹ್ನಾನ್ವಿತಂ ಶಂಕರನೊಳ್ ಸಾಲೋಕ್ಯಮಂ ಪೂರ್ದ್ದಿಯುಮವಂಗೆ ಸಾಯು

ಜ್ಯದಿಂ ಲಿಂಗವಾಡೆ// ಅಂತು ಕುಱುಗೋಡ ಪಟ್ಟಣದ ಶ್ರೀಸ್ವಯಂಭುದೇವರ ಪಶ್ಚಿಮಾಭಿಮುಖದೊಳು ಬಂದು ನಿಂದು ಸಕಳ ಲೋಕಕ್ಕೆ ಕೌತುಕವಾಗಿ ಲಿಂಗಮೂರ್ತಿಯಿಂದುದ್ಭವಿಸಲು ಶ್ರೀ

ಶ್ರೀಮದುದ್ಭವರಾಚಮಲ್ಲೇಶ್ವರಾಯ [ನಮಃ॥ *] ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ।
ತ್ರೈಳೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ॥
ಶ್ರೀಮತ ಶೈಲೇಂದ್ರಪುತ್ರೀಪತಿ ನಮಗಭಿವಾಂಚಾ೯ಮಂ ಮಾಳ್ಕೆ ತೇಜಸ್ತೋಮ ಪ್ರಸ್ತುತ್ಯ ನಿತ್ಯೋದ್ಭವವೆಸರ್ವೆಸವೀ ರಾಚಮಲ್ಲೇಶ್ವರಾ
Rಽ್ಯೋದಾಮಂ ನಿ™ಮನಾಮಂಸ್ತುವದSಳ ಲಸತಾಮನಾತಾಭಿರಾಮಮಂಭೀಮಂ ಜೂkಾಗ್ರಸೋಮಂ ವಿನುತಜನ ಮನಃ ಪ್ರೇನುಧ್ರಿಗುಲಲಾಮಂ ॥ ಜಳಕಲ್ಲೋಳಾ ́ಬಾ_ಾ ಯುಗಳ । ವೆಸವಿ 'ವ( ಕೊರ್ಮ೯ಂ ಪದಂ । ಬಾಳಮಿಂ ಕs । ಪೊಳೆವಮುಕ್ತಾಫಳಂ ಪಲ। ಕು ́ರಮೆ ನಖ । ವಾ ಕಂಬು ಕಂಠಂ । ಸುನೀಳಂವಿಳಸತ್ಕೇಶಾವಕಾಶಂ । ತೊಳಸುವ ಪವಳಂ ಬಾಯ । ಕರಂ
ಪದರಾಗಂ ತಳಮಾಗಲ । rೇd ರತಾಕರನವೆ‡ಲೆಸಗಂ ರಾಜಚಂದ್ರಸಮುದ್ರಂ ॥
ಅಂತೆನಿ™ಙ ಗಂಭೀರರ ರತಾಕರನಿಂ ಪhವಿಠವಾದ ಜಂಭೂದ್ವೀಪದ ಭರತಕೇತ್ರದೊಳು ಕುಂತಳ ವಿ'ಗಯಮುಂಟಲ್ಲಿ । ಸ್ವ™ಸಮಸ್ತಭುವನಾಶ್ರಯಂ ಶ್ರೀಪೃಥ್ವಿವಲ್ಲಭಂ ಮ_ಾರಾಣಾಧಿರಾಜಂ ಪರಮೇಶ್ವರಂ ಪರಮಭkಾರಕಂ ಸತ್ಯಾಶ್ರಯ ಕುಱ'ಳ( ತಿಳಕಂ ಚಾಳುಕ್ಯಾಭರಣಂ ಶ್ರೀಮತಿಭುವನಮಲ್ಲ ವೀರಸೋಮೇಶ್ವರದೇವನ ರಾಜ್ಯಮುತ್ತರೋತ್ತರವಾಗುತ್ತಿರಲಿತ್ತಲ ॥ವ॥
ಅಸ್ತೆನಿ™ರ್ಙ ಭಾರತಮ ̆ೀಮ ̆ಳಾ ಮ_ನೀಯ ಭಾಳದೊಳು ಕಂತಳ
'ದನ್ತೆ( ಶೋಭಿಸುವ ಕುಂತಳಭೂತಳಭಾಮೆಗೋವಗಂ ಕಾಂತಮುRಾಂತದೊ ́ pದ ಕಂಠp ನಯನಮೆ ಚೆನನಾಗಿವೆ‡ರನ್ತಿರೆ ಬಲ್ಲಕುಂದೆನಾಡುನಾಳ್ಕರಮೊಪುಗುಮೆತ್ತ ನೋಳ್ಪೊಡಂ ॥ವ॥ ಅನ್ತಾನಾ
ಡ ನಡುವೆ ರಾಜದ್ರಾಜನಗರ ರಮಣ ̆ ರಮಣ ̆ಯಮಣದರ್ಪsಾಯಮಾನಮೆನಿಸೆ ಭರ್ಗಾದ್ರಿಯಂತಾರ್ಗ ವheದುರ್ಗಮಮಾದ ಕುಱುಗೋಡಗಿhದುರ್ಗದಪೊಱವೆ‡ಳಲ ವಿಳಾಸಮೆಂತೆಂದಡೆ ॥ ಕಂ ॥
ನಾರದನತೊಱದೆ ಸರದಿಂತಾರಾಪvದಂತೆ ರಾಜ_ಂಸಾನ್ವಿತದಿಂ Pೀರಾಬಿಶಯನನುರದವೆ‡ಲಾರಮೆ ಯಿನ್ತುಱುಗಿ ಪೊಱವೆ‡ಳಲು ಸಾ'ಸೊ(ಗಯಿಸುಗುಂ ॥
ಮತ್ತಮಾ ಪುರಾಂತರದ್ಭಾಗಮೆಂತೆ
[ಂದಡೆ ॥ ವ॥] ॥ ಭರದಿಂದೌರ್ವ್ವಾನಲಂ ತಂನೊಳಗಣಜಲಮಂϵರ್ವ್ವೆನೆಂದಬಿನಾvಂ ϵhದೊಂದಾಶಂಕೆಯಿಂದೀ ಪುರದೊಳೆ ನವರತಂಗಳಂ ಬೆ‌ತನೆಂಬಂತಿರಲಿರ್ಕ್ಕುಂ ಕತ್ರರತಂ। ಚತುರಯುವತಿ ರತಂ । ಸ

[...ರ]ತ್ನಂ । ವರರತ್ನಂ । ವೀರರತ್ನಂ । ಸುಜನಪುರುಷರತ್ನಂ । ಗಜಾಶ್ವಾದಿರತ್ನಂ ॥ವ॥ ಅಂತಾಪುರಕ್ಕಧೀಶ್ವರಂ ಮಹಾಮಂಡಳೇಶ್ವರಂ ಸಿಂದಕುಳಕಮಳಮಾರ್ತ್ತಂಡಂ ಸಿತಗರಗಣ್ಣನುಮೆನಿಸಿ ನೆಗಳ್ದ ಶ್ರೀಮದ್ರಾಚಮಲ್ಲದೇವನ

ಮಹಿಮೆಯೆಂತೆಂದಡೆ ॥ ವ್ರಿ (ವೃ) ॥ ವರಮಾರ್ಗ್ಗಂ । ಶ್ರೀನಿಸರ್ಗ್ಗಂ । ವಿನಯ ವಿನತ ಭರ್ಗ್ಗಂ । ಜಿತಾರಾತಿವರ್ಗ್ಗಂ । ಸ್ಥಿರಕಾರ್ಯ್ಯಂ । ಮೇರುಧೈರ್ಯ್ಯಂ । ಸುಜನವನಜಸೂರ್ಯ್ಯಂ । ಮಹೀಪಾಳವರ್ಯ್ಯಂ । ಸಮರ ರೂಪಂ । ಸ

ಪ್ರತಾಪಂ ಕೃತ ರಿಪುನೃಪತಾಕಂ ಕಳಾಳೀ ಕಳಾಪಂ । ಧರೆಗೆಲ್ಲಂ ರಾಚಮಲ್ಲಂ ಕುಡುತವಿರಲೆ ಬಲ್ಲಂ ಯಶಃ ಶ್ರೀಗೆ ನಲ್ಲಂ ॥ ಅಂತಾ ಸುಖಸಂಕಥಾವಿನೋದದಿನಿರುತ್ತಿರೆ ॥ ವೃ ॥ ಧರೆಗಾಶ್ವ

ರ್ಯ್ಯದೆ ರಾಚಮಲ್ಲಮಹಿಪ [ಂ] ಗೋಭೂಹಿರಣ್ಯಾಂನಪಾನ ರಸಾದ್ಯಾಖಿಳದಾನದಿಂ ತಣಿಪೆಶಿಷ್ಟೇಷ್ಟಾರ್ಥ ಸದುಭಕ್ತರಂ ಪಿರಿದುಂ ಮನ್ನಿಸಲೀಶ್ವರಂ ವರದನಾಗಳ್ ರಾಜ್ಯಮನ್ತಾಳ್ದಿ ವಿಸ್ತರಿಸುತ್ತೊಪ್ಪಿ

ರೆ ದೇವರೊಂದುದಿವಸಂ ಪ್ರತ್ಯಕ್ಷದಿಂ ಚೆ(ಬ)ಪ್ಪುಧು (ದು)ಂ ॥ ವ ॥ ಆಗಳ್‌ನಂದಿನಾಥ ನಂದಿ ಮಹಾಕಾಟ(ಳ) ವೀರಭದ್ರ ಪ್ರಮುಖಪ್ರಮಥಯೂಥ ಸಮೇತನುಂಹರಿವಿರಂಚಿ ಸುರಾಸುರೋರಗಾದಿ ಪ್ರಸಿದ್ಧಾ

ಮರ ಗಣ ಸೇವಿತನುಮೆನಿಸಿ ಪಾರ್ವ್ವತೀಪತಿಬಂದವತರಿಸಿ ನಿಂದಿರಲ್ ರಾಚಮಲ್ಲರಸಂ ಭೋಂಕನೆ ಕಂಡುಪೊಡವಟ್ಟಾನಂದದಿಂ ಕರಕಮಳಮುಕುಳಿತನಾಗಿಲ್ ಹರಂ [ಂ] ದರಹಸಿತವದನಾರವಿಂದಂ ಕೈಲಾಸಾವ

ಳೋಕುನಾರ್ಥವಭಯ ಹಸ್ತಾವಳಂಬಕನಾಗೆ ಮಹಾಪ್ರಸಾದಮೆಂದು ಮಹಾವಿಭೂತಿಯಿಂ ಗಣಾಡಂಬರವಂ ಮಾಡಿ ಶಿವಾರ್ಚನೆಯನಾಡಿ ॥ ವೃ ॥ ಧರೆಗಿಂತತತ್ಯಂತಚೋದ್ಯಾವಹಮೆನೆ ಶಿವಲಿಂಗಾರ್ಚನಂ ಮಾಡಿ

ಪೃಥ್ವೀಭರ ರಾಜ್ಯಶ್ರೀಯಮಂ ಸಂತತಿಗೆ ನಿಲಿಸಿದಂ ರಾಚಮಲ್ಲಂ ಶರೀರಂ ಬೆರೆಸುತ್ತುಂಗಾಶ್ವ ಚಂಚಚ್ಚಾಮರರುಹೆ (ಹ) ಶಿ(ಸಿ)ತ ಛತ್ರಹ್ಲಾನ್ವಿತಂ ಶಂಕರನೊಳ್ ಸಾಲೋಕ್ಯಮಂ ಪೊರ್ದ್ದಿಯುಮವಂಗೆ ಸಾಯು

ಜ್ಯದಿಂ ಲಿಂಗವಾಡೆ ॥ ಅಂತು ಕುಜುಗೋಡ ಪಟ್ಟಣದ ಶ್ರೀಸ್ವಯಂಭುದೇವರ ಪಶ್ಚಿಮಾಭಿಮುಖ ದೊಳು ಬಂದು ನಿಂದು ಸಕಳ ಲೋಕಕ್ಕೆ ಕೌತುಕಮಾಗಿ ಲಿಂಗಮೂರ್ತಿಯಿಂದುದ್ಭವಿಸಲು ಶ್ರೀ

ಮದುದ್ಭವರಾಚಮಲ್ಲೇಶ್ವರದೇವರೆಂಬ ಪೆಸರಂ ತಾಳ್ದಿ ಸುಪ್ರಸಿದ್ಧಮಾಗಿರೆ ॥ ಮತ್ತಂ ತದೀಯಂಸಂತತಿ ಯಡಗುಂತಿಯೆಂತೆಂದಡೆ ॥ವೃ॥ ಮದವದ್ವೈರಿ ಕರೀಂದ್ರ ಕೇಸರಿಯೆನಿಪ್ಪಾ ರಾಚಮಲ್ಲಂಗವಾಸ್ಪ

ದದಿಂ ಸೋವಲದೇವಿಗನ್ನುನುಜನಾಗಿರ್ದ್ದಾಂಯಿರುಂಗೋಳ ಭೂವಿದಿತಂಗೇಚಲದೇವಿಗಂ ತನಯನಾದಂ ಕ್ಷತ್ರ ಚಾರಿತ್ರ ಸಂಪದನಿಂತಿರ್ಮ್ಮಡಿ ರಾಚಮಲ್ಲಮಹಿಪಂ ಶ್ರೀಸಿಂದನಾರಾಯಣಂ ॥ವ॥ ಅಂತಾತನೊಳು ಬಲಂಗೊಂಡು ಕಲಿತನಳಬಲುಪಿಂ ಕಾದಿ ಗೆಲಲಾರ್ಗ್ಗಮರಿದೆಂತೆನೆ ॥ ವೃ ॥ ಪುಲಿಮೊಲೆವಾಲನೊಡೆ । ಫಣಿಪಂಪೆಡೆಯಂ ಕೊಡೆಯೆತ್ತೆ ಸಿಂಧೂರಂ ಸಲಲಿತ ಭದ್ರವಿಷ್ಟರಮದಾಗೆ । ಚ

ಮಚ್ಚಮರೀ ಮೃಗಾಳಿಕೋಮಳ ಚಳಚಾರುಚಾಮರಮನಿಕ್ಕೆ । ದಿಟಂಕಲಿದೇವನಾವಗಂ ಕುಲದಧಿದೈವವಾಗೆ । ಗೆಲಲಾರ್ದ್ದೊರೆಯಿರ್ಮ್ಮಡಿರಾಚಮಲ್ಲನೊಳು ॥ ಮತ್ತಂ ॥ ವೀರಶ್ರೀ ಕಲಿದೇವದೇವನಭವಂ ನಿತ್ಯಪ್ರಸಾದೋದ್ಭವೋದಾರ ಶ್ರೀಯನನಾರತಂ ಕುಡುತಿರಲ್ ಶ್ರೀಚಾರುವಾಕ್ಶ್ರೀಲ ಸದ್ವೀರ ಶ್ರೀರುಚಿರೇಂದು ಕುಮುಧ(ದ) ನಿಭಕೀರ್ತ್ತಿ ಶ್ರೀ

ಯಮ(ಂ) ಭಾಗದೊಳ್ । ರಾರಾಜನ್ಮುಖದೊಳ್ । ಭುಜಯುಗಳದೊಳ್ । ದಿಕ್ಚಕ್ರದೊಳ್ । ವರ್ತ್ತಿಸಲ್ ವೀರಂಗಿರ್ಮ್ಮಡಿರಾಚಮಲ್ಲಮಹಿಪಂಗಿನ್ನಾರ್ಪ್ಪರೇಂ ಬಂದಪರ್ ॥ ಇಂತು ನೆಗಳ್ತೆಗಂ ಪೊಗಳ್ತೆಗಂ

ನೆಲೆಯೆನಿಸಿ। ಸ್ವಸ್ತಿಸಮಧಿಗತ ಪಂಚಮಹಾಶಬ್ಧಮಹಾಮಂಡಳೇಶ್ವರನುಂ ಬಲ್ಲಕುಂದಾ–ದೇಶಾಧೀಶ್ವರನುಂ ಭೋಗಾವತೀಪುರವಾದೀಶ್ವರನುಂ ಸಿಂದಕುಳಕಮಟ(ಳ) ಮರ್ತ್ತಾಂಡನುಂ ಸಿತಗರಗಂಡನುಂ ಶಾರ್ದ್ದೂ

ಳವಿಜಯಪತಾಕನುಂ ಸಮುದ್ದಂಡಮಂಡಳಿ (ಳೀ) ಕಭಯಂಕರ ಚತುರಂಗಾನೀಕನುಂ ದಶದಿಶಾವರ್ತ್ತಿತ ಧವಟ(ಳ) ಕೀರ್ತ್ತಿಂಯುಂ ಪಾತಾಳಚಕ್ರವರ್ತ್ತಿಂಯುಂ ಶ್ರೀವೀರಕಲಿದೇವದಿಬ್ಬಶ್ರೀಪಾದ

ಪದ್ಮನಿತ್ಯ ಪ್ರಸಾದಾಸಾದಿತಾತ್ಮಪ್ರಭಾವನುಂ ಸಂಗಡದಮಂಡಳೀಕರ ತಲೆಯಂಕಾವನುಂ ಬೇಡಿದರ್ಗ್ಗಿ ಲ್ಲೆನ್ನಿದೀವನುಮೆನಿಸಿ ನೆಗಳ್ದ ಶ್ರೀಮದಿರ್ಮ್ಮಡಿರಾಚಮಲ್ಲದೇವಂ ಕುಱುಗೋಡು ವಟ್ಟಿ

ಣದೊಳ್ ಸುಖಸಂಕಥಾವಿನೋದದಿಂ ರಾಜ್ಯಮ್ಗೆಯ್ಯುತ್ತಮಿರೆಯಿರೆ ತತ್ಪಾದಪದ್ಮೋದಜೀವಿ ಮಹಾಪ್ರಧಾನಂ ವಿಬುಧೈಕ ಬಾಂಧವಂ ಶ್ರೀಕರಣಂ ರೇಚಿರಾಜನನ್ವಯವೆಂತೆದಡೆ ॥ವೃ॥ ಸ್ವಸ್ತಿಶ್ರೀ

ಚಂದ್ರ ವಂಶೋದ್ಭವಹರಿತಕುಳಂ ಕಂಮ್ಮೆಸಕ್ತೀರ್ತ್ತಿವಲ್ಲಿ ವಿಸ್ತಾರಾತಾರಾಚಳ ಭುವನತಳಂ ತಾನೆನಲ್ ಸತ್ಯವೀಂದ್ರಪ್ರಸ್ತುತ್ಯಂ ರೇಚಿರಾಜಂಗನುವಶೆಗುಣಿ ರೇಕಾಂಬಿಕಾದೇವಿಗಂ ಸಂತ್ರ ಸ್ತಾರಾತಿಪ್ರಧಾನಂಸುತನುದಯಿಸಿದಂ ಸಾಯಿದೇವಪ್ರಧಾನಂ ॥ ರಾಮಂಗಾರಾಮೆಯೆಂತತಮರಪತಿಗೆ ಪೌಳೋಮಿಯೆಂತಂತೆ ಲಕ್ಷ್ಮೀಧಾಮಂಗಾಲಕ್ಷ್ಮೀ (ಕ್ಷ್ಮಿ)ಯೆಂತಂತನುರಿಪುಗು

ಮಾದೇವಿಯೆಂತಂತೆ ತಾರಾರಾಮಂಗೆ ರೋಹಿಣೀಪ್ರೇಯಸಿ ಸೊಗಯಿಪಳೆಂತಂತಮಾತ್ಯ...
ಓದಾಮಂ ಶ್ರೀಸಾವಿದೇವಂಗತಿಪತಿಹಿತೆ ಸಾವಿತ್ರೆ (ತ್ರಿ) ಯೆಂತೊಪ್ಪುತಿರ್ದ್ದಳ್ ॥ ಅಂತಾ ಶ್ರೀ
ಸ್ವಾಮಿದೇವಂಗಂ ಸಾವಿತ್ರೀದೇವಿಗೆ ॥ ವ್ರಿ (ವೃ) ॥ ರಾಜತ್ ಶ್ರೀಸ್ವಾಮಿದೇವಂಗನುವಶಿಗುಣಿ
ಸಾವಿತ್ರಿಗಂ ಪುಟ್ಟಿದಂ ಶ್ರೀಭಾಜಂತಿಗ್ಮಾಂಶುತೇಜಂ ಗತಭಯಹೃದ (ದ)ಯಾಂಭೋಜನಾ
ಮು
ಣ್ಯಭೀಜಂ ಭ್ರಾಜತ್ಕಾಂತಾಮನೋಜಂ ವಿಬುಧವಿಭುಧಭೂಜಂ ಯಶಃಶ್ರೀಸಮಾಜಂ ಪು
ನೈಜೋನ್ಮಂತ್ರಾಬ್ಧಿರಾಜಂ ಸುವಿಭವ ಸುಮನೋರಾಜನೀ ರೇಚಿರಾಜಂ ॥[೨೫]

ಈ ಶಾಸನದ ಅರ್ಥವೆಂದರೆ ಸಿಂಧವಂಶದ ರಾಚಮಲ್ಲನಿಗೆ ಶಿವನು ಪಾರ್ವತಿಯೊಂದಿಗೆ ದರ್ಶನ ನೀಡಿ ಆತನನ್ನು ಕೈಲಾಸಕ್ಕೆ ಕರೆದುಕೊಂಡು ಹೋಗುತ್ತಾನೆ. ಆನಂತರ ಕುರುಗೋಡಿನ ಪಶ್ಚಿಮಕ್ಕೆ ಲಿಂಗರೂಪದಲ್ಲಿ ಉದ್ಭವಿಸಿ ರಾಚಮಲ್ಲೇಶ್ವರದೇವ ಎಂದು ಕರೆಯಿಸಿಕೊಂಡ ಎಂದು ಹೇಳಲಾಗಿದೆ. ಸಿಂಧವಂಶದ ರಾಚಮಲ್ಲನ ಹೆಸರಿನಲ್ಲಿಯೇ ಇರುವ ಈ ಶಿವಾಲಯದ ಬಗ್ಗೆ ಪೌರಾಣಿಕ ನೆಲೆಯಲ್ಲಿ ಈ ಶಾಸನ ವಿಷಯವನ್ನು ತಿಳಿಸುತ್ತದೆ. ಬಹುಶಃ ಶಿವಭಕ್ತನಾದ ರಾಚಮಲ್ಲದೇವನ ಮರಣಾನಂತರದಲ್ಲಿ ಹುಟ್ಟಿಕೊಂಡಿರಬಹುದಾದ ಈ ಕತೆಗೆ ಶಾಸನರೂಪ ಕೂಡ ದೊರೆತಿರುವುದು ಆ ಪ್ರದೇಶದ ಜನರ ನಂಬಿಕೆಯನ್ನು ಪ್ರತಿಸನಿಧಿಸುತ್ತದೆ ಎಂಬ ಮಾತು ಒಂದು ಕಡೆಯಾದರೆ, ಇನ್ನೊಂದು ಕಡೆಯಲ್ಲಿ ರಾಚಮಲ್ಲನ ಕುಟುಂಬದವರೇ ಈ ರೀತಿಯ ಶಾಸನದ ಮೂಲಕ ರಾಚಮಲ್ಲನ ಹೆಸರನ್ನು ಅಜರಾಮರವಾಗಿಸಿದ್ದಾರೆ ಎಂಬುದು ಕಂಡುಬರುತ್ತದೆ.

'ನೋಡಿರೆ ರಾಘವದ್ವಿಷನ ನಚ್ಚುವ ಮಾಲಿ ಸುಮಾಲಿ ದಾನವ–
ರ್ಮ್ಮಾಡಿದ ಸುಪ್ರತಿಷ್ಠೆಯದಱಿಂದೆ ಸುವರ್ಣ್ಣಮಹಾಕ್ಷಿದೇವರೆಂ–
ಬೀಡಿತನಾಮಮಾದುದು ಸುಮಾಲಿ ಪೆಸರ್ನ್ನಗರಕ್ಕೆ ರೂಡಿಯೊಳ್–
ಕೂಡಿದುದೆಂದೊಡೇವೊಗಳ್ವೆ ಕೂಣ್ಡಿಮಹೀವಳಯಾನ್ತರಾಳದೊಳ್//[೨೬]

ಬಳ್ಳಾರಿ ತಾಲೂಕಿನ ಸೋಮಲಾಪುರದಲ್ಲಿರುವ ಕುರುಬ ರೈತನ ಬಳಿ ಇದ್ದ ಶಾಸನವು ಸಂಸ್ಕೃತದಲ್ಲಿ ಇದ್ದು ವಿಜಯನಗರದ ಅರಸು ವಿರೂಪಾಕ್ಷನನ್ನು ಉಲ್ಲೇಖಿಸುತ್ತದೆ. ಈ ವಿರೂಪಾಕ್ಷ ಅರಸನು ಭಾರದ್ವಾಜ ಗೋತ್ರದ ರಸೇಶ್ವರನ ಮಗ ವಿರೂಪಾಕ್ಷಾರ್ಯನಿಗೆ ಚಿಟುಕನಹಾಳು ಗ್ರಾಮದ ಬಳಿ ಭೂದಾನ ನೀಡುವುದಲ್ಲದೇ ಸೋಮಲಾಪುರವನ್ನು ಅಗ್ರಹಾರವನ್ನಾಗಿಸಿ ಅದಕ್ಕೆ ವಿರೂಪಾಕ್ಷಪುರ ಎಂದು ನಾಮಕರಣ ಮಾಡಿ ಹಲವು ಬ್ರಾಹ್ಮಣರಿಗೆ ಹಂಚಿದ ವಿಷಯ ಈ ಶಾಸನದಲ್ಲಿ ಕಾಣಿಸಿಕೊಂಡಿದೆ.[೨೭]

ಇಲ್ಲಿಯ ವಿಷಯಗಳು ತುಂಬ ಮಹತ್ವವಾದವುಗಳು. ವಿಜಯನಗರದ ಅರಸು ವಿರೂಪಾಕ್ಷ, ವಿರೂಪಾಕ್ಷಾರ್ಯ ಎಂಬಾತನಿಗೆ ದಾನ ನೀಡಿದ ಅಗ್ರಹಾರಕ್ಕೆ ವಿರೂಪಾಕ್ಷಪುರ ಎಂದು ಹೆಸರಿಸಿದ್ದು.

ವಿರೂಪಾಕ್ಷಪುರದ ಹೆಸರು ರಾಜನಾದ ವಿರೂಪಾಕ್ಷನ ಹೆಸರಿನಿಂದ ಬಂದಿತೋ ಅಥವಾ ವಿರೂಪಾಕ್ಷಾರ್ಯನಿಂದ ಬಂದಿತೋ ಎಂಬುದು ಇಲ್ಲಿ ಸ್ಪಷ್ಟವಾಗುವುದಿಲ್ಲ. ಇಲ್ಲಿ ಅರಸನಾದವನು ದೇವರಿಗೆ ಕೊಟ್ಟಂತೆಯೂ ಆಯಿತು ; ತನ್ನ ಹೆಸರೂ ಉಳಿಯಿತು ಎಂದು ಯೋಚಿಸಿದಂತಿದೆ.

ಸಿರಗುಪ್ಪ ತಾಲೂಕಿನ ಸಿರಗುಪ್ಪದಲ್ಲಿ ೧೭ನೇ ಶತಮಾನದ ಶಾಸನೊಂದರಲ್ಲಿ ಒಂದು ಬುರುಜಿಗೆ ಸಾಹೇಬ ಬುರ್ಜು ಎಂಬ ಹೆಸರು ಹೇಗೆ ಬಂತು ಎನ್ನುವುದರ ಉಲ್ಲೇಖವಿದೆ. 'ಹೊಳೆಯ ಕಡೆಯ ಬಾಗಿಲ ಹತ್ತಿರದ ಬುರುಜನ್ನು ರುದ್ರಲಿಂಗೋಜಿ ಕಟ್ಟಿಸಿ, ಇದಕ್ಕೆ ಸಾಹೇಬ ಬುರ್ಜು ಎಂದು ಹೆಸರಿಸಿದ'[೨೮] ಎಂಬುದು ಮಹತ್ವ ಪಡೆದುಕೊಳ್ಳುತ್ತದೆ. ಇಲ್ಲಿ ತನ್ನ ಒಡೆಯನನ್ನು ಒಲಿಸಿಕೊಳ್ಳಲು ಮಾಂಡಲಿಕನೊಬ್ಬ ಈ ರೀತಿಯಾದ ಕೈಂಕರ್ಯ ಕೈಗೊಂಡಿದ್ದು ಕಂಡುಬರುತ್ತದೆ. ಇಸ್ಲಾಂ ಅರಸರ ಆಡಳಿತಕ್ಕೆ ಒಳಪಟ್ಟ ಪ್ರದೇಶಗಳಲ್ಲಿ ಇಂತಹ ಶಾಸನಗಳು ಸಾಮಾನ್ಯ ಎನಿಸುತ್ತದೆ. ಆದರೆ ಇಲ್ಲಿ ಇನ್ನೊಂದು ವಿಷಯ ಹೇಳಲೇಬೇಕು. ಆ ಸಾಹೇಬ ಯಾರು ಎಂಬ ಬಗ್ಗೆ ಮಾತ್ರ ಶಾಸನದಲ್ಲಿ ಎಲ್ಲಿಯೂ ದಾಖಲಾಗಿಲ್ಲ.

ಹೊಸಪೇಟೆ ತಾಲೂಕಿನ ಹಂಪದೇವಹಳ್ಳಿಯ ಹನುಮಂತರಾಯನ ಗುಡಿ ಮುಂದೆ ಇರುವ ಶಾಸನದ ಮೊದಲ ತುಂಡಿನಲ್ಲಿ ಕೃಷ್ಣರಾಯನು ಹಂಪದೇವನಹಳ್ಳಿಯನ್ನು ಕೃಷ್ಣರಾಯಪುರ ಎಂದು ಮರು ನಾಮಕರಣ ಮಾಡಿದ ಉಲ್ಲೇಖ ದೊರೆಯುತ್ತದೆ. ಆದರೆ ಇಂದಿಗೂ ಅದು ಹಂಪದೇವನಹಳ್ಳಿಯಾಗಿಯೇ ಉಳಿದುಕೊಂಡಿದೆ. 'ನಾರಿಸೀಮೆಯ ವೊಳಗಣ ಹಂಪದೇವನಹಳ್ಳಿಯೆಂಬ

ಶುಭಮಸ್ತು ॥ ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ
ತ್ರೈಲೋಕ್ಯನಗರಾರಂಭಮೂಲಸ್ತಂಭಾಯ ಶಂಭವೇ ॥ ಸ್ವಸ್ತಿ ಶ್ರೀ
ಜಯಾಭ್ಯುದಯಶಾಲಿವಾಹನಶಕವರ್ಷ ೧೪೩೩ ನೆಯ ಪ್ರಜಾಪತಿ
ಸಂವಛ್ಸರದ ಚೈತ್ರ ಶು (೧)೩ ಬು ಲು ಶ್ರೀಮ(೦)ನ್ ಮಹಾರಾಜಾಧಿರಾ
ಜರಾಜಪರಮೇಶ್ವರ ಶ್ರೀ ವೀರಪ್ರತಾಪ ಶ್ರೀವೀರಕ್ರುಷ್ಣರಾಯ
ಮಹಾರಾಯರೂ ನಾನಾಗೋತ್ರದ ನಾನಾಶಾಖೆಯ ಅಸೇಷ ವಿ
ದ್ವ(೦)ನ್ಮಹಾಜನಂಗಳಿಗೆ ಕೊಟ್ಟ ಅಗ್ರಹಾರ ಭೂದಾನದ ಕ್ರಮವೆಂ
................[ತಿ]ಯವೇಂತೆಯದ
ನಾರಿಸೀಮೆಯ ವೊಳಗಣ ಹಂಪದೇವಹಳ್ಳಿಯಂಬ ಗ್ರಾ...
ನೂ ಶ್ರೀಕ್ರುಷ್ಣರಾಯಪುರವೆಂದು ಪ್ರತಿನಾಮವ ಮಾಡಿ ಸರ್ವಮಾ (೦)
ನ್ಯದ ಅಗ್ರಹಾರವನೂ ತುಂಗಭದ್ರಾತೀರ ಭಾಸ್ಕರಕ್ಷೇತ್ರ
ಶ್ರೀವಿರೂಪಾಕ್ಷದೇವರ ಸಂನಿಧಿಯಲು ನಮಗೆ ಪುಣ್ಯನಾಗ
ಬೇಕೂ ಯೆಂದು ಯೀ ತಥಾತಿಥಿಯ ಮನ್ವಾದಿಪು (೦)ಣ್ಯಕಾಲದಲು ಸ

ಹಿರ(೦)ಣ್ಯೋದಕ ದಾನಧಾರಾಪೂರ್ವಕ ಸದ್ಯೇಪರಿಚ್ಛೇದವಾಗಿ ಧಾ
ರೆಯನೆಱದು ಕೊಟ್ಟ ತಾಂಬ್ರಶಾಸನವನ್ನೂ ಕೊಟ್ಟು ಮಾಡಿ
ದ ವ್ರಿತ್ತಿ ೧೦೫ ಅಕ್ಷಾರದಲೂ ಯಿದೇ ನೂಱಅಇದು ವ್ರಿ
ತ್ತಿಯ ಕ್ಷೇತ್ರಕ್ಕೆ ಆತ್ರೇಯಗೋತ್ರದ ರುಕುಶಾಖೆಯ ಚಿಪ್ಪಗಿರಿಯ
ಹಂಪಂಣಗಳ ಮಕ್ಕಳು ಲಿಂಗಂಣಗಳಿಗೆ ವ್ರಿತ್ತಿ ೪।ರೇಖೆ
ಕಾಶ್ಯಪಗೋತ್ರದ ರುಕುಶಾಖೆಯ.... ಇಂಮಡಿ (ಭ)
ಭಟರ ಮಕ್ಕಳು ಶಿವಾದೀಕ್ಷಿತರಿಗೆ ವ್ರಿತ್ತಿ ೩ ಆತ್ರೇಯಗೋತ್ರ
ದ ರುಕುಶಾಖೆಯ ಸಿಧನಾಥಭಟರ ಮಕ್ಕಳು ಆರೆಯ ಕ್ರುಷ್ಣ ಭ
ಟ್ಟರಿಗೆ ವ್ರಿತ್ತಿ ೩ ಕಾಶ್ಯಪಗೋತ್ರದ ಯಜುಶಾಖೆಯ (ನಾರಸಿಭಟ್ಟ)
ರ ಮಕ್ಕಳು ಸೋಮಾಭಟ್ಟರಿಗೆ ವ್ರಿತ್ತಿ ೪ ಕಾಶ್ಯಪಗೋತ್ರದ ಯಜುಶಾ
ಖೆಯ ನಲ್ಲಚಿಲಮೆಯ ಪೆದ್ದಿಭಟ್ಟರ ಮಕ್ಕಳು ವಿಶ್ವನಾಥಭಟ್ಟರಿ
ಗೆ ವ್ರಿತ್ತಿ ೪ ಭಾರದ್ವಾಜಗೋತ್ರದ ರುಕುಶಾಖೆಯ ಆಲೂರ ಬಸವಾ
ಭಟ್ಟರ ಮಕ್ಕಳು ವಿರುಪಾಕ್ಷಭಟ್ಟರಿಗೆ ವ್ರಿತ್ತಿ ೫ ಕೌಶಿಗೋ
ತ್ರದ ಯಜುಶಾಖೆಯ ಪೆರುಮಕಿ ಅಱುಭಳಭಟರ ಮಕ್ಕಳು ಜ್ಞಾನ
ದೇವಭಟ್ಟರಿಗೆ ವ್ರಿತ್ತಿ ೪ ವಶಿಷ್ಟಗೋತ್ರದ ರುಕುಶಾಖೆಯ ಮಲ್ಲಿಭ
ಟ್ಟರ ಮಕ್ಕಳು ದೇಮಾಭಟ್ಟರಿಗೆ ವ್ರಿತ್ತಿ ೩ ಭಾರದ್ವಾಜಗೋತ್ರದ ಯ
ಜುಶಾಖೆಯ ಸ್ವಯಂಪಾಕ ಬಾಚಣಭಟ್ಟರ ಮಕ್ಕಳ [ರಾಮಾ]
ಭಟ್ಟರಿಗೆ ವ್ರಿತ್ತಿ ೪ ವಿಶ್ವಾಮಿತ್ರಗೋತ್ರದ ರುಕುಶಾಖೆಯ
ಜಟೆಯ ವಿಠಣಭಟರ ಮಕ್ಕಳು ಸೋಮಾಭಟ್ಟರಿಗೆ ವ್ರಿತ್ತಿ ೩

**ಎರಡನೆಯ ಮುಖ**

ಗೌತಮಗೋತ್ರದ ಯಜುಶಾಖೆಯ ಯಾಯಾವರ
ಗೌರಿದೇವಭಟ್ಟರ ಮಕ್ಕಳು ಮಲ್ಲಿಭಟ್ಟರಿಗೆ ವ್ರಿತ್ತಿ ೪
ಕೌಶಿಕಗೋತ್ರದ ರುಕುಶಾಖೆಯ ಕ್ರುಷ್ಣಭಟ್ಟರ [ಮ]
ಕ್ಕಳು ತಿರುಮಲಭಟ್ಟರಿಗೆ ವ್ರಿತ್ತಿ ೨ ಶಾಂಡಿಲ್ಯಗೋ
ತ್ರದ ಯಜುಶಾಖೆಯ ಇಟ್ಟಿಗೆಯ ಲಖಣಭಟ್ಟರ ಮಕ್ಕ...
ದೇವಭಟ್ಟರಿಗೆ ವ್ರಿತ್ತಿ ೪ ಕಾಶ್ಯಪಗೋತ್ರದ ಶುಕ್ಲಯಜು (ಶಾಖೆ)
ಯ ಚೆಂನಾಭಟ್ಟರ ಮಕ್ಕಳು ರೇವಣಭಟ್ಟರಿಗೆ ವ್ರಿತ್ತಿ ೩ ವ
ಶಿಷ್ಟಗೋತ್ರದ ರುಕುಶಾಖೆಯ ಮಳಿಗೆಯ ಅನಂತಭ...
ಮಕ್ಕಳು ವಿಷ್ಣುಭಟ್ಟರಿಗೆ ವ್ರಿತ್ತಿ ೩ ಭಾರದ್ವಾಜಗೋತ್ರ

....ಮಲಿಗೆಯ ಅನಂತಭ....

....ಮಕ್ಕಳು ವಿಷ್ಣುಭಟ್ಟರಿಗೆ ವ್ರಿತ್ತಿ ೪ ಭಾರದ್ವಾಜಗೋತ್ರ

..ದ ಯಜು.....ರತ್ನಭಟ್ಟರಿಗೆ....

ವಿಠಲಭಟ್ಟರಿಗೆ ವ್ರಿತ್ತಿ....

......

......ತ್ತಿ ೪ ಆತ್ರೇಯಗೋತ್ರದ

..............ಶಾಖೆ ಅ.

....ಸದಾಶಿ....................ರಿಗೆ ದಾನವಾಗಿ

ದೇವ.........ಸ ಗ್ರಾಮ ಕೊಳಗದ

ವಿಜ..........ಯೀ ಅಗ್ರಹಾರಕ್ಕೆ ಸಲುವ ಅಷ್ಟಭೋಗ

ತೇಜಸಾಂಮ್ಯ.............. ಬಳಿ ಸಹಿತವಾಗಿ ನೀಉೂ ನಿಂ

ಮ ಪುತ್ರಪೌತ್ರಪಾರಂಪರಿಯದಿಂದ ಆಚಂದ್ರಾರ್ಕಸ್ತಾಯಿ

ಗಳಾಗಿ ಸುಖದಿಂದ ಅನುಭವಿಸುತ್ತಿರಬೇಕೆಂದು ಕೊಟ್ಟ ಸರ್ವಮಾ"[೨೯]

ಅಂದರೆ ಮೊದಲಿಗೆ ಇರುವ ಊರಿನ ಹೆಸರನ್ನು ಬದಲಾಯಿಸಿ ಕೃಷ್ಣರಾಯನು ಹಂಪದೇವಹಳ್ಳಿಯನ್ನು ತನ್ನ ಹೆಸರಿನಿಂದ ಗುರುತಿಸಬೇಕು ಎಂಬ ಮಹದಾಸೆಯಿಂದ ಅಥವಾ ಪ್ರಜೆಗಳ ಒತ್ತಾಯದಿಂದ ಕೃಷ್ಣರಾಯಪುರ ಎಂದು ಬದಲಾಯಿಸಿದಂತೆ ತೋರುತ್ತದೆ. ಆದರೆ ಇದು ಶಾಸನದಲ್ಲಿ ಮಾತ್ರ ಕಂಡುಬರುತ್ತಿದ್ದು, ಇಂದಿಗೂ ಹಂಪದೇವನಹಳ್ಳಿಗೆ ಹಳೆಯ ಹೆಸರೇ ಇರುವುದನ್ನು ಗಮನಿಸಬೇಕು. ಕೃಷ್ಣರಾಯಪುರ ಎಂದು ಯಾರೂ ಅದನ್ನು ಕರೆಯುವುದಿಲ್ಲ. ಹೀಗಾಗಿ ಇದು ಅರಸನೇ ಒತ್ತಾಯಪೂರ್ವಕವಾಗಿ ಬದಲಾಯಿಸಿದ ಹೆಸರು ಎಂಬುದು ತಿಳಿದುಬರುತ್ತದೆ.

ಸವದತ್ತಿ ತಾಲೂಕಿನಲ್ಲಿ (ಬೆಳಗಾವಿ ಜಿಲ್ಲೆ) ಬರುವ ಶಿಲಾ ಶಾಸನವೊಂದರಲ್ಲಿ ಒಂದನೇ ಸೋಮೇಶ್ವರನ ಕಾಲದಲ್ಲಿ ಅಂಕರಸನು 'ಅಂಕೇಶ್ವರ' ಎಂಬ ದೇವಾಲಯವನ್ನು ಕಟ್ಟಿಸಿ ಅದಕ್ಕೆ ೧೦೪೮-೪೯ ರಲ್ಲಿ ಭೂಮಿದಾನ ಮಾಡಿದ ಉಲ್ಲೇಖ ಬರುತ್ತದೆ. ಇದು ಕೂಡ ಸ್ಥಳ ಐತಿಹ್ಯದ ಪ್ರಕಾರ ಕಾಣಿಸಿಕೊಂಡಿರುವ ಶಾಸನವಾಗಿದ್ದು, ಇಂದು ಸವದತ್ತಿ ನಗರದಲ್ಲಿರುವ 'ಅಂಕುಶೇಶ್ವರ' ದೇವಾಲಯವೇ ಇದಾಗಿರಬೇಕು ಎಂಬುದು ತಜ್ಞರ ಅಭಿಮತ. ಇದು ಈಗಾಗಲೇ ಅರ್ಧ ಭಾಗ ಮಣ್ಣಿನಲ್ಲಿ ಹೂತು ಹೋದ ದೇವಾಲಯವಾಗಿದೆ ಎಂಬುದನ್ನು ಗಮನಿಸಿದಾಗ ಇಂದಿಗೆ ಅದು ನಿರ್ಲಕ್ಷಿತವಾಗಿದೆ ಎಂದೇ ಹೇಳಬೇಕಾಗುತ್ತದೆ. ಅ. ಸುಂದರ ಅವರು ಕೂಡ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.[೩೦]

ಬಳ್ಳಾರಿ ತಾಲ್ಲೂಕು ಕುರುಗೋಡದ ಶಾಸನವೊಂದು ಸ್ಥಳಮಹಿಮೆ ಕುರಿತು ಹೀಗೆ ಹೇಳುತ್ತದೆ.

"ಚೋಳನನಾಳು ಮಾಡುವುದು ಗೂರ್ಜರರಂ ಸತಿ ತರ್ದ್ವಿಕುಂ ಕರಂ
ಲಾಳನನಾಳಿ ಮಾಡುವುದು ಪಾಂಡ್ಯನನಂಡತಿಗುಂ ತೆಲುಂಗ ಭೂ
ಪಾಲನನೇಳದಿಕ್ಕೆಯನೆ ಮಾಡುವುದೀ ಕುಱುಗೋಡ ಕೋಟೆ
ಕಾಂ ಕಾಳೆಗಮೆಂದಹೇಳು ಮಡಿ ಪೆರ್ಚ್ಚುವುದಚ್ಚರಿಯಾರೆ ಕಾದುವರ್;[೫೧]

ತುಂಗಭದ್ರೆಯ ದಕ್ಷಿಣದಲ್ಲಿದ್ದ ಬಲ್ಲಕುಂದೆ ನಾಡಿನಲ್ಲಿ ಕುಱುಗೋಡು ದುರ್ಗವು ನಾನಾ ಎನ್ನುವ ರಾಜರನ್ನು ಹಣ್ಣುಮಾಡುವ ಬಲಿಷ್ಠ ಕೋಟೆಯಾಗಿತ್ತು. 'ಕಾಳೆಗ ಎಂದರೆ ಏಳುಮಡಿ ಹೆಚ್ಚುತ್ತಿತ್ತಂತೆ' ಆಕೋಟೆ.

ಈ ಶಾಸನದ ವಿಷಯವನ್ನು ಗಮನಿಸಿದರೆ ನಿಜಕ್ಕೂ ಆಶ್ಚರ್ಯವೆನಿಸುತ್ತದೆ. ಕಾಳೆಗ ಎಂದರೆ ಏಳುಮಡಿ ಹೆಚ್ಚತ್ತಿತ್ತೆಂದರೆ ಇದು ತುಂಬಾ ಅತಿಶಯೋಕ್ತಿ ಎನಿಸುತ್ತದೆ. ಆದರೂ ಜನರು ಇದನ್ನು ನಂಬುತ್ತಿದ್ದರು ಇದನ್ನೆ ಐತಿಹ್ಯ ಎನ್ನುವುದು.

ಹರಪನಹಳ್ಳಿ ತಾಲೂಕಿನ ಉಚ್ಚಂಗಿದುರ್ಗದ ತವಕೇಶ್ವರಸ್ವಾಮಿ ದೇವಾಲಯದ ಬಳಿ ನೆಟ್ಟ ಕಲ್ಲಿನ ಮೇಲಿರುವ ೧೦೬೪ರ ಶಾಸನವು ಉಚ್ಚಂಗಿ ದುರ್ಗದ ಐತಿಹ್ಯವನ್ನು ಹೇಳುತ್ತದೆ. ಅದು ಹೀಗಿದೆ.

ಬೈಯೆಂಬಳು ಮೊದಲಾಗಿ ಮೂವರು ಬ್ರಾಹ್ಮಣಕನ್ನಿಕೆಯರು ತಪಂಗೆಯ್ದೀಶ್ವರ ವರ
ಪ್ರಸಾದದಿಂ ದೇವತ್ವಮಂ ಪಡೆದರದಱಿಂದುಚ್ಚುಂಗಿಯಾ ಪರ್ವ್ವತಮೆಂಬುದು ಆ ಪ
ರ್ವ್ವತದ ಮೂಡಣದೆಸೆಯೊಳು ಹಿಡಿಂಬವನಮಾ ಬನದೊಳಗೆ ಸ್ವಯಂಭುಕಲಿದೇ
ವಸ್ವಾಮಿಯೆಂಬುದು ಆ ದೇವರ್ಗ್ಗೆ ದೇಗುಲವಮ್ಮಾಡಿಸಿದಳು ಹಿಡಿಂಬೆ.... ದಿತ್ತ
ಹಿಡಿಂಬೇಸ್ವರಮೆಂಬುದು ಆ ಲಿಂಗಂ ಪರ್ಚ್ಚೆ ಪೆರ್ಚ್ಚುವ ಕಾರಣದಿಂ ಕಳೇಶ್ವರಮದಮೃತ
ಲಿಂಗದೇ [ವರ್]
ಪ್ರಸನ್ನತೆಯಿಂ ಕಣ್ಣು ಶ್ರೀಮದ್ದಣ್ಡನಾಯಕ ದೇವಪಯ್ಯ ಉಚ್ಚಂಗಿ ಮೂವತ್ತುಮನಾಳುತ್ತ
(ಮನಾಳುತ್ತ)ಮಿ
ಟ್ಟ್ದ ದೇಗುಲದ ಅಧಿಷ್ಠಾನಮಂ ಕಟ್ಟಿಸಿ ಮಠ ಮಗ್ಗಲು ಬಾವಿಯೆಂಬಿವಂ ಮಾಡಿಸಿ
ಪ್ರಧಾನರ್ಗ್ಗಱಿಪಿದ[೫೨]
ದೇವರ್ಗ್ಗೆ ಭೋಗವುಪ್ಪಂತಾಗಿ ಅರಸರ್ಗ್ಗೆ ಬಿನ್ನಹಂಗೆಯ್ವುದೆಂದೊಡೆ
ಶ್ರೀಮನ್ಮನೆವೆರ್ಗ್ಗಡೆದಣ್ಣನಾಯಕ ನಾಗದೇ
ವಯ್ಯನುಂ ದಣ್ಡನಾಯಕ ಎಱಕಪಯ್ಯನ ಶ್ರೀಮತ್ಸನಿದ್ಧವಿಗ್ರಹಿ ದಣ್ಡನಾಯಕ ಮಾರಮಯ್ಯನು
ಸನ್ಧಿವಿಗ್ರಹಿ ಕಾಳಿದಾಸಭಟ್ಟರು ಅರಸರ್ಗ್ಗೆ ಬಿನ್ನಪಂಗೆಯ್ದರು ರಾವಿಘಟ್ಟವಂ ಬಿಡುವದೆಂದೊಡ

ರಸರು ಈಚ್ಚಜಿದರ್ [॥ *] ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀಪೃಥ್ವೀವಲ್ಲಭ ಮಹಾ

ರಾಜಾಧಿರಾಜ ಪರಮೇಸ್ವರ

ಪರಮಭಟ್ಟಾರಕ ಸತ್ಯಾಶ್ರಯಕುಳತಿಳಕ ಚಾಳುಕ್ಯಾಭರಣ ಶ್ರೀಮತ್ತ್ರಿಭುವನಮಲ್ಲದೇವರ ವಿಜ

ಯರಾಜ್ಯಮುತ್ತರೋತ್ತರಾಭಿವೃದ್ಧಿಪ್ರವರ್ತ್ತಮಾನಮಾಚನ್ದ್ರಾರ್ಕ್ಕತರಾಂಬರಂ ಸಲುತ್ತಮಿರೆ ತದನುಜ

ಸ್ವಸ್ತಿ ಸಮಸ್ತಭುವನಸ್ತುತಮಹಾಮಹಿಮೋಲ್ಲಸಿತಪಲ್ಲವಾನ್ವಯಿ

ಈ ವಿಷಯ ಹರಪ್ಪನಹಳ್ಳಿ ತಾಲೂಕಿನ ಉಚ್ಚಂಗಿ ದುರ್ಗದ ಹೊಲವೊಂದರಲ್ಲಿ ದೊರೆತ ಶಾಸನದಲ್ಲೂ ಪ್ರಸ್ತಾಪವಾಗಿದೆ.

ಉಚ್ಚಂಗಿಯ ಪರ್ವ್ವತವೆಂಬುದು ಆ ಪ

ರ್ವತದ ಮೂಡಣದೆಸೆಯೊಳು ಹಿಡಿಂಬವನಮಾ ಬನದೊಳಗೆ ಸ್ವಯಂಭುಕಲದೇ

ವಸ್ವಾಮಿಯೆಂಬುದು ಆ ದೇವರ್ಗ್ಗೆ ದೇಗುಲಮ್ಮಾಡಿಸಿದಳು ಹಿಡಿಂಬೆ... ದಿತ್ತ

ಹಿಡಿಂಬೇಶ್ವರವೆಂಬುದು ಆ ಲಿಂಗಂ ಪೆರ್ಚ್ಚೆ ಪೆರ್ಚ್ಚುವ ಕಾರಣದಿಂದ

ಕಳೇಶ್ವರಮದಮೃತ ಲಿಂಗದೇ(ವರ್)

ಉ'ಚ್ಚಂಗಿಯ ಪರ್ವ್ವತಕ್ಕೆ ನಾಲ್ಕು ನಾಮ ಕೃತ[ಯುಗದಲ್ಲಿ] ಮೇಘ[ನಾದನೆಂಬ] ರಾಕ್ಷಸನ ಮಾಂಸಮಿರ್ಪ್ಪುದಱಿಂ ಮೇಘನಾ

ದ[ಮೆಂತಿಪ್ಪು] ತ್ರೇತೆಯೊಳು ಹಿರಣ್ಯ[ನ] ನಿವಾಸಮಾಗಿ ... ... ... ಯೊಳು ಸುವರ್ಣ್ನ

ವ್ರಿಷ್ಟಿ... ... ದು [ಪ]ಡೆ[ದಂ] ಕನಕಗಿರಿಯೆಂಬ ... ಯುತ್ತುಂಗ ಮಹಾಗಿರಿಯಾಶ್ರಮಂ ಮತ್ತು[ಂ] ಕಾರಣದಿಂ ಚ

ತು... ... ... ... ಬಂದು ಕಲಿಯುಗದಂದುಚ್ಚಂಗಿಯಬ್ಬೆ ಯೆಂಬಳ್ಮೊದಲಾಗಿ ಮೂರ್ಧನ್ಯ ಬ್ರಾಹ್ಮಣಕನ್ಯಕಿ...'[೩೩]

ಆದರೆ ಇಲ್ಲಿಯ ಶಾಸನವು ಕೆಲವು ಕಡೆ ತ್ರುಟಿತವಾಗಿದೆ. ಎರಡು ಕಡೆ ಕೆಲ ಬದಲಾವಣೆಗಳೊಂದಿಗೆ ಒಂದೇ ವಿಷಯದಲ್ಲಿ ಶಾಸನಗಳನ್ನು ಹಾಕಿಸಿ ಉಚ್ಚಂಗಿದುರ್ಗದ ಸ್ಥಳ ಪುರಾಣವನ್ನು ಹೇಳಲಾಗಿದೆ. ಕೃತಾಯುಗದಲ್ಲಿ ಮೇಘನಾದ ಎಂಬ ಅಸುರನ ವಾಸಸ್ಥಾನವಾಗಿದ್ದರಿಂದ ಅದು ಮೇಘನಾದ ಎಂಬ ಹೆಸರು ಬಂತು. ತ್ರೇತಾಯುಗದಲ್ಲಿ ಹಿರಣ್ಯಕ ಎಂಬ ಅಸುರನ ನೆಲೆ ಅದಾಗಿತ್ತು. ಆತನನ್ನು ನಾರಾಯಣ ವಧಿಸುತ್ತಾನೆ. ಆಗ ದೇವತೆಗಳೆಲ್ಲ ಕನಕವೃಷ್ಟಿಯನ್ನು ಸುರಿಸಿದರು. ಹಾಗಾಗಿ ಆ ಸ್ಥಳಕ್ಕೆ ವೀರಕನಕಗಿರಿ ಎಂಬ ಹೆಸರು ಬಂತು ಎಂದು ಹೇಳಲಾಗಿದೆ. ದ್ವಾಪರ ಯುಗದಲ್ಲಿ ಉತ್ತಂಗ ಮಹರಿಷಿ ಎಂಬ ಮುನಿಯ ಆಶ್ರಮವಾಗಿದ್ದರಿಂದ ಆ ಸ್ಥಳಕ್ಕೆ ಉತ್ತಂಗ

ಪರ್ವತ ಎಂಬ ಹೆಸರು ಬಂದಿತೆಂದು ತಿಳಿಸಲಾಗಿದೆ. ಕಲಿಯುಗದಲ್ಲಿ ಉಚ್ಚಂಗಿಯಬ್ಬೆ ಎಂಬುವಳು ಮೊದಲಾಗಿ ಮೂವರು ಬ್ರಾಹ್ಮಣ ಕನ್ನಿಕೆಯರು ತಪಸ್ಸು ಮಾಡಿ ಈಶ್ವರನನ್ನು ಒಲಿಸಿಕೊಂಡು ದೈವತ್ವವನ್ನು ಪಡೆದ ಕಾರಣದಿಂದ ಉಚ್ಚಂಗಿ ದುರ್ಗ ಎಂಬ ಹೆಸರು ಬಂದಿದೆ ಎಂದೂ ಇಲ್ಲಿ ಹೇಳಲಾಗಿದೆ.

ಸ್ಥಳ ಐತಿಹ್ಯಕ್ಕೆ ಪ್ರಮುಖವಾದ ಶಾಸನವಾಗಿರುವ ಇದು ಉಚ್ಚಂಗಿ ದುರ್ಗ ಕೃತಾಯುಗದಿಂದಲೂ ಇತ್ತು ಎಂಬುದನ್ನು ತಿಳಿಸುತ್ತದೆ. ಮೇಘನಾದ, ವೀರಕನಕಗಿರಿ, ಉತ್ತುಂಗ ಪರ್ವತ, ಉಚ್ಚಂಗಿ ಎಂಬ ಹೆಸರುಗಳು ಕ್ರಮೇಣವಾಗಿ ಅದಕ್ಕಿದ್ದವು ಎಂಬುದನ್ನು ತಿಳಿಸುವ ಶಾಸನದಲ್ಲಿ ದುರ್ಗ, ಗಿರಿ, ಪರ್ವತ ಎಂಬ ಕೊನೆಯ ಏಕಾರ್ಥ ಪದಗಳನ್ನು ಬಳಸಿರುವುದು ಗಮನೀಯ. ಅದು ಎಲ್ಲಿಯೂ ಬದಲಾಗಿಲ್ಲ. ಕೊನೆಯದಾಗಿ ಬರುವ ಉಚ್ಚಂಗಿ ದುರ್ಗದ ಸ್ಥಳ ಐತಿಹ್ಯ ಒಂದಿಷ್ಟು ಸತ್ಯಾಂಶದಿಂಧ ಕೂಡಿದೆ ಎನ್ನಿಸುತ್ತದೆ. ಆದರೆ ಉಳಿದಂತೆ ಕತಾಯುಗದ ಮೇಘನಾದ, ತ್ರೇತಾಯುಗದ ವೀರಕನಕಗಿರಿ, ದ್ವಾಪರಯುಗದ ಉತ್ತುಂಗ ಪರ್ವತ ಎಂಬ ಹೆಸರುಗಳು ಪುರಾಣಗಳಲ್ಲಿ ದಾಖಲಾತಿ ಪಡೆದಿವೆಯೇ ಎಂಬುದನ್ನು ತಿಳಿದುಕೊಳ್ಳಬೇಕಿದೆ. ಯಾಕೆಂದರೆ ಸ್ಥಳ ಪುರಾಣವನ್ನು ಹೇಳುವಾಗ ಕೆಲವು ವಿಷಯಗಳು ಉತ್ಪ್ರೇಕ್ಷಿತಗೊಂಡಿರುತ್ತವೆ.

ಇದೇ ರೀತಿಯಾಗಿ ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಸಿರಸಂಗಿ ಗ್ರಾಮದ ಕುರಿತಾಗಿಯೂ ಶಾಸನ ನಿರೂಪಿತ ಐತಿಹ್ಯವೊಂದು ಕಾಣಿಸಿಕೊಳ್ಳುತ್ತದೆ. ಸಿರಸಂಗಿಯ ಕಾಳಮ್ಮನ ದೇವಾಲಯದಲ್ಲಿರುವ ಈ ಶಾಸನ[೩೧]ವು ತುಂಬ ದೀರ್ಘವಾಗಿದ್ದು ಕಾವ್ಯಾತ್ಮಕವಾಗಿ ಮೂಡಿಬಂದಿದೆ. ಇದೊಂದು ದತ್ತಿ ಶಾಸನವಾಗಿದ್ದರೂ ಸಿರಸಂಗಿಯ ಸ್ಥಳಪುರಾಣವನ್ನು ಹೇಳುವಲ್ಲಿ ಹೆಚ್ಚು ಜಾಗೆಯನ್ನು ಪಡೆದಿದೆ. 'ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ...' ಎಂದು ಆರಂಭಗೊಳ್ಳುವ ಈ ಶಾಸನದಲ್ಲಿ ಸಿರಸಂಗಿಯ ವಿಷಯವನ್ನು ಪ್ರಸ್ತಾಪಿಸಲಾಗಿದೆ. ಮೊದಲಿಗೆ ರಿಶ್ಯಶೃಂಗಿ ಸಮೀಪವೇ ಕಿಷ್ಕಿಂದ ಬೆಟ್ಟವಿದ್ದು ಅಲ್ಲಿ ಸುಗ್ರೀವ, ಮತಂಗ, ಕಪಿಲ, ಅಗಸ್ತ್ಯ ಮೊದಲಾದವರ ಆಶ್ರಯ ತಾಣವಾಗಿತ್ತು. ಅಲ್ಲಿನ ತಪ್ಪಲು ಪ್ರದೇಶದಲ್ಲಿ ವೇದಾಂತಿ ವಿಭಾಂಡಕ ಮುನಿಯೂ ವಾಸವಾಗಿದ್ದ ಎಂಬುದನ್ನು ತಿಳಿಸಲಾಗಿದೆ.

ಆನಂತರದಲ್ಲಿ ಕತೆ ಆರಂಭಗೊಳ್ಳುತ್ತದೆ. ಮಂಜುಘೋಷೆ ಎಂಬ ಅಪ್ಸರೆಯು ಸುಂದರವಾದ ರೂಪವತಿಯಾಗಿದ್ದು, ತನ್ನ ಸೌಂದರ್ಯದ ಬಗ್ಗೆ ಆಕೆಗೆ ಮೋಹವಿತ್ತು. ಹೀಗಿರುವಾಗ ಆಕೆ ಶೃಂಗಿ ಎಂಬ ಬ್ರಹ್ಮರ್ಷಿಯನ್ನು ಸೋಂಕಿ ಹೋಗುತ್ತಾಳೆ. ಆಗ ಆ ಮುನಿ ಆಕೆಗೆ ಶಾಪ ನೀಡುತ್ತಾನೆ. ವಿಶಾಪ ಬೇಡಿದಾಗ ವಿಭಾಂಡಕ ಮುನಿಯ ವೀರ್ಯದಿಂದ ವಿಶಾಪವಾಗುವುದು ಎಂದು ತಿಳಿಸುತ್ತಾನೆ. ಇದೇ ಸಂದರ್ಭದಲ್ಲಿ ವಿಭಾಂಡಕ ಮುನಿಯು ಸ್ನಾನ ಮಾಡಲು ಹೋದಾಗ ಸರೋವರದಲ್ಲಿದ್ದ

ಸೌಂದರ್ಯವತಿ ಮಂಜುಘೋಷೆಯನ್ನು ಕಂಡು ಮೋಹಿತನಾಗುತ್ತಾನೆ. ಆತನ ಮನಸ್ಸು ಕಾಮಪೂರಿತವಾಗಿ ವೀರ್ಯ ಸ್ಖಲನವಾಗುತ್ತದೆ. ಮಂಜುಘೋಷೆ ಆ ವೀರ್ಯವನ್ನು ಆಘ್ರಾಯಿಸುತ್ತಾಳೆ. ಆಗ ಆಕೆ ಗರ್ಭವತಿಯಾಗಿ ಗಂಡುಮಗುವಿಗೆ ಜನನ ನೀಡುತ್ತಾಳೆ. ಆ ಗಂಡುಮಗುವಿಗೆ ತಲೆಯಲ್ಲಿ ಕೊಂಬುಗಳಿದ್ದವು. ಮಂಜುಘೋಷೆ ಶಾಪವಿಮುಕ್ತಳಾಗಿ ಮಗುವನ್ನು ಅಲ್ಲೇ ಬಿಟ್ಟು ಹೊರಟು ಹೋಗುತ್ತಾಳೆ.

ವಿಭಾಂಡಕ ಮುನಿಯು ತ್ರಿಕಾಲದರ್ಶಿಯಾಗಿದ್ದರಿಂದ ಆ ಮಗುವಿನ ಮಹಿಮೆಯನ್ನು ಅರಿತು ಸಾಕುತ್ತಾನೆ. ತಲೆಯಲ್ಲಿ ಕೊಂಬು (ಶೃಂಗ) ಇರುವುದರಿಂದ ಆ ಮಗುವಿಗೆ ರಿಶ್ಯಶೃಂಗ ಎಂದು ಹೆಸರಿಡುತ್ತಾನೆ. ಅಶ್ವಿನಿ ದೇವತೆಗಳಿಂದ ವರಗಳನ್ನು ಕೊಡಿಸುತ್ತಾನೆ. ರಿಶ್ಯಶೃಂಗ ಬೆಳೆದು ದೊಡ್ಡವನಾದ ಮೇಲೆ ಮುನಿಯಾಗಿ ಪ್ರಖ್ಯಾತಿಯನ್ನು ಗಳಿಸುತ್ತಾನೆ. ಅದನ್ನು ಕೇಳಿದ ದಶರಥ ಮಹಾರಾಜನು ಆತನನ್ನು ಕರೆತಂದು ಪುತ್ರಕಾಮೇಷ್ಠಿ ಯಾಗವನ್ನು ಮಾಡಿಸುತ್ತಾನೆ. ಆಗ ರಾಮ, ಲಕ್ಷ್ಮಣ, ಭರತ, ಶತೃಘ್ನರು ಹುಟ್ಟುತ್ತಾರೆ. ರಾವಣನನ್ನು ಕೊಂದು ಲಂಕೆಯಿಂದ ಮರಳುವಾಗ ರಾಮ-ಲಕ್ಷ್ಮಣರು ಈ ರಿಶ್ಯಶೃಂಗ ಮುನಿಯ ಆಶ್ರಮಕ್ಕೆ ಬಂದು ಅಲ್ಲಿ ರಾಮೇಶ್ವರ, ಲಕ್ಷ್ಮಣೇಶ್ವರ, ಹನುಮಂತೇಶ್ವರಗಳನ್ನು ಪ್ರತಿಷ್ಠಾಪಿಸುತ್ತಾರೆ. ಈ ಮುನಿಯ ಕಾರಣದಿಂದಲೇ ಆ ಪ್ರದೇಶಕ್ಕೆ ರಿಶ್ಯಶೃಂಗಿ ಎಂಬ ಹೆಸರು ಬಂತು. ಆನಂತರ ರಿಶಿಪಳ್ಳಿ ಆಯಿತು ಎಂದು ಶಾಸನದಲ್ಲಿ ಹೇಳಲಾಗಿದೆ.

ಇಲ್ಲಿ ಬಹುದೀರ್ಘವಾದ ಕತೆ ಇದ್ದು ಸಿರಸಂಗಿ ಊರಿನ ಐತಿಹ್ಯವನ್ನು ಸೂಕ್ತವಾಗಿ ಚಿತ್ರಿಸಲಾಗಿದೆ. ಇಲ್ಲಿ ಪುರಾಣ ಕಲ್ಪನೆ ಕಾವ್ಯಾತ್ಮಕವಾಗಿ ಮೂಡಿ ಬಂದಿದ್ದು ಗಮನೀಯ. ಮುಂದೆ ಈ ರಿಶ್ಯಶೃಂಗವೇ ಅಪಭ್ರಂಶಗೊಂಡು ಆಡುಮಾತಿನ ಓಘದಲ್ಲಿ ಸಿರಸಂಗಿ ಆಗಿದೆ.

೩. **ವ್ಯಕ್ತಿ ಪ್ರಧಾನ ಐತಿಹ್ಯಗಳು :** ಹಲವಾರು ವ್ಯಕ್ತಿಗಳು ಸಮಾಜಮುಖಿಯಾಗಿ ಕಾರ್ಯನಿರ್ವಹಿಸುತ್ತಲೇ ದೈವತ್ವಕ್ಕೇರುವುದು ನಮ್ಮ ದೇಶದಲ್ಲಿ ಸಾಮಾನ್ಯ ಸಂಗತಿಯಾಗಿದೆ. ಜನರ ಕಷ್ಟಗಳನ್ನು ಪರಿಹರಿಸುವ ವ್ಯಕ್ತಿ ಕಾಲಾಂತರದಲ್ಲಿ ದೈವತ್ವಕ್ಕೇರುತ್ತಾನೆ ಅಥವಾ ಜೊತೆಗೆ ಉದಾತ್ತ ವ್ಯಕ್ತಿಯಾಗಿ ನೆಲೆ ನಿಲ್ಲುವ ವ್ಯಕ್ತಿಯ ಸುತ್ತ ಹಲವಾರು ಕಥೆಗಳು ಹುಟ್ಟಿಕೊಳ್ಳುತ್ತವೆ. ಇದು ತಲೆಮಾರಿನಿಂದ ತಲೆಮಾರಿಗೆ ಹರಿದುಕೊಂಡು ಬಂದು ನೈತಿಕ ಬಲವನ್ನು ನೀಡುವ ಪ್ರೇರಣಾದಾಯಿಯಾಗಿ ನಿಲ್ಲುವ ಪರಂಪರೆ ಬೆಳೆದು ಬರುತ್ತದೆ. ಹಾಗಾಗಿ ವಿಶಿಷ್ಟ ವ್ಯಕ್ತಿಗಳ ಸುತ್ತ ಆತ ಬದುಕಿದ್ದಾಗಲೋ ಅಥವಾ ಮರಣ ಹೊಂದಿದ ನಂತರವೋ ಹುಟ್ಟಿಕೊಳ್ಳುವ ಕಥೆಗಳನ್ನೇ ವ್ಯಕ್ತಿ ಪ್ರಧಾನ ಐತಿಹ್ಯಗಳು ಎಂದು ಇಲ್ಲಿ ಗುರುತಿಸಲಾಗಿದೆ.

'ಎಲ್ಲ ವ್ಯಕ್ತಿಗಳ ಬಗೆಗೂ ಐತಿಹ್ಯ ಹುಟ್ಟಿಕೊಳ್ಳುವುದಿಲ್ಲ. ಯಾವ ವ್ಯಕ್ತಿ ಅಸಾಮಾನ್ಯ ಸಾಧನೆಗಳನ್ನೆಸಗಿರುತ್ತಾನೋ, ತನ್ನ ಗೆಯ್ಮೆ-ನಡತೆಗಳಿಂದಾಗಿ ಯಾರು ಪ್ರಖ್ಯಾತ ಅಥವಾ

ಕುಖ್ಯಾತವೆನಿಸಿರುತ್ತಾರೋ ಅಂಥವನ (ಅಂಥವಳ) ಮೇಲೆ ಒಂದಲ್ಲದಿದ್ದರೊಂದು ಐತಿಹ್ಯ ಹುಟ್ಟಿಕೊಳ್ಳುತ್ತದೆ. ಸಮಾಜ ಸೇವೆ, ಪರೋಪಕಾರ, ಸಾಹಸ ಕಾರ್ಯ, ಶೌರ್ಯ ಪ್ರದರ್ಶನ–ಮೊದಲಾದ ಕಾರ್ಯಗಳನ್ನೆಸಗಿ ಪ್ರಖ್ಯಾತರಾದವರ ಬಗೆಗೂ ; ಕಳ್ಳತನ, ಕೊಲೆ, ಸುಲಿಗೆ, ದರೋಡೆ – ಇತ್ಯಾದಿಗಳನ್ನೆಸಗಿ ಕುಖ್ಯಾತರೆನಿಸಿಕೊಂಡವರ ಬಗೆಗೂ ಐತಿಹ್ಯಗಳು ಹುಟ್ಟಿಕೊಳ್ಳುವುದು ಸ್ವಾಭಾವಿಕ'[೩೪] ಎನ್ನುವ ಮಾತುಗಳನ್ನು ಗಮನಿಸಿದಾಗ ವ್ಯಕ್ತಿ ಐತಿಹ್ಯಗಳ ಮಹತ್ವ ಅರಿವಾಗುತ್ತದೆ.

ತ್ರಿಕಾಲ ಯೋಗಿ ಶಾಸನ

'... ಘನ ಘನ ಗರ್ಜ್ಜನಂ ನೆಗ
ಟೆ ವೃಷ್ಟಿ ನಿರಂನ್ತರಮಾಗೆ ಮಿಂ
ಚು ಸಂಜನಿಸೆ ಸಿಡಿಲ್ಗಳೆ
ಯ್ದೆ ಭಯಮಂ ಪಡೆಯು
ತಿರೆ ವೃಕ್ಷಮೂಳದೊಳ್
ನಮಿತಭವ್ಯರವ್ಯ
ಯಗುಣರ್ಜಿನನು
ತ ತ್ರಿಕಾಳಯೋಗಿ..'[೩೫]

ಎನ್ನುವ ವಿಷಯ ಕೊಪ್ಪಳದ ಆಗ್ನೇಯ ದಿಕ್ಕಿನ ಕೋಟೆಗೆ ಸೇರಿಸಿದ್ದ ೧೨ನೇ ಶಾಸನದಲ್ಲಿ ಬರುತ್ತದೆ. ಗೊಲ್ಲಾಚಾರ್ಯನ ಶಿಷ್ಯ ತ್ರಿಕಾಲಯೋಗಿ ತಪಸ್ಸು ಕುಳಿತಾಗ ಆತನ ತಪವನ್ನು ಕೆಡಿಸಲು ಮೋಡಗಳು ಆರ್ಭಟಿಸಿದವು. ಸಿಡಿಲು–ಮಿಂಚುಗಳು ಹೆದರಿಸಿದವು. ಮಳೆಯಂತೂ ಬಿಟ್ಟು ಬಿಡದೇ ಸುರಿಯುತ್ತಿತ್ತು ಎಂಬ ವಿಷಯ ಇಲ್ಲಿ ಬರುತ್ತದೆ. ಅಂದರೆ ತ್ರಿಕಾಲಯೋಗಿಯ ತಪಸ್ಸಿನ ಶಕ್ತಿಯನ್ನು ಇಲ್ಲಿ ಹೇಳಲಾಗಿದೆ. ಒಂದು ರೀತಿಯಲ್ಲಿ ತ್ರಿಕಾಲಯೋಗಿ ಪುರಾಣದ ವ್ಯಕ್ತಿಯೇನೋ ಎಂಬಂತೆ ಇಲ್ಲಿ ಚಿತ್ರಿಸಲಾಗಿದೆ. ಯಾಕೆಂದರೆ ಪುರಾಣಗಳಲ್ಲಿ ಬರುವ ಋಷಿ–ಮುನಿಗಳು ತಪಸ್ಸಿಗೆ ಕುಳಿತಾಗ, ಅವರ ತಪಸ್ಸನ್ನು ಕೆಡಿಸಲು ಇಂತಹ ಉಲ್ಲೇಖಗಳು ಬರುತ್ತವೆ.

ಕೊಪ್ಪಳದ ಆಗ್ನೇಯ ದಿಕ್ಕಿಗೆ ಸೇರಿಸಿದ್ದ ೨೬ನೇ ಶಾಸನದಲ್ಲಿ ಹೀಗೆ ಬರುತ್ತದೆ ;

'... ... ಇರುಳುಂ ಪಗಲುಂ ತಪಮಿನ್ತೆ ಸನ್ದು
ದೆಂಬಕದ ಬರರೆಯ್ದೆ ತೋಱದಿಟ್ಬಾದಲಿನ್ದಸುವ
ಸುಚಿತ್ತದಿನ್ದಂ ಕಳೆದೆಯ್ದಿದ ಸುಗತಿಯಂ ಮಲ
ಧಾರಿಗಳಗ್ರ ಸೂರಿಗಳ್ // ಸ್ಮರನರಲಂಬುಗಳ್ಮ ನಮ
ನುಟಳ್ಚಿದ ದಿಶ್ಚರಿತಂ ನೆಗಟ್ತೆಯಳ್ವೊರೆಯದೆ ಮೋಹ

ಪಾಶದ ತೊಡರ್ಪ್ಪಣಮಿಲ್ಲದ ಕರ್ಮ್ಮಬನ್ಧದೊಳ್ಕೊರ[ಳ]

[ದಾ]ಚಿತ್ತದಿನ್ತೊಱದು ನೋನ್ತಪಜೀವಿತದಿನೆ ಮುಕ್ತಿಯೊಳ್

..ರೆಧನುವಿನ ಮಾನುಷಮೀ ಲೋಕದೊಳಿ ಮಲಧಾರಿದೇವರ

... ... ... ... ... ... ... ... ... ... ... ... ... ... ... ...

... ಮಳಧಾರಿದೇವರಿ.......

ನೆಟ್ಟನೆ ಪೊಗಟ್ಟುದಂ ನಿಜಲೋಕದೊಳನ್ತದಕೆ

ಭೂಭುವನಮೊಟಿಲ್ದು ಬಣ್ಣಿಸಿದುದಿ

ನ್ದ್ರನು ಮಾಡಿದಿನಿನ್ದ್ರಲೋಕದೊಳ್ದಿವಿಜರೊ

ಲ್ದು ಕುಡೆ ಗುಡಿಗಟ್ಟಿದರೇಮ್ಮುನಿಪ

ರ್ಮ್ಮಹಾತ್ಮರೋ'[೩೬]

ಈ ಶಾಸನದಲ್ಲಿ ಕೊಂಡಕುಂದಾನ್ವಯ ದೇಸಿಗಣದ ಶ್ರೀಧರ ವಿಮುಕ್ತ ಭಟಾರರ ಶಿಷ್ಯ ಮಲಧಾರಿ ಮುನಿಯು ಪಾಪವೆಂಬ ಕಂಬವನ್ನು ಮುರಿದು, ಇಂದ್ರಿಯಗಳನ್ನು ಗೆದ್ದು, ಹಗಲು ಇರುಳು ತಪಸ್ಸು ಮಾಡಿ ಸದ್ಗತಿ ಪಡೆದನು. ಈತನ ತಪದ ಪರಿಣಾಮ ಮನ್ಮಥ ಸನಿಹಕ್ಕೂ ಸುಳಿಯಲಿಲ್ಲವಂತೆ ; ಬಾಯಾರಿಕೆ ಇಂಗಿ ಹೋಯಿತು ; ಕರ್ಮ ನಾಶವಾಯಿತು ಎಂದಿರುವುದಲ್ಲದೆ ಈ ಮುನಿಯು ಸುಗತಿಯನ್ನು ಸಾಧಿಸಿದಾಗ ಇಂದ್ರಲೋಕದಲ್ಲಿ ಇಂದ್ರನು ಸಂತೋಷದಿಂದ ದೇವತೆಗಳೊಡನೆ ಕುಣಿದಾಡಿದ ವಿಷಯ ಇಲ್ಲಿ ಬಂದಿದೆ. ಮಲಧಾರಿ ಮುನಿಯ ಶ್ರೇಷ್ಠತೆಯನ್ನು ಇಲ್ಲಿ ವರ್ಣಿಸಲಾಗಿದೆ. ಮನುಷ್ಯಲೋಕದ ಜಂಜಡಗಳನ್ನು ಬಿಟ್ಟ ಮುನಿಯು ಸದ್ಗತಿ ಪಡೆದಾಗ ಇಂದ್ರಲೋಕ ಖುಷಿ ಪಡುವುದು ಎಂದರೆ ಸಾಮಾನ್ಯವಲ್ಲ. ಒಬ್ಬ ಮಹಾತ್ಮನ ಅಂತ್ಯವನ್ನು ಹೀಗೆ ಹೇಳುವಲ್ಲಿ ಆ ಪರಿಸರದಲ್ಲಿ ಆತನ ಕುರಿತಂತೆ ಮತ್ತಷ್ಟು ಸಂಗತಿಗಳನ್ನು ಸೇರಿಸಿ ಆತನ್ನು ಮತ್ತಷ್ಟು ಎತ್ತರಕ್ಕೇರಿಸುವ ಉದ್ದೇಶ ಈ ಶಾಸನದಲ್ಲಿ ಕಂಡುಬರುತ್ತದೆ.

ರೇವಕಯ್ಯೆ ಶಾಸನ

ಕೊಪ್ಪಳದ ಆಗ್ನೇಯ ದಿಕ್ಕಿಗೆ ಇರುವ ಕೋಟೆಗೆ ಸೇರಿಸಿದ್ದ ೩೩ನೇ ಶಾಸನವು ಹೀಗಿದೆ;

'... ... ತುಂಬುರು

ನಾರದ ಗೀತ ನಿಸ್ವನಂ [ಆ]ಯ

ಮಟಿವಪ್ಸರೋಗಣದ ನ

ರ್ತ್ತನಮೆಂಬಿದು ರೇವಕಯ್ಯೆ

ಕಂತಿಯರೆಳೆಯಿಂ ದಿವಕೆ

ವರೆ ಸ್ವರ್ಗ್ಗದೊಳಾಯ್ತು ಮಹಾ
ಮಹೋತ್ಸವಂ//[೩೭]

ಈ ಶಾಸನದಲ್ಲಿ ಬರುವ ರೇವಕಯ್ಯೆ ಮಾಂಡಳೇಶ್ವರನ ಪತ್ನಿಯಾಗಿದ್ದರೂ ಕಾಣೂರುಗಣದ ಕನಕನಂದಿ ಮುನಿಯಿಂದ ದೀಕ್ಷೆ ಪಡೆದ ಕಂತಿಯಾಗಿದ್ದಂಥವಳು. ಆಕೆ ಸನ್ಯಾಸ ಸ್ವೀಕರಿಸಿ ಮಡಿದಾಗ ದೇವಲೋಕದಲ್ಲಿ ಮಹೋತ್ಸವವನ್ನು ಆಚರಿಸಲಾಯಿತು ಎಂದು ಇಲ್ಲಿ ಪ್ರಸ್ತಾಪ ಬಂದಿದೆ. ಐಹಿಕವಾದ ಜೀವನ ನಶ್ವರ ಎಂದು ತಿಳಿದುಕೊಂಡ ರೇವಕಯ್ಯೆ ಮಾಂಡಳೇಶ್ವರನ ಪತ್ನಿಯಗಿದ್ದರೂ ಕಂತಿಯಾಗಿ, ಸಾಮಾನ್ಯ ಜೀವನ ಸಾಗಿಸಿ ಕೊನೆಗೆ ಸನ್ಯಾಸ ಸ್ವೀಕರಿಸಿ ಮರಣಿಸಿದಾಗ ಆಕೆಯ ಮಹತ್ವವನ್ನು ಅರಿತ ದೇವಲೋಕ ಮಹೋತ್ಸವವನ್ನು ಆಚರಿಸಿತು ಎಂಬುದನ್ನು ಕಂಡಾಗ ಇದು ರೇವಕಯ್ಯೆಯ ಮಹತಿಯನ್ನು ಸಾರುವ ಸಂದೇಶವಾಗಿದೆ. ಮರಣವೇ ಮಹಾನವಮಿ ಎಂದ ಬಸವಣ್ಣನ ಮಾತನ್ನು ಇಲ್ಲಿ ನೆನಪಿಸಿಕೊಳ್ಳಬೇಕು.

ಬಿಜಾಪುರದ ವಸ್ತುಸಂಗ್ರಹಾಲಯದಲ್ಲಿ ಇರುವ ೨೭ನೇ ವೀರಗಲ್ಲಿನ ಮೇಲಿರುವ ಶಾಸನ ಇಂತಿದೆ ;

'[ಉ]ಯ್ಯಲನೇಱು ಸ್ವರ್ಗ್ಗಭುವನಾದಿಗಳಂ ಕೊಳಲೆನ್ದು ದಾಚಿ
...ಯ್ಯನೆ ತೂಳಿ [ಭೈ]ರವಮನಿಮ್ಬನೆ ಪಾಯ್ದೊಡೆ
ನ್ದುಯ್ಯಲೆ ಬನ್ದ ದಿವ್ಯಗಣಿಕಾಂಗನೆಯರ್ಮ್ಮನದೋತು ರಾಗದಿಂ
ಮೆಯ್ಯನೆ ಕೊಣ್ಡು ಪಾಜೆದರ ಸಂಗದೆ ಮುಕ್ತಿಯನೆಯ್ದುವನ್ನೆಗ'[೩೮]

ಎಂದು ಬಂದಿರುವ ಈ ಶಾಸನದಲ್ಲಿ ಲೋಕೆಯ ಪೆರ್ಗಡೆಯ ಮೊಮ್ಮಗ ಸ್ವರ್ಗವನ್ನು ಪಡೆಯಬೇಕು ಎಂದು ಹೋರಾಡಿ ಮಡಿದಾಗ ದೇವಲೋಕದ ಸ್ತ್ರೀಯರು ಸಂತೋಷದಿಂದ ಆತನನ್ನು ಸ್ವರ್ಗಕ್ಕೆ ಕರೆದುಕೊಂಡು ಹೋದರು ಎಂಬ ಉಲ್ಲೇಖ ಬರುತ್ತದೆ. ವೀರಗಲ್ಲಿನ ವಿಷಯವೇ ಇಂಥವುಗಳಿಂದ ಕೂಡಿದ್ದರೂ ಕೂಡ ಇಲ್ಲಿ ಆ ಚಿತ್ರಣವನ್ನು ಮತ್ತಷ್ಟು ಸ್ಫುಟವಾಗಿ ನಿಡಲಾಗಿದೆ. ದೇವಲೋಕದ ಸ್ತ್ರೀಯರು ಬಂದು ವೀರಮರಣವನ್ನಪ್ಪಿದ ವೀರನನ್ನು ಸಂತೋಷದಿಂದ ಸ್ವರ್ಗಕ್ಕೆ ಕರೆದುಕೊಂಡು ಹೋಗುವುದು ವ್ಯಕ್ತಿ ಐತಿಹ್ಯವಾಗಿ ಇಂದಿಗೂ ಕೆಲವು ಕಡೆ ಪ್ರಚಲಿತದಲ್ಲಿದೆ.

ಬಳ್ಳಾರಿ ತಾಲೂಕಿನ ಕುರುಗೋಡು ಗ್ರಾಮದ ಬಸವೇಶ್ವರ ದೇವಾಲಯದ ದಕ್ಷಿಣಕ್ಕೆ ಇರಿಸಿರುವ ಶಾಸನವು ೧೨ನೇ ಶತಮಾನದ್ದಾಗಿದ್ದು, ಇಲ್ಲಿ ಮಲ್ಲಿಸೆಟ್ಟಿ ಎಂಬಾತ ಮಲ್ಲಿಕಾರ್ಜುನ ದೇವರನ್ನು ಪ್ರತಿಷ್ಠಾಪಿಸಿ ದಾನ ನೀಡಿದ್ದು ಹಾಗೂ ಮುದ್ದರಸ ಎಂಬಾತ ಮುದ್ದೇಶ್ವರ ದೇವರನ್ನು ಪ್ರತಿಷ್ಠಾಪಿಸಿ ದಾನ ನೀಡಿದ್ದು ಉಲ್ಲೇಖಿಸುತ್ತದೆ. ಇದು ಒಂದು ದೇವಾಲಯಕ್ಕೆ ಅಥವಾ ದೇವರಿಗೆ ಆ ಹೆಸರು ಯಾಕೆ ಬಂತು ಎಂಬುವುದಕ್ಕೆ ಪೂರಕವಾದ ಸಾಕ್ಷ್ಯ ಒದಗಿಸುತ್ತದೆ.[೩೯]

ಇಲ್ಲಿ ತನ್ನ ಹೆಸರು ಶಾಶ್ವತವಾಗಿರಬೇಕು ಎಂದುಕೊಂಡು ಮಲ್ಲಿಶೆಟ್ಟಿ ಎಂಬಾತ ಮಲ್ಲಿಕಾರ್ಜುನ ದೇವರನ್ನು ಪ್ರತಿಷ್ಠಾಪಿಸಿ, ದಾನ ಬಿಡುವುದು ಮತ್ತು ಮುದ್ದರಸ ಮುದ್ದೇಶ್ವರ ದೇವರನ್ನು ಪ್ರತಿಷ್ಠಾಪಿಸಿ, ದಾನ ಬಿಟ್ಟಿರುವ ವಿಷಯ ಇದೆ. ಇಲ್ಲಿಯ ವಿಚಾರ ಕೂಡ ತುಂಬ ಸ್ಪಷ್ಟವಾಗಿದೆ. ತಮ್ಮ ಹೆಸರು ಅಜರಾಮರವಾಗಿರಬೇಕು ಎಂದು ಪ್ರತಿಯೊಬ್ಬ ವ್ಯಕ್ತಿ ಬಯಸುತ್ತಾನೆ. ಹೀಗಾಗಿ ಸಿರಿವಂತರಾಗಿದ್ದವರು ಇಂತಹ ಸಂಗತಿಗಳಲ್ಲಿ ಆಸಕ್ತರಾದಾಗ ಇಂತಹ ಶಾಸನಗಳು ಕಂಡುಬರುತ್ತವೆ.

ಹೀಗೆ ಉತ್ತರ ಕರ್ನಾಟಕದ ಶಾಸನಗಳಲ್ಲಿ ಕಂಡುಬರುವ ಐತಿಹ್ಯಗಳನ್ನು ಇಲ್ಲಿ ಚರ್ಚೆಗೆ ಒಳಪಡಿಸಲಾಗಿದ್ದು, ದೈವ ಪ್ರಧಾನ ಐತಿಹ್ಯ, ಸ್ಥಳ ಐತಿಹ್ಯ ಮತ್ತು ವ್ಯಕ್ತಿ ಐತಿಹ್ಯಗಳನ್ನು ಪ್ರಮುಖವಾಗಿಟ್ಟುಕೊಂಡು ವಿಷಯವನ್ನು ವಿಶ್ಲೇಷಣೆ ಮಾಡಲಾಗಿದೆ.

## ಪುರಾಣ ಮತ್ತು ಐತಿಹ್ಯ

ಪುರಾಣ ಮತ್ತು ಐತಿಹ್ಯಗಳೆರಡಕ್ಕೂ ಇರುವ ಸಂಬಂಧದ ಬಗ್ಗೆ ಇಲ್ಲಿ ದಾಖಲಿಸಲೇ ಬೇಕಾಗುತ್ತದೆ. 'ಐತಿಹ್ಯಕ್ಕೂ ಪುರಾಣಕ್ಕೂ ಇರುವ ವ್ಯತ್ಯಾಸ ಹಾಗೂ ಸಂಬಂಧಗಳು ಐತಿಹ್ಯದ ಮೂಲಕ ಸಂಪ್ರದಾಯದ ಸಂಬಂಧವನ್ನು ಹೊಂದಿದುದಾದರೂ ಅಲ್ಲಿಯ ವೀರನ ದೊಡ್ಡತನವನ್ನು ಮತ್ತಷ್ಟು ಆಶಯಗೊಳಿಸುವ ಸಲುವಾಗಿ ಪೌರಾಣಿಕ ಲಕ್ಷಣಗಳನ್ನು ಆರೋಪಿಸುವುದು ಸಾಮಾನ್ಯ. ಈ ರೀತಿಯಾಗಿಯೇ ರಾಮ, ಕೃಷ್ಣ ಮೊದಲಾದವರು ಪುರಾಣ ಕಥೆಗಳ ವೀರರಾಗಿ ಮಾರ್ಪಾಡಾಗಿರುವುದು. ಇದೇ ಪ್ರವೃತ್ತಿಯನ್ನು ಜನಪದ ಐತಿಹ್ಯಗಳಲ್ಲಿಯೂ ಕಾಣುತ್ತೇವೆ. ಬಹುತೇಕ ಸಾಂಸ್ಕೃತಿಕ ವೀರರು ಪೌರಾಣಿಕ ವೀರರಾದುದೂ ಕೂಡ ಇದೇ ರೀತಿಯಲ್ಲಿ. ಆದ್ದರಿಂದಲೇ ಐತಿಹ್ಯಕ್ಕೂ ಪುರಾಣಕ್ಕೂ ಇರುವ ಗಡಿರೇಖೆಯನ್ನು ಗುರುತಿಸುವುದು ಸುಲಭವಲ್ಲ. ಐತಿಹ್ಯ ಮತ್ತು ಪುರಾಣಗಳಿಗಿರುವ ಸಂಬಂಧ ತುಂಬ ಸೂಕ್ಷ್ಮವಾದುದು. ಪುರಾಣ ಕಥೆಯ ಪ್ರಧಾನ ಪಾತ್ರಗಳು ದೇವತೆಗಳು ಮತ್ತು ಪ್ರಕೃತಿ ಶಕ್ತಿಗಳು. ಉದ್ದೇಶ–ವಿವರಣೆ ಐತಿಹ್ಯಗಳು ಪ್ರಾಚೀನ ವೀರರನ್ನು ಕುರಿತವು. ಈ ವೀರರ ಕಥೆಗಳು ಆಗಾಗ್ಗೆ ಪೌರಾಣಿಕ ಹಾಗೂ ಭ್ರಾಮಕ ಅಂಶಗಳನ್ನು ಒಳಗೊಂಡಿರುತ್ತವೆ ; ಸತ್ಯಾಂಶವೆಲ್ಲಿ ಕೊನೆಗೊಳ್ಳುತ್ತದೆ ಮತ್ತು ಕಲ್ಪನೆ ಎಲ್ಲಿ ಪ್ರಾರಂಭವಾಗುತ್ತದೆ ಎಂಬುದನ್ನು ತೀರ್ಮಾನಿಸಲು ಕೆಲವು ಸಾರಿ ಅಸಾಧ್ಯವಾಗಬಹುದು. ಆದರೆ ಐತಿಹ್ಯಗಳು ಸಾಕಷ್ಟು ಪ್ರಮಾಣದ ವಾಸ್ತವಿಕ ಅಥವಾ ಚಾರಿತ್ರಿಕ ಸತ್ಯದ ಆಧಾರಗಳ ಮೇಲೆ ರೂಪಿತವಾಗಿರುತ್ತವೆ ಎಂಬುದನ್ನು ಮರೆಯಬಾರದು'[೪೦] ಎಂಬ ಮಾತಿನ ಜೊತೆಗೆ 'ಅನೇಕ ವೇಳೆ ಐತಿಹ್ಯಕ್ಕೂ ಪುರಾಣಕ್ಕೂ ಹೋಲಿಕೆಯಿರುತ್ತದೆ. ಹಲವಾರು ಸಂದರ್ಭಗಳಲ್ಲಿ ಐತಿಹ್ಯ ಮತ್ತು ಪುರಾಣಗಳ ನಡುವಿನ ಅಂತರ ತಿಳಿಯುವುದು ಕಷ್ಟದ್ದಾಗುತ್ತದೆಂದು ಜಾನಪದ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಹೆಚ್ಚಿನ ಸಂದರ್ಭಗಳಲ್ಲಿ ಸಾಮಾನ್ಯ ಜನತೆ ಕೂಡ ಪುರಾಣವನ್ನು ಅದು ಚರಿತ್ರೆಯಲ್ಲ ಎಂದು ತಿಳಿದಿರುತ್ತದೆ.

ಆದರೆ ಐತಿಹ್ಯದ ಬಗೆಗೆ ಜನಸಾಮಾನ್ಯರಲ್ಲಿ ಈ ಧೋರಣೆ ಕಂಡುಬರುವುದಿಲ್ಲ. ಆದ್ದರಿಂದ ಪುರಾಣ ಮತ್ತು ಐತಿಹ್ಯಗಳಲ್ಲಿ ಇದೊಂದು ಪ್ರಮುಖ ವ್ಯತ್ಯಾಸವೆನ್ನಬಹುದು. ಮೇಲಾಗಿ ಪುರಾಣಗಳ ದೀರ್ಘತೆ ಐತಿಹ್ಯಗಳಲ್ಲಿರುವುದಿಲ್ಲ’[೪೧] ಎಂಬ ಮಾತನ್ನೂ ಕಂಡುಕೊಂಡಾಗ ಅಧ್ಯಯನ ಇನ್ನಷ್ಟು ನಿಖರಗೊಳ್ಳುತ್ತದೆ.

ಪುರಾಣಗಳು ಪವಾಡಗಳನ್ನು ಹೇಳುವ ಮೂಲಕ ಒಂದು ಪರಿಸರದ, ವ್ಯಕ್ತಿಯ ಅಥವಾ ಪ್ರಸಂಗದ ಕುರಿತಾದ ವಿವರಣೆಯನ್ನು ನೀಡುತ್ತದೆ ಎಂಬ ಅಂಶ ಎಲ್ಲರಿಗೂ ತಿಳಿದಿರುವಂಥದ್ದೇ ಆಗಿದೆ. ಅವುಗಳಿಗೂ ಕೆಲವು ದಾಖಲೆಗಳನ್ನು ನೀಡುವ ಪರಿಪಾಠ ಇಂದು ಸುರುವಾಗಿದೆ. ರಾಮನ ಅಯೋಧ್ಯೆ, ಕೃಷ್ಣನ ದ್ವಾರಕೆ, ಶಿವನ ಕೈಲಾಸ ಪರ್ವತ ಮೊದಲಾದ ಪರಿಸರಗಳಲ್ಲದ್ದೇ ಇಡೀ ದೇಶದ ತುಂಬ ಹಬ್ಬಿಕೊಂಡಿರುವ ಸೀತೆಯ ಕಾಲು, ಅಷ್ಟಲಿಂಗಗಳು, ಸೀತಿಮನಿ, ರಾವಣ ಸಮಾಧಿ, ಪಾಂಡವರ ಆಶ್ರಯ ತಾಣ ಮೊದಲಾದವುಗಳು ಪೌರಾಣಿಕ ಸಂಗತಿಗಳು ನಿಜ ಎನ್ನಿಸುವಷ್ಟರ ಮಟ್ಟಿಗೆ ನಂಬಿಕೆಯನ್ನು ಪಡೆದುಕೊಂಡಿವೆ. ಐತಿಹ್ಯಗಳು ಕೂಡ ಇದೇ ತೆರನಾದ ನಂಬಿಕೆಗಳಿಗೆ ಕಾರಣವಾಗಿವೆ. ಹೀಗಾಗಿ ಐತಿಹ್ಯ ಮತ್ತು ಪುರಾಣಗಳ ನಡುವಿನ ಅಂತರವನ್ನು ನಿಖರವಾಗಿ ಪತ್ತೆ ಹಚ್ಚುವುದು ಕಷ್ಟಸಾಧ್ಯವಾದ ಕಾರ್ಯವಾಗಿದೆ.

**ಅಡಿಟಿಪ್ಪಣಿಗಳು:**

೧. ದ.ಕ. ಜಿಲ್ಲೆಯ ಐತಿಹ್ಯಗಳು : ಡಾ. ಎ. ಸುಬ್ಬಣ್ಣ ರೈ : ಕನ್ನಡ ಅಧ್ಯಯನ ವಿಭಾಗ, ಮುಂಬಯಿ ವಿಶ್ವವಿದ್ಯಾಲಯ ಮತ್ತು ಜೂನಿಯರ್ ಛೇಂಬರ್, ಮಾಣಿ : ೧೯೯೪ : ಪು-೧೦

೨. ದ.ಕ. ಜಿಲ್ಲೆಯ ಐತಿಹ್ಯಗಳು : ಡಾ. ಎ. ಸುಬ್ಬಣ್ಣ ರೈ : ಕನ್ನಡ ಅಧ್ಯಯನ ವಿಭಾಗ, ಮುಂಬಯಿ ವಿಶ್ವವಿದ್ಯಾಲಯ ಮತ್ತು ಜೂನಿಯರ್ ಛೇಂಬರ್, ಮಾಣಿ: ೧೯೯೪: ಪು.೧೧

೩. ಸಾರಸ : ವಸಂತಕುಮಾರ ತಾಳ್ತಜೆ : ಚಿರಸಾಹಿತ್ಯ ಪ್ರಕಾಶನ, ಬೆಂಗಳೂರು : ೧೯೮೫ : ಪು-೧೨೧

೪. ದ.ಕ. ಜಿಲ್ಲೆಯ ಐತಿಹ್ಯಗಳು : ಡಾ. ಎ. ಸುಬ್ಬಣ್ಣ ರೈ : ಕನ್ನಡ ಅಧ್ಯಯನ ವಿಭಾಗ, ಮುಂಬಯಿ ವಿಶ್ವವಿದ್ಯಾಲಯ ಮತ್ತು ಜೂನಿಯರ್ ಛೇಂಬರ್, ಮಾಣಿ : ೧೯೯೪ : ಪು-೧೬-೧೭

೫. ವಾಲ್ಮೀಕಿ ಸಮುದಾಯ : ರೋಹಿಣಿ ಅಧ್ಯಾಪಕ : ಕನ್ನಡ ವಿಶ್ವವಿದ್ಯಾಲಯ, ಹಂಪಿ : https://kanaja.in/archives/49055

೬. ದ.ಕ. ಜಿಲ್ಲೆಯ ಐತಿಹ್ಯಗಳು : ಡಾ. ಎ. ಸುಬ್ಬಣ್ಣ ರೈ : ಕನ್ನಡ ಅಧ್ಯಯನ ವಿಭಾಗ, ಮುಂಬಯಿ ವಿಶ್ವವಿದ್ಯಾಲಯ ಮತ್ತು ಜೂನಿಯರ್ ಛೇಂಬರ್, ಮಾಣಿ : ೧೯೯೪ : ಪು-೧೫

೭. ಸವದತ್ತಿಯ ಏಳುಕೊಳ್ಳದ ಎಲ್ಲಮ್ಮ : ಡಾ. ಎಂ.ಬಿ. ನೇಗಿನಾಳ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ : https://kanaja.in/archives/37646

೮. http://appaaji.blogspot.in/2012/10/blog-post_4575.html : **Monday, October 1, 2012**

೯. https://kn.wikisource.org/wiki/%E0%B2%AE%E0%B3%88%E0%B2%B8%E0%B3%82%E0%B2%B0%E0%B3%81_%E0%B2%B5%E0%B2%BF%E0%B2%B6%E0%B3%8D%E0%B2%B5%E0%B2%B5%E0%B2%BF%E0%B2%A6%E0%B3%8D%E0%B2%AF%E0%B2%BE%E0%B2%

೧೦. ನೋಡಿ - https://kn.wikisource.org/wiki

೧೧. https://kn.wikisource.org/wiki

೧೨. https://kn.wikisource.org/wiki

೧೩. ಕರ್ನಾಟಕ ಶಾಸನ ಸಂಶೋಧನೆ : ಸಂ-ಭಟ್ ಸೂರಿ ಕೆ.ಜಿ. : ಪು-೧೩೨

೧೪. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧ : ಬಳ್ಳಾರಿ ಜಿಲ್ಲೆ, ಸಂಡೂರು ತಾಲೂಕು, ಶಾಸನ ಸಂಖ್ಯೆ; ೧, ೨, ೩, ಡಾ. ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೫. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧ : ಬಳ್ಳಾರಿ ಜಿಲ್ಲೆ, ಸಂಡೂರು ತಾಲೂಕು, ಶಾಸನ ಸಂಖ್ಯೆ; ೭, ಡಾ. ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೬. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧ : ಬಳ್ಳಾರಿ ಜಿಲ್ಲೆ, ಹಡಗಲಿ ತಾಲೂಕು, ಶಾಸನ ಸಂಖ್ಯೆ; ೩೧, ಡಾ. ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೭. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೯ : ಬಾಗಲಕೋಟೆ ಜಿಲ್ಲೆ : ಪ್ರ.ಸಂ.-ಡಾ. ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ, ಹಂಪಿ : ೨೦೦೬ : ಪು-೧೪೯

೧೮. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೯ : ಬಾಗಲಕೋಟೆ ಜಿಲ್ಲೆ : ಪ್ರ.ಸಂ.-ಡಾ. ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ, ಹಂಪಿ : ೨೦೦೬ : ಪು-೧೪೯

೧೯. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨ : ಕೊಪ್ಪಳ ಜಿಲ್ಲೆ : ಪ್ರ.ಸಂ.-ಡಾ. ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ, ಹಂಪಿ : ೧೯೯೯ : ಪು-೭೦

೨೦. ಶಾಸನ ಸರಸ್ವತಿ : ಡಾ. ಕೈದಾಳ ರಾಮಸ್ವಾಮಿ ಗಣೇಶ : ಕರ್ನಾಟಕ ಇತಿಹಾಸ ಸಂಶೋಧನ ಮಂಡಲಿ, ಧಾರವಾಡ : ೨೦೦೮ : ೧೨೬

೨೧. ಇಲ್ಲಿರುವ ಶ್ಲೋಕ ಸಂಸ್ಕೃತದಲ್ಲಿದೆ.

'ಅಬ್ಬಲೂರು ವರಗ್ರಾಮಂ ಗತ್ವಾರಾಮ ಮಮಾ[ಜ್ಞ]ಯಾ

ತತ್ರವಾಸಂ ಕುರು ಸ್ವಸ್ಥಂ ಯಜಮಾಂ ಭಕ್ತಿಯೋಗತಃ

ಜೈನೈ[ಃ]ಸಹ ವಿವಾದಂ ಚ ಶಂಕಾಂ ಹಿತ್ವಾ ಕುರುಷ್ವಥ

ಸ್ವಶಿರೋಪಿ ಪಣಂ [ಕೃ]ತ್ವಾ ಪುತ್ರತ್ವಂ ವಿಜಯೀಭವ' (ಶಾಸನ ಸರಸ್ವತಿ : ಡಾ. ಕೈದಾಳ ರಾಮಸ್ವಾಮಿ ಗಣೇಶ : ಕರ್ನಾಟಕ ಇತಿಹಾಸ ಸಂಶೋಧನ ಮಂಡಲಿ, ಧಾರವಾಡ : ೨೦೦೮ : ೧೨೭)

೨೧. ದ.ಕ. ಜಿಲ್ಲೆಯ ಐತಿಹ್ಯಗಳು : ಡಾ. ಎ. ಸುಬ್ಬಣ್ಣ ರೈ : ಕನ್ನಡ ಅಧ್ಯಯನ ವಿಭಾಗ, ಮುಂಬಯಿ ವಿಶ್ವವಿದ್ಯಾಲಯ ಮತ್ತು ಜೂನಿಯರ್ ಛೇಂಬರ್, ಮಾಣಿ : ೧೯೯೪ : ಪು-೪೮

೨೨. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨ : ಕೊಪ್ಪಳ ಜಿಲ್ಲೆ : ಪ್ರ.ಸಂ.-ಡಾ. ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ, ಹಂಪಿ : ೧೯೯೯ : ಪು-೩೪೯

೨೩. ಹಂಪಿ ಶಾಸನಗಳು, ಸಂ-೩ : ಸಂ-ದೇವರಕೊಂಡಾರೆಡ್ಡಿ-ಕೆ.ಜಿ. ಭಟಸೂರಿ, ಕಲವೀರ ಮನ್ವಾಚಾರ್, ಪರಮಶಿವಮೂರ್ತಿ : ಕನ್ನಡ ವಿಶ್ವವಿದ್ಯಾಲಯ, ಹಂಪಿ : ಪು-

೨೪. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧ : ಬಳ್ಳಾರಿ ಜಿಲ್ಲೆ : ಪ್ರ.ಸಂ.-ಡಾ. ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ, ಹಂಪಿ : ೧೯೯೮ : ಪು-೨೮

೨೫. ಶಾಸನ ಸಾಹಿತ್ಯ ಸಂಚಯ : ಸಂ-ಎ.ಎಂ. ಅಣ್ಣಿಗೇರಿ-ಮೇವುಂಡಿ ಮಲ್ಲಾರಿ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ : ೧೯೬೧ : ಪು-೨೨

೨೬. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧: ಬಳ್ಳಾರಿ ಜಿಲ್ಲೆ : ಪ್ರ.ಸಂ.-ಡಾ. ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ, ಹಂಪಿ: ೧೯೯೮ : ಪು-೮೭-೮೯

೨೭. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧ : ಬಳ್ಳಾರಿ ಜಿಲ್ಲೆ : ಪ್ರ.ಸಂ.-ಡಾ. ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ, ಹಂಪಿ : ೧೯೯೮ : ಪು-೯೪

೨೮. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧ : ಬಳ್ಳಾರಿ ಜಿಲ್ಲೆ : ಪ್ರ.ಸಂ.-ಡಾ. ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ, ಹಂಪಿ : ೧೯೯೮ : ಪು-೧೭೫

೨೯. ನೋಡಿ : ಜಾನಪದ ಸಾಹಿತ್ಯ ದರ್ಶನ : ಸಂ- ಡಾ. ಎಂ. ಎಂ. ಕಲಬುರ್ಗಿ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ : ೧೯೮೭ : ಪು-೨೦-೨೧

೩೦. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧, ಬಳ್ಳಾರಿ ಜಿಲ್ಲೆ, ಬಳ್ಳಾರಿ ತಾಲ್ಲೂಕು ಕುರುಗೋಡು ಶಾಸನ ಸಂ. ೨, ಸಂ. ದೇವರಕೊಂಡಾರೆಡ್ಡಿ, ಪುಟ-೨

೩೧. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧ : ಬಳ್ಳಾರಿ ಜಿಲ್ಲೆ : ಪ್ರ.ಸಂ.-ಡಾ. ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ, ಹಂಪಿ : ೧೯೯೮ : ಪು-೪೬೪

೩೨. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧ : ಬಳ್ಳಾರಿ ಜಿಲ್ಲೆ : ಪ್ರ.ಸಂ.-ಡಾ. ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ, ಹಂಪಿ : ೧೯೯೮ : ಪು-೪೫೮

೩೩. K.I. : Vol-1 :p.40

೩೪. ದ.ಕ. ಜಿಲ್ಲೆಯ ಐತಿಹ್ಯಗಳು : ಡಾ. ಎ. ಸುಬ್ಬಣ್ಣ ರೈ : ಕನ್ನಡ ಅಧ್ಯಯನ ವಿಭಾಗ, ಮುಂಬಯಿ ವಿಶ್ವವಿದ್ಯಾಲಯ ಮತ್ತು ಜೂನಿಯರ್ ಛೇಂಬರ್, ಮಾಣಿ : ೧೯೯೪ : ಪು-೬೫-೬೬

೩೫. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨ : ಕೊಪ್ಪಳ ಜಿಲ್ಲೆ : ಪ್ರ.ಸಂ.-ಡಾ. ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ, ಹಂಪಿ : ೧೯೯೯ : ಪು-೭೭

೩೬. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨ : ಕೊಪ್ಪಳ ಜಿಲ್ಲೆ : ಪ್ರ.ಸಂ.-ಡಾ. ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ, ಹಂಪಿ : ೧೯೯೯ : ಪು-೯೮

೩೭. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨ : ಕೊಪ್ಪಳ ಜಿಲ್ಲೆ : ಪ್ರ.ಸಂ.-ಡಾ. ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ, ಹಂಪಿ : ೧೯೯೯ : ಶಾ.ಸಂ.೩೩

೩೮. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧೦ : ಬಿಜಾಪುರ ಜಿಲ್ಲೆ : ಪ್ರ.ಸಂ.-ಡಾ. ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ, ಹಂಪಿ : ೨೦೧೧ : ಪು-೫೪

೩೯. ನೋಡಿ : A.R. No.56 of 1904 ; SII IX pt I.No.297

೪೦. https://kn.wikisource.org/wiki/%E0%B2%AE%E0%B3%88%E0%B2%B8%E0%B3 %82%E0%B2%B0%E0%B3%81_%E0%B2%B5%E0%B2% BF%E0%B2%B6%E0%B3%8D%E0%B2%B5%E0%B2%B5%E0%B 2%B3%8D% E0%B2%AF

೪೧. ಸವದತ್ತಿಯ ಏಳುಕೊಳ್ಳದ ಎಲ್ಲಮ್ಮ : ಡಾ. ಎಂ.ಬಿ. ನೇಗಿನಹಾಳ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ : https://kanaja.in/archives/37646

## ಅಧ್ಯಾಯ ಆರು

# ಉತ್ತರ ಕರ್ನಾಟಕದ ಕನ್ನಡ ಶಾಸನಗಳಲ್ಲಿ ಪೌರಾಣಿಕತೆ : ವೈಶಿಷ್ಟ್ಯಗಳು

ಸಾಮಾನ್ಯವಾಗಿ ಪುರಾಣ ಎನ್ನುವುದು ಧಾರ್ಮಿಕ ಹಿನ್ನೆಲೆಯಲ್ಲಿ ವಿವೇಚನೆಯಲ್ಲಿ ಸಾಧಿತವಾಗುವ ಕಥಾಸ್ವರೂಪದ ಒಂದು ಪಾವಾಡಿಕತೆ ಎನ್ನಲಾಗುತ್ತದೆ. ಜಗತ್ತಿನ ಎಲ್ಲ ಮಾನವ ಪರಿಸರದಲ್ಲೂ ಪುರಾಣಗಳು ಬೆಳೆದುಕೊಂಡು ಬಂದಿವೆ. ಇಡೀ ಜಗತ್ತಿನಲ್ಲಿ ಬಹಳಷ್ಟು ಜನ ಪುರಾಣ-ಪುಣ್ಯಕಥೆಗಳನ್ನು ನಂಬಿಕೊಂಡು, ಅವು ಸರ್ವಶ್ರೇಷ್ಠ ಮೌಲ್ಯಗಳನ್ನು ಪ್ರತಿಪಾದಿಸುವ ಮನುಷ್ಯ ಬದುಕಿನ ದಾರಿ ದೀಪಗಳು ಎಂದೇ ನಂಬುತ್ತಾರೆ. ಪುರಾಣಗಳನ್ನು ಅಪೌರುಷೇಯ ಎಂದು ಕೂಡ ವೈದಿಕ ಧರ್ಮದಲ್ಲಿ ಹಿಂದಿನಿಂದಲೂ ನಂಬಿಕೊಂಡು ಬರಲಾಗುತ್ತದೆ. ಪುರಾಣಗಳು ಮನುಷ್ಯ ಬದುಕಿಗಿಂತ ಮೊದಲೇ ಈ ಜಗತ್ತಿನಲ್ಲಿ ಇದ್ದು, ಅವು ಮನುಷ್ಯನ ಬದುಕನ್ನು ಸಫಲಗೊಳಿಸುತ್ತವೆ ಎಂದು ಕೂಡ ನಂಬಲಾಗುತ್ತದೆ. ದೈವಿ ಮೂಲದ ಕತೆಗಳನ್ನು ಒಳಗೊಂಡ ಪುರಾಣಗಳು ಹೇಗೇ ಇದ್ದರೂ ಅವುಗಳನ್ನು ಅನುಸರಿಸಿಕೊಂಡು ಮನುಷ್ಯ ನಡೆಯಬೇಕು ಎಂಬುದನ್ನೂ ಹೇಳಲಾಗುತ್ತದೆ. ಹಾಗೆಯೇ ಪುರಾಣಗಳನ್ನು ಪ್ರಶ್ನಿಸುವಂತಿಲ್ಲ ಎಂಬ ಪ್ರತೀತಿಯೂ ಉಂಟು.

'ಪುರಾಣವು 'ಪುರಾ'ದಿಂದ ಬಂದದ್ದು. ಪುರಾ ಎಂದರೆ ಹಳೆಯದು (ನೋಡಿ-ಪುರಾಣವಾಪಿ – ಹಳೆಯಬಾವಿ). ನಮ್ಮ ಪ್ರಾಚೀನರಿಗೆ ಇತಿಹಾಸ, ಪುರಾಣಗಳೆರಡೂ ವಾಸ್ತವಗಳೇ. ಆದರೆ ಅವುಗಳಿಗೆ ಈ ವ್ಯತ್ಯಾಸವನ್ನು ಮಾಡುವಂತೆ ತೋರುತ್ತದೆ. ಇತಿಹಾಸವು ಕಾಲಮಾನದಲ್ಲಿ ನಡೆದುದ್ದನ್ನು ಹೇಳಿದರೆ ಪುರಾಣ ಅದಕ್ಕಿಂತ ಬಹು ಬಹು ಹಿಂದೆ ನಡೆದುದ್ದನ್ನು ಹೇಳುತ್ತದೆ. (ಆಧುನಿಕ ಪರಿಭಾಷೆಯಲ್ಲಿ ಹೇಳುವುದಾದರೆ, ಒಂದು History, ಇನ್ನೊಂದು Pre-History ಅಥವಾ Proto-History"[೧] ಸ್ಮೃತಿಯಿಂದ ಕೂಡ ಪುರಾಣದ ಮೂಲವನ್ನು ಗ್ರಹಿಸುವ ಕೆಲವು ಅಭಿಪ್ರಾಯಗಳೂ ಕಂಡುಬರುತ್ತವೆ. ಯಾಕೆಂದರೆ ಸ್ಮೃತಿ ಎಂದರೆ ನೆನಪು. ಬರೆದಿಡುವ ಪರಿಪಾಠವಿಲ್ಲದ

ಕಾಲದಲ್ಲಿ ಮೌಖಿಕವಾಗಿ ಪುರಾಣಗಳ ಪಠಣ ನಡೆಯುತ್ತಿತ್ತು. ಹೀಗಾಗಿ ನೆನಪಿನಲ್ಲಿ ಇಟ್ಟುಕೊಂಡು ಹೇಳುವ ಕಥೆಗಳು ಎಂಬ ಅರ್ಥವೂ ಪುರಾಣಗಳಿಗೆ ಇದ್ದಿರಬಹುದು ಎನಿಸುತ್ತದೆ. ಈ ಅರ್ಥವ್ಯಾಪ್ತಿಯನ್ನು ಗಮನಿಸಿದಾಗ ಪುರಾಣವು ನಿಶ್ಚಯವಾಗಿ ಮೊದಲಿಗೆ ಜಾನಪದೀಯ ಹಿನ್ನೆಲೆಯಲ್ಲಿಯೇ ಹುಟ್ಟಿಕೊಂಡಿರಬಹುದು ಎನಿಸುತ್ತದೆ.

ಪುರಾಣಗಳಿಗೆ ಸಂಬಂಧಿಸಿದಂತೆ ಭಾರತದಲ್ಲಿ ತುಂಬ ಆದರಣೀಯ ಸ್ಥಾನವಿದೆ. ದೈವ ಮತ್ತು ಸಾಂಸ್ಕೃತಿಕ ಮಹಾವ್ಯಕ್ತಿಗಳಿಗೆ ಸಂಬಂಧಿಸಿದಂತೆ ಇಲ್ಲಿ ಕತೆಗಳು ಕಾಣಿಸಿಕೊಳ್ಳುತ್ತಿದ್ದು, ಒಂದು ಸಮುದಾಯದ ಜಗತ್ತಿನ ಸೃಷ್ಟಿ, ಲಯಗಳ ಕಾರಣ ಮೀಮಾಂಸೆ ಅಥವಾ ಉದಾತ್ತ ಬದುಕಿನ ನೆಲೆಗಳನ್ನು ಪುರಾಣಗಳಲ್ಲಿ ಹೇಳಲಾಗುತ್ತದೆ. ಇಲ್ಲಿ ಪಾವಾಡಿಕ ಸಂಗತಿಗಳು ಸಹಜವಾಗಿಯೇ ಕಾಣಿಸಿಕೊಳ್ಳುತ್ತವೆ. ಮಾನವ ಸಹಜವಲ್ಲದ ಕ್ರಿಯೆಗಳು, ಉದಾತ್ತ, ವೀರ, ತ್ಯಾಗಗಳ ಸಮ್ಮಿಲನವೂ ಇಲ್ಲಿಯ ಪ್ರಮುಖ ಆಶಯವಾಗಿರುತ್ತದೆ. ಪುರಾಣದ ಕಥೆ ಮಾನವ ಬದುಕನ್ನು ನಿರ್ದಶನ ಮಾಡುತ್ತದೆ ಎಂಬ ಮಾತುಗಳನ್ನೂ ಹೇಳಲಾಗುತ್ತದೆ.

ಪುರಾಣಗಳ ಸೃಷ್ಟಿಯಾಗಲು ಹಲವಾರು ಕಾರಣಗಳನ್ನು ನಾವು ಕಂಡುಕೊಳ್ಳಬಹುದು. ಒಂದು ಸಮುದಾಯದ ಬದುಕನ್ನು ನಿರ್ವಚಿಸಲು, ಸಮುದಾಯದ ಮೌಲ್ಯಗಳನ್ನು ಪಸರಿಸಲು, ಸಮುದಾಯ ನೀತಿ–ನಿಯಮಗಳ ಪ್ರಸರಣೆ ಮಾಡಲು, ಎಲ್ಲಕ್ಕಿಂತ ಮುಖ್ಯವಾಗಿ ತಮ್ಮ ಸಮುದಾಯ ಎಲ್ಲ ಸಮುದಾಯಗಳಿಗಿಂತ ಹೇಗೆಲ್ಲ ಭಿನ್ನವಾಗಿದೆ ಎಂಬುದನ್ನು ತೋರಿಸುವ ಸಲುವಾಗಿಯೇ ಪುರಾಣಗಳ ಸೃಷ್ಟಿಯಾಗಿದೆ ಎಂದರೆ ತಪ್ಪಾಗುವುದಿಲ್ಲ. ಹೀಗೆ ಭಿನ್ನತೆಯನ್ನು ತೋರಿಸುವಾಗ ಅತಿಮಾನುಷವಾದ ಸಂಗತಿಗಳನ್ನು ಸೇರಿಸಿ ಕಥೆಗಳನ್ನು ಕಟ್ಟಲಾಗುತ್ತದೆ. ಶಿಷ್ಟ ರಕ್ಷಣೆ ; ದುಷ್ಟ ಶಿಕ್ಷೆ ಎಂಬುದನ್ನೇ ಸಾರಿ ಹೇಳುತ್ತಿದ್ದರೂ ಕೂಡ ಮೂಲದ ಆಶಯ ತಮ್ಮ ಸಮುದಾಯ ವ್ಯಕ್ತಿ ಅಥವಾ ನಡೆಯೊಂದನ್ನು ಎಲ್ಲರೂ ಒಪ್ಪಿಕೊಳ್ಳಬೇಕು ಎಂಬುದೇ ಆಗಿರುತ್ತದೆ.

'ಯಾವುದೇ ಪರಂಪರೆಯ ಪುರಾಣವಾಗಲಿ ಅವುಗಳಲ್ಲಿ ಕೆಲವು ಮುಖ್ಯವಾದ ಕಥೆಗಳಿರುತ್ತವೆ. ಈ ಕಥೆಗಳ ವಿಷಯ ವಿಶ್ವದ ಸೃಷ್ಟಿಯನ್ನು ಕುರಿತದ್ದಾಗಿರುತ್ತದೆ. ಯಾವುದೇ ಸಮಾಜ ತನ್ನ ವ್ಯವಸ್ಥೆಯು ಸುಸೂತ್ರವಾಗಲು ಹಲವಾರು ಆಚರಣೆಗಳನ್ನು ರೂಪಿಸಿಕೊಂಡಿರುತ್ತದೆ. ಇವುಗಳಲೆಲ್ಲ ಒಂದಲ್ಲ ಒಂದು ರೀತಿಯಲ್ಲಿ ವಿಶ್ವದ ಸೃಷ್ಟಿಯ ಉಲ್ಲೇಖವಿರುತ್ತದೆ. ತೀರ ಇತ್ತೀಚಿನವರೆಗೆ ನಮ್ಮ ಮಹಾರಾಜರುಗಳ ಪಟ್ಟಾಭಿಷೇಕ ಕಾಲದಲ್ಲಿ ನಡೆಸುವ ಆಚರಣೆಗಳು ಈ ವಿಶ್ವಸೃಷ್ಟಿಯ ಸಾಂಕೇತಿಕ ಪುನರಭಿನಯಗಳೇ ಆಗಿದ್ದವು. ಮೆಸಪಟೋಮಿಯಾದ ಮಹಾಕಾವ್ಯ 'ಎನುಮಾ ಎಲಿಷ್' ಪ್ರಪಂಚದ ಹುಟ್ಟನ್ನು ಹೇಳುತ್ತದೆ. ವಿಶ್ವದ ಅವ್ಯವಸ್ಥೆಯನ್ನು ಕೊನೆಗಾಣಿಸಿ ವ್ಯವಸ್ಥೆಯನ್ನು ಸ್ಥಾಪಿಸಿದ ಕಥೆ ಅದು. ನಮ್ಮಲ್ಲಿಯೂ ಪೃಥ್ವಿ ಪತಿಯು ವಿಷ್ಣುವಿನ ಅಂಶ ಎಂಬ ಸಮರ್ಥನೆಯ ಕಥೆಗಳಿವೆಯಷ್ಟೆ. ಆಳುವ ರಾಜರ ಅಧಿಕಾರವನ್ನು ಸಮರ್ಥಿಸುವುದಕ್ಕೆ ಪುರಾಣಗಳು ಒದಗಿ ಬರುತ್ತವೆ'[೨] ಸೃಷ್ಟಿ

ಮತ್ತು ಲಯ ಎರಡನ್ನೂ ಕಾರ್ಯ ಕಾರಣ ಸಂಬಂಧಗಳ ಮೂಲಕ ನೀತಿ ನಿರೂಪಣೆಯಂತೆ ಪುರಾಣವು ಬಿಚ್ಚಿಕೊಳ್ಳುತ್ತದೆ. ಹೀಗಾಗಿ ಪುರಾಣವು ಒಂದು ಸಮುದಾಯದ ಅಧಿಕಾರಬದ್ಧ ನಡಾವಳಿಗಳನ್ನು ಹೇಳಲು ಹೆಚ್ಚು ಉತ್ಸುಕವಾಗಿರುತ್ತವೆ ಎಂಬ ಪ್ರಮೇಯ ಸಿದ್ಧಗೊಳ್ಳುತ್ತದೆ.

'ವಿಶಿಷ್ಟ ಬಗೆಯ ಸಾಹಿತ್ಯ ಪ್ರಕಾರವೆಂದು ಪರಿಗಣಿಸಲು ಅಗತ್ಯವಾದ ಹಲವು ಲಕ್ಷಣಗಳು ಪುರಾಣಗಳಲ್ಲಿರುವುದು ನಿಜ. ಪುರಾಣಗಳನ್ನು ಸಾಮಾನ್ಯ ದರ್ಜೆಯ ಸಂಸ್ಕೃತ ಭಾಷೆಯಲ್ಲಿ, ಬಹುತೇಕ ಶ್ಲೋಕಗಳಲ್ಲಿ ಕೆಲವೊಮ್ಮೆ ತ್ರಿಷ್ಟುಭ್ ಛಂದಸ್ಸಿನಲ್ಲಿ ಅಥವಾ ಗದ್ಯದಲ್ಲಿ ರಚಿಸಲಾಗಿದೆ. ಬಹುಮಟ್ಟಿನ ಪುರಾಣಗಳು ಪ್ರಶ್ನೋತ್ತರ ರೂಪದಲ್ಲಿವೆ. ಹಿಂದೂ ದೇವಾನುದೇವತೆಗಳು ಮತ್ತು ಅತಿಮಾನುಷ ಜೀವಿಗಳ ಚರಿತೆಯಯ ಪುರಾಣಗಳ ಮುಖ್ಯ ವಸ್ತು ವಿಷಯ. ಅಲ್ಲಲ್ಲಿ ಪ್ರಖ್ಯಾತ ಋಷಿಮುನಿಗಳು ಮತ್ತು ಮಾನವ ಸ್ತ್ರೀ ಪುರುಷರ ಕತೆಗಳನ್ನು ಪೋಣಿಸಿರುವುದೂ ಉಂಟು. ಅವುಗಳನ್ನು ನಿರೂಪಿಸುವ ಧಾಟಿಯು ಒಂದು ಬಗೆಯ 'ಪುನರ್‌ಕಥನ' (epigonic) ರೂಪದ್ದು ; ಅಂದರೆ ನಿರೂಪಕನು ಒಂದಾನೊಂದು ಕಾಲದಲ್ಲಿ ಕೇಳಿದ್ದನ್ನು ಅಸ್ಫುಟವಾಗಿ ನೆನಪಿನಲ್ಲಿಟ್ಟುಕೊಂಡು ಹೇಳುತ್ತಿರುವಂತೆ ಅಥವಾ ಕೇವಲ ಸ್ಥೂಲರೇಖೆಗಳನ್ನು ಮಾತ್ರ ಬಲ್ಲವನಾಗಿದ್ದು, ತನ್ನ ಕಲ್ಪನಾಶಕ್ತಿಯಿಂದ ಅವುಗಳಿಗೆ ಬಣ್ಣ ತುಂಬಿ ಕಥಿಸುತ್ತಿರುವಂತೆ ತೋರುತ್ತದೆ'[೩] ಡಾ. ಕೆ.ಎಲ್. ಗೋಪಾಲಕೃಷ್ಣಯ್ಯ ಅವರು ಪುರಾಣಗಳು ಭಾರತದಲ್ಲಿ ಮಾತ್ರ ಇವೆ ಎಂಬುದಾಗಿ ಅಭಿಪ್ರಾಯಪಡುತ್ತಾರೆ.[೪] ಆದರೆ ಇದು ಸರಿಯಾದ ಸೂಚನೆಯಲ್ಲ. ಮೇಲಿನ ಅವರ ಪುರಾಣದ ವಿವೇಚನೆಯಲ್ಲಿ ಯಾವುದೇ ಕೇವಲ ಭಾರತೀಯ ಪುರಾಣದ ಬಗ್ಗೆ ಅವರು ಮಾತನಾಡಿದ್ದಾರೆ. ಈ ವಿವೇಚನೆಯನ್ನು ಪರಿಗಣಿಸಬಹುದಾದರೆ ಪಾಶ್ಚಿಮಾತ್ಯ ದೇಶಗಳಲ್ಲಿ ಇರುವ ಧಾರ್ಮಿಕ ವಿಜ್ರಂಭಣೆಯ ಪುರಾಣಗಳನ್ನು ಅಲ್ಲಗಳೆಯಬೇಕಾಗುತ್ತದೆ. ಹೀಗಾಗಿ ಇದು ಪುರಾಣಗಳು ಭಾರತಕ್ಕೆ ಮಾತ್ರ ಸೀಮಿತವಾದವುಗಳು ಎನ್ನುವುದರಲ್ಲಿ ಯಾವುದೇ ತರ್ಕವು ಕಾಣಿಸುವುದಿಲ್ಲ.

ಎಲ್ಲ ದೇಶಗಳಲ್ಲಿ ಕಂಡುಬರುವ ಪುರಾಣ-ಪುಣ್ಯಕಥೆಗಳು ಇತಿಹಾಸವನ್ನು ಒಳಗೊಂಡಿರುತ್ತವೆಯೋ ಇಲ್ಲವೋ ಎಂಬುದನ್ನು ಇದುವರಿಗೂ ನಿರ್ದಿಷ್ಟವಾಗಿ ಹೇಳಲಾಗಿಲ್ಲ. ಭಾರತದಲ್ಲಿ ಪುರಾಣ, ಪುಣ್ಯಕಥೆ, ಮಹಾಕಾವ್ಯಗಳನ್ನೂ ಕೂಡ ಇತಿಹಾಸವೆಂದೇ ಬಗೆಯುವ ಮನಸ್ಸಿವರು ತುಂಬ ಜನರಿದ್ದಾರೆ. 'ಪುರಾಣ ಮತ್ತು ಇತಿಹಾಸ ಈ ಎರಡೂ ವೈದಿಕ ಸಾಹಿತ್ಯದಲ್ಲಿ ಜೊತೆ ಜೊತೆಗೆ ಬರುವ ಪದಗಳು. ಮೊದ ಮೊದಲು ಪುರಾಣ ಎಂದರೆ ಪ್ರಾಚೀನವಾದದ್ದು ಎಂದಷ್ಟೇ ಅರ್ಥವಿದ್ದದ್ದು, ಋಗ್ವೇದದ ಪ್ರಯೋಗಗಳಿಂದ ಸ್ಪಷ್ಟವಾಗುತ್ತದೆ. ಅಥರ್ವ ವೇದದಲ್ಲಿ ಪುರಾಣವೆಂದರೆ ಯಜ್ಞಯಾಗಗಳ ಮಧ್ಯಂತರ ಕಾಲಗಳಲ್ಲಿ ಸೇರಿದವರ ಮನರಂಜನೆ ಹಾಗೂ ತಿಳುವಳಿಕೆಗಾಗಿ ಹೇಳಿದ ಕಥೆಗಳು ಅಥವಾ ಐತಿಹ್ಯಗಳು ಎಂಬ ಅರ್ಥವಿದೆ. ಈ ಐತಿಹ್ಯಗಳು ಲಿಖಿತವಾದುವುಗಳೆಂಬ ಬಗ್ಗೆ ಆಧಾರಗಳೇನೂ ಇಲ್ಲ. ಬ್ರಾಹ್ಮಣ ಹಾಗೂ ಉಪನಿಷತ್ತುಗಳ ಕಾಲಕ್ಕೆ ಇದೇ ಅರ್ಥ ಮುಂದುವರಿದರೂ ಅದೇ ಅರ್ಥವನ್ನು ಸೂಚಿಸುವ ಮತ್ತೊಂದು ಪದವಾದ

ಇತಿಹಾಸವೆಂಬುದೂ ಬಳಕೆಯಲ್ಲಿತ್ತು. ಇತಿಹಾಸ ಮತ್ತು ಪುರಾಣಗಳ ನಡುವಣ ವ್ಯತ್ಯಾಸ ಅತ್ಯಂತ ಸೂಕ್ಷ್ಮವಾದದ್ದು ಎನ್ನುತ್ತಾರೆ ವಿದ್ವಾಂಸರು. ಇತಿಹಾಸ ಮತ್ತು ಪುರಾಣ ಈ ಎರಡೂ 'ಪುರಾತನವಾದ ಐತಿಹ್ಯಗಳು' ಎಂಬರ್ಥದಲ್ಲೇ ಬಳಕೆಯಾಗಿವೆ. ವೈದಿಕ ಸಾಹಿತ್ಯದಿಂದಲೇ – ಬ್ರಾಹ್ಮಣ ಮತ್ತು ಉಪನಿಷತ್ತುಗಳು ಸ್ಫೂರ್ತಿ ಮತ್ತು ಸಾಮಗ್ರಿಯನ್ನು ಪಡೆದು ತಮ್ಮದೇ ಆದ ಕಥೆ-ಕಲ್ಪನೆಗಳನ್ನು ಕೂಡಿಸಿಕೊಂಡು ನಿರ್ಮಿತವಾದವುಗಳು ಪುರಾಣಗಳು. ಬರುಬರುತ್ತ ಬದುಕಿನ ಎಲ್ಲವನ್ನೂ ತನ್ನ ತೆಕ್ಕೆಗೆ ತೆಗೆದುಕೊಳ್ಳುತ್ತ ಬೆಳೆದು ಇವುಗಳ ಸಂಖ್ಯೆ ವರ್ಧಿಸಿತು. ಸರ್ವಗ್ರಾಸಿಯಾದ ಇವುಗಳ ಸ್ವರೂಪದಿಂದಾಗಿ, ಗಣ್ಯವಾದ ಮತ್ತು ಸಂರಕ್ಷಿತವಾದ ಎಲ್ಲವನ್ನೂ ಈ ಪುರಾಣಗಳು ಒಳಗೊಂಡು ಜನಾಂಗ ಸ್ಮೃತಿಯ ವಿಶ್ವಕೋಶಗಳಾದವು. ಈ ವಾಙ್ಮಯದೊಳಕ್ಕೆ ಮಹರ್ಷಿ ವ್ಯಾಸರ ಮಹಾಭಾರತವೂ ಸೇರಿಕೊಂಡಿದ್ದಲ್ಲದೆ, ಮಹಾಭಾರತ ಹಾಗೂ ಪುರಾಣಗಳಿಗಿರುವ ಸಾಮ್ಯವನ್ನು ಗುರುತಿಸಿ ಮಹರ್ಷಿ ವ್ಯಾಸರೇ ಈ ಪುರಾಣಗಳನ್ನು ಬರೆದವರೆಂದು ಪರಂಪರೆ ಹೇಳುವಂತಾಯಿತು.'[೫] ರಾಮಾಯಣ ಕೂಡ ಈ ಪರಂಪರೆಯಲ್ಲಿ ಸೇರಿಕೊಂಡುಬಿಟ್ಟಿದೆ. ಹೀಗೆ ರಾಮಾಯಣ-ಮಹಾಭಾರತಗಳು ಕೇವಲ ಕಾವ್ಯ ಎನ್ನುವುದಕ್ಕಿಂತ ಹೆಚ್ಚಾಗಿ ಅವುಗಳನ್ನು ಇತಿಹಾಸ ಎಂದೇ ಇಂದಿಗೂ ಭಾರತದ ಧಾರ್ಮಿಕ ಪ್ರವೃತ್ತಿಯವರು ನಂಬುತ್ತಾರೆ.

ಸಾಂಕೇತಿಕ ಭಾಷೆಯಲ್ಲಿ ರಚನೆಗೊಂಡ ವಿಕೃತ ಚರಿತ್ರೆಯೇ ಪುರಾಣವೆಂದು ಕೆಲವು ವಿದ್ವಾಂಸರು ಪ್ರತಿಪಾದಿಸಿದರೆ, ನೈಸರ್ಗಿಕ ವೈಚಿತ್ರ್ಯಗಳ ಊಹಾತ್ಮಕ ಸಾಂಕೇತೀಕರಣವೇ ಪುರಾಣವೆಂದು ಮತ್ತೆ ಕೆಲವು ವಿದ್ವಾಂಸರು ವಿಶದಪಡಿಸಿದ್ದಾರೆ. ಅಮೂರ್ತ ಭಾವನೆಗಳನ್ನು ಮೂರ್ತಗೊಳಿಸುವ ಸಲುವಾಗಿ ವಿರಚಿಸಿದ ವಿವರಣೆಯೇ ಪುರಾಣವಾಯಿತೆಂಬುದು ಮತ್ತೊಂದು ಮತ. ಆಧುನಿಕ ತಜ್ಞರಲ್ಲಿ ಈ ಮತಗಳ ಬಗ್ಗೆ ಭಿನ್ನಾಭಿಪ್ರಾಯವಿದೆ. 'ಈತನಕ ಪುರಾಣಗಳು ಪರಿಹರಿಸಿರುವ ಸಮಸ್ಯೆಗಳು ವಿರಳ ; ಅವುಗಳು ತಣಿಸಿರುವ ಕುತೂಹಲವಿಲ್ಲ ; ಅವುಗಳು ಸಿದ್ಧಪಡಿಸಿರುವ ಸಿದ್ಧಾಂತಗಳಿಲ್ಲ' ಎಂದು ಸ್ಪಷ್ಟಪಡಿಸಿದ ಮ್ಯಾಲಿನೋವ್‌ಸ್ಕಿಯವರೇ 'ಅನಾಗರಿಕ ಸಮಾಜದಲ್ಲಿ ಪುರಾಣ ಬರಿಯ ಕಟ್ಟುಕತೆಯಲ್ಲ, ಅದೊಂದು ಜೀವಂತ ಸತ್ಯ' ಎಂಬುದನ್ನೊಪ್ಪಿಕೊಳ್ಳುತ್ತಾರೆ. ಸೃಷ್ಟಿಯ ಪ್ರಾರಂಭ ಕಾಲದಲ್ಲಿ ನಡೆದ ಪೌರಾಣಿಕ ಘಟನೆಗಳು ಜಗತ್ತಿನ ಮೇಲೆ ಯಾವಾಗಲೂ ಅಪಾರ ಪ್ರಭಾವ ಬೀರುತ್ತವೆಂಬುದು ಆದಿಮಾನವನ ತಿಳುವಳಿಕೆ. ಲೋಕದ ಜನಸಂಖ್ಯೆಯಲ್ಲಿ ಅರ್ಧಕ್ಕಿಂತಲೂ ಹೆಚ್ಚು ಪಾಲು ಜನ ಈಗಲೂ ಪುರಾಣಗಳನ್ನು ನಂಬುತ್ತಾರೆ. ಎಲ್ಲ ದೇಶಗಳ ಪುರಾಣಗಳನ್ನು ಕಲೆ ಹಾಕಿ, ವಿಶ್ಲೇಷಿಸಿ, ತೌಲನಿಕವಾಗಿ ಅಭ್ಯಸಿಸುವ ತನಕ ಅವುಗಳ ಬಗ್ಗೆ ಇದು ಮಿಥ್ಯಂ ಎಂದು ಸಾರುವುದು ಸರಿಯಲ್ಲ. ಅವುಗಳಲ್ಲಿ ಜಳ್ಳು ಸುಳ್ಳುಗಳೇ ಅಧಿಕ ಪ್ರಮಾಣದಲ್ಲಿರಬಹುದು. ಕೆಲವು ಮಂತ್ರ ಮಾಟ ಸಂಸ್ಕಾರಗಳಿಗೆ ಸಂಬಂಧಿಸಿದುವು ; ನೈಸರ್ಗಿಕ ಕ್ರಿಯೆ ಅಥವಾ ಘಟನೆಗಳನ್ನು ವಿವರಿಸಲು ಹೆಣೆದವು ಕೆಲವು ; ಆ ವಿವರಣೆಗಳಲ್ಲಿ ಅಷ್ಟಿಷ್ಟಾದರೂ ಚಿರಂತನ ಸತ್ಯಗಳಾಗಿದ್ದಿರಬಹುದು. ಕೆಲವು ಪುರಾಣಗಳಿಗೆ ಚಾರಿತ್ರಿಕ ಘಟನೆಗಳು ಆಧಾರವಾಗಿದ್ದಿರಬಹುದು. ಒಟ್ಟಿನಲ್ಲಿ ಮಾನವನ

ಮನೋವಿಕಾಸ ಕ್ರಮವನ್ನು ಗುರುತಿಸಲು ಅವು ತುಂಬ ಸಹಕಾರಿಯಾಗುತ್ತವೆ'[೬] ಎನ್ನುವಲ್ಲಿಗೆ ಪುರಾಣಗಳ ವಿವೇಚನೆ ಬಂದು ನಿಲ್ಲುತ್ತದೆ.

ಹೀಗಾಗಿ ಪುರಾಣಗಳ ನಿರ್ವಚನವಾದ ಮೇಲೆ ಅವು ಬಳಕೆಯಾದ ಸಂದರ್ಭಗಳು ಹಲವಾರು ಕಡೆ ದೊರೆಯುತ್ತವೆ. ಶಾಸನಗಳಲ್ಲಿಯೂ ಕೂಡ ಪುರಾಣಗಳ ಉಲ್ಲೇಖ ಕಾಣಿಸಿಕೊಳ್ಳುತ್ತದೆ. ಪ್ರತಿಯೊಂದು ಶಾಸನವೂ ಕೂಡ ಆ ಶಾಸನ ಬರೆಸಿದಾತನನ್ನು ಹಾಡಿ ಹೊಗಳುತ್ತದೆ. ಅಲ್ಲಿ ಸಹಜವಾಗಿಯೇ ಆತನನ್ನು ಇಂದ್ರ, ಚಂದ್ರ ಎಂಬಿತ್ಯಾದಿಯಾಗಿ ಹೊಗಳಿಕೆ ಬಂದೇ ಬರುತ್ತದೆ. ಆತ ಹೇಗಿದ್ದ ಎನ್ನುವುದಕ್ಕಿಂತ ಹೆಚ್ಚಾಗಿ ಆತನ ಉತ್ಪ್ರೇಕ್ಷಿತ ಗುಣಗಳು ಶಾಸನಗಳಲ್ಲಿ ದಾಖಲಾಗಿರುತ್ತವೆ ಎಂಬುದನ್ನು ಮರೆಯುವಂತಿಲ್ಲ. ಹೀಗಾಗಿ ಪ್ರಸ್ತುತ ಅಧ್ಯಾಯದಲ್ಲಿ ಉತ್ತರ ಕರ್ನಾಟಕದ ಶಾಸನಗಳಲ್ಲಿ ಒಡಮೂಡಿರುವ ಪೌರಾಣಿಕ ಅಂಶಗಳ ವೈಶಿಷ್ಟ್ಯಗಳನ್ನು ಮತ್ತು ಅವು ಇತಿಹಾಸದೊಡನೆ ಹೇಗೆ ಸಮೀಕರಣಗೊಂಡಿದೆ ಎಂಬುದನ್ನು ವಿಶದಪಡಿಸಲಾಗಿದೆ.

ಬಾಗಲಕೋಟೆ ಜಿಲ್ಲೆಯ ಭೈರನಟ್ಟಿ ಗ್ರಾಮದ ಮಾರುತಿ ದೇವಾಲಯದಲ್ಲಿ ಬಿದ್ದಿರುವ ಕಲ್ಲಿನ ಮೇಲೆ ಇರುವ ತೈಲಪನ ಸಾಮಂತ ಸಿಂಧವಂಶದ ನಾಗಾದಿತ್ಯನ ಕುರಿತಾಗಿ ಶಾಸನವಿದೆ. ಅಲ್ಲಿ

@ ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ ತ್ರೈಲೋಕ್ಯ ನಗರಾರಂಭ ಮೂಲ ಸ್ತಂಭಾಯ ಶಂಭವೇ ॥ ಜಯಂತ್ಯಾ
ವಿಷ್ಕ್ರಿತಂ ವಿಷ್ಣೋರ್ವ್ವಾರಾಹಂ ಕ್ಷೋಭಿತಾರ್ಣವಂ ದಕ್ಷಿಣೋನ್ನತ ದಂಷ್ಟ್ರಾಗ್ರ ವಿಶ್ರಾಂತ ಭುವನಂ ನಮಃ ॥ @
ಶ್ರೀಪ್ರಿಥ್ವಿವಲ್ಲಭ ಮಹಾರಾಜಾಧಿರಾಜ ಪರಮೇಸ್ವರ ಪರಮಭಟ್ಟಾರಕಂ ಉತ್ತರೋತ್ತರ ಮಾಗೆ ತೈಲಪ
ಯಂ ರಾಜ್ಯಂಗೆಯ್ಯೆ ಸಕವರ್ಷ ೯೧೧ ವಿಕ್ರಿತಮೆಂಬ ಸಂವತ್ಸರ ಪ್ರವರ್ತ್ತಿಸೆ ಅರಿನ್ರಿಪತಿ ಕರಿ ಕುಂಭಿ ಕುಂಭಸ್ಥಳ ವಿನಿರ್ಗ್ಗತ ಕರವಾಳ ವಿಮುಕ್ತಿ ಮುಕ್ತಾಪಳೋಚ್ಚಿತ ಸಮರ ಸಂಘಟ್ಟಣ ಲಬ್ಧ ವೀರವಿ
ಜಯ ರಾಜ್ಯ ಲಕ್ಷ್ಮೀವಕ್ಷಸ್ಥಳ ದಿಷ್ಟಿವಿಷಕುಳತಿಳಕ ಫಣಾಮಣಿಕಿರಣ ವಿಭಾಸುರ ನಾಗವಂಶೋದ್ಧ ವ ನಾಗಧ್ವಜ ಪ್ರಾತಪ ವಿಜಯಪಱ್ ಘೋಷಣ ವ್ಯಾಘ್ರಲಾಂಚನ ಭೋಗಾವತಿಪುರ ಪರಮೇಸ್ವರ ನನ್ನಿ
ಗಾಸ್ರಯ ರಣರಂಗ ಕೇಸರಿ ವಿಶಿಷ್ಟ ಜನಪ್ರಿಯ ಆಶ್ರಿತ ಜನ ಕಲ್ಪವ್ರಿಕ್ಷ ಪುಸಿಗೆನಿಪ್ಪ ಸರಕ್ರಿತ ಮಱ್ಮತಮನ್ಯಜನ ಮನೋಜ ಸಿಂಧನರಾಯಣ ನಲ್ಲರ್ಗ್ಗೆನಲ್ಲ ಡಾಮರಮಲ್ಲ ಏಕಾಂಗ ಶೂದ್ರಕ ಶ್ರೀ
ಪುಲಿಕಾಲ ॥ ಧರಣೇಂದ್ರೇಹಿಶ್ವರಂ ಮಾನವಭವನುತ ಭೂಲೋಕಮಂ ನೋರ್ಪ್ಪೆನಂದಾದರದಿಂ ತ

ತ್ಸೈನ್ಯಮಂ ಪಿಂತಿರಿಸಿ ವನಿತೆಯುಂ ತಾನಮಾದಕ್ಕರಿದಂ ಬರೆ ಗರ್ಭಮ್ ತೋಱೆ ತದ್ವಲ್ಲಭೆಗೆ ಪಡೆದಹಿಚ್ಛ

ತ್ರದೊಳು ಪುಟ್ಟಿದಂ ಭೂಸುರ ತೇಜೋದ್ಭಾಸಿ ಸಿಂಧುನದಿಯ ಕುಱುವದೊಳು ಸಿಂಧನೆಂಬಂ ಕುಮಾರ ॥

ಪಡೆದು ವಿಮೋಹಮಂ ಪುಲಿಗಹೀಶ್ವರನೀಶಿಶುವಂ ಸುರಕ್ಷಿತಂ ನಡಪೆನೆ ಪೆನ್ನಗಾಧಿಪತಿಯೊಳು ಬೆಸವೆ

ತ್ತು ಮಹಾಮಹೀಶನಂ ನಡಪೆನೆ ಕುಮಾರಕಂ ಬಳೆದಿಳಾಧಿಕ ಸೌರ್‍ಯದ ದೀರ್ಘಬಾಹುವಂ ಪಡೆ

ದನೊ ಸಂದ ಸಿಂದವಿಷಯಾಧಿಪನ್ನುನ್ನತ ವೀರ ಶಾಸನ ॥ ಭರದಿಂದನ್ನಿಡುದೋಳ ಸಿಂಧವಿಭು ಕಯ್ಯಂ

ಮುಚ್ಚೆ ಕಣ್ಣಂ ಕಡಂಬರಧೀಶಂ ಪ್ರಿಯದಿಂ ತನೂಭವೆಯನೀಯಲು ಕೊಂಡು ತಾನಾ ಮನೋ

ಹರಿಯೊಳು ಕ್ರೀಡಿಸುತ್ತಿಪ್ಪಿನಂ ತನೆಯರಾಧರ್ಮೂವರಾ ಮೂವರಿಂ ಪಡೆದರತ್ಯುನ್ನ

ತ ಸಿಂಧವಂಶ ಮಹೀಭ್ರಿತ್ಸಂಜಾತರೀ ಲೋಕದೊಳು ॥ ಅಂತಾ ಮೂವತ್ತೊಂದ ನಿಶ್ಚಿಂತದದೆ ಭಾಗ

ಡಗೆ ನಾಡನಾಳಲು ಸೇವ್ಯಂ ಕಂತು ಸಮಾನಂ ಪುಟ್ಟಿದನನಂತಗುಣಂ ನೆಗರ್ದ್ದ ಸಿಂದನೆ[ಂ]ಬ ಕುಮಾ

(ರ. ॥ ನಿಡುದೋಳ ಸಿಂದನಿಂ ತಾನೆಡೆವರಿಯದೆ ಬಂದ ಸಿಂಧನಾಯಂ ಬಾಗಡೆಯ

ಸಿಂದರಿನೆಸೆದದು ಪೊಡವಿಯೊಳೆನೆ ನೆಗರ್ದನಲ್ತೆ ಕಮ್ಮರನೆಂಬಾ ॥ ಧರೆ ಪೊಗಳೆ ನೆಗ

ಳ್ದ ಕಮ್ಮಯ್ಯರ ಸಂಗಮನೂನ ವಿದಿತಗುಣಗಣ ಸಿಲಾಭರಣ ಭೂಷಿತೆ ಸಂಗರಬ್ಬರಿಸಿಗ

[ಮ]ಸಮಸೆಯೆ ಪುಟ್ಟಿದಂ ಪುಲಿಕಾಲ ॥ ಪುಲಿಕಾಲ ನೃಪತಿಗ[ಂ] ಕುಳದೀಪನೆನಿಸಿ ಪುಟ್ಟಿದ ನಾಗಾದಿತ್ಯನಿಪ ॥

ರೆವಕಬ್ಬೆಗಮಾದಂ ಸಲೆ ಷಡಗುಣದೆ ಸುಪುತ್ರ (ಂ. ಕುಳದೀಪಕನೆನಿಸಿ ಪುಟ್ಟಿದ ನಾಗಾದಿತ್ಯನಿಪ॥

ಕಲಿ ನಾಗಾದಿತ್ಯ ನಿಪ್ರಂಗಂ ಪೋಲೆಯಬ್ಬರಿಸಿಗಮನೂನ ಗುಣಗಣ ನಿಳಯಂ ಕುಳಮೆಸೆ

ಎ ಪುಟ್ಟಿದ ಶ್ರೀ ಪೊಲಸಿಂದ [ಂ] ಸಿಂಧವಂಶತಿಳಕಂ ಧರೆಯಳು ॥ ಖಾಂಡವ ಮಂಡಳೇಸ್ವರ ತನೂ

ಭವೆ ಬಿಜ್ಜಲದೇವಿ ತಾಯಿ ಜಗನ್ಮಂಡನನಾದಿರಾಜ ಚರಿತಂ ಫಣಿಕೇತ[ನ]ನ್ಯ ರಾಜವೇದಂಡ ಸಿರಶ್ಕ

ರಮಂಡನವಮುಕ್ತಕ ಭೂಪನೆ ತಂದೆ ಸಿಂದಮಾರ್ತಂಡನೆನಲ್ಕಿದನ್ನಯ ಪಕ್ವವಿಸುದ್ಧನೊ ಸೇ

ವ್ಯಭೂಭುಜ ॥ ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಮಂಡಲೇಶ್ವರ ಭೋಗಾವತಿ ಪುರವರಾ
ಧೀಶ್ವರನಹಿಛತ್ರಪುರ ಧಜಾಮರ ರಕ್ಷ ದಕ್ಷದಕ್ಷಿಣ ಭುಜದಂಡ ಸಿಂದಮಾರ್ತಾಂಡನನೇ
ಕ ಶಸ್ತ್ರಶಾಸ್ತ್ರ ಪಾರಾವಾರ ಪಾರಾಯಣಂ ಮೂರ್ತಿ ನಾರಾ[ಯ]ಣ ಚರಣಸ್ಮರಣ ಪರಿ
ಣತಾಂಷ್ಕರಣ ಪರಮ ಮಾಹೇಶ್ವರಂ ಪರಿಪಾತಾಕೇಶ್ವರಂ ರಿಪು ಮಂಡಳಿಕ ದೈತ್ಯ ವಿಳಯಕರ
ಣ ಪರಿಣತೋಪೇಂದ್ರ ನರಸ್ವರೂಪ ನಾಗೇಂದ್ರ ಸಕಳಕಳಾಕಳಿತವಾ[ಗ್ಲ]ಲನಾ ಲೀಲಾಲಲಾ
ಮ ಭುಜಬಳಭೀಮ ಭುವ[ನೈಕ]ಮಲ್ಲದೇವ ಚರಣ ಕೇಳಿ ದುರ್ಲಲಿತ ಕಳಹಂಸ ಸಿಂಧವಂಶೋತ್ತಂ
ಸ ಸಾಹಿತ್ಯ ವಿದ್ಯಾವಿವೇಕ ವಿರಿಂಚಿನ ವ್ಯಾಪ್ರಲಾಂಛನ ಸಿಂದ ವಿಶಯಾಧಿರಾಜ ಸಹಜರೂಪ
ಮನೋಜ ತ್ರೈಲೋಕ್ಯವರ್ತಿತ ಕೀರ್ತಿ ಪಾತಾಳ ಚಕ್ರವರ್ತ್ತಿ ವಿಧಗ್ದ ವಿಬುಧಜನ ಸ್ತುತ್ಯನಭಿನವ ವಿ
ಕ್ರಮಾದಿತ್ಯ ಕರವಾಳ ವಿದ್ಯಾಸಹದೇವ ಕಟಕದಗೋವಂ ಶ್ರೀಮನ್ ಮಹಾಮಂಡಳೇಶ್ವರ ಪ್ರಭುಸೇವ್ಯ
ರಸರು ॥ ಸ್ವಸ್ತಿ ಸಮಧಿಗತ ಪ[ಂ]ಚಮಹಾಶಬ್ದ ಮಹಾಸಾಮಂತ ರಿಪುನ್ರಿಪತಿ ಕರಿಕುಂಭಿ
ಕುಂಭಸ್ಥಳ ವಿದಾರುನಾರುಣಿತ ಕರವಾಳ ಸೋಭಿತ ದಕ್ಷಿಣದೋರ್ದಂಡನುಭಯ ಬಳಗಂ
ಡ ಅರಿನ್ರಪ ಸಂಹಾರ ಕಾರಣ ಕುಳಿಕ ದ್ರಿಷ್ಟಿವಿಷಳಕುಳತಿಳಕ ಸುವರ್ಣಚ್ಛತ್ರತ್ರಯ ಭೂ
ಷಣ ವಿಜಯಪಜ್ಘೋಷಣಂ ಭೋಗಾವತಿ ಪುರವರೇಸ್ವ[ರ]ನ[ನ]ಂತ ವಾ[ಸು]ಗಿ ತಕ್ಷಕ ಫಣಿಪತಾಕೇಸ್ವರ ವ್ಯಾ
ಘ್ರಲಾಂಛನ ಮನೋಜ ಸಿಂಧುವಿಷಯಾಧಿರಾಜ ಸಕಲಭುವನ ಭವನ ಪ[ರ]ನಿಪ ವನಿತಾ ಜನ ಕಂದ
ನಕಳಂಕ ಸಿಂಧ ಸಿಂಧಕುಳತಿಳಕ ಶ್ರೀ ನಾಗಾದಿತ್ಯ ॥ ಸ್ವಸ್ತಿ ಯಮನಿಯಮ ಸ್ವಾಧ್ಯಾಯ ಮೋನಾಧ್ಯಾನಾನು
ಷ್ಠಾಣ ಪರಾಯಣಪ್ಪ ಪರತ್ರಯ ಸಿಂಹರಾಸಿ ಭಟ್ಟಾರರ್ಗ್ಗೆ ಉತ್ತರಾಯಣ ಸಂಕ್ರಾಂತಿ ಯತಿಪಾತ
ಆದಿತ್ಯವಾರದಂದು ಪತ್ರಿಯಮತೂರದ ದಂಡಿನೊಳು ಕಿರಿಯ ಸಿರಿಊರದ ಸಾಯಿರ ಮತ್ತತ್ತೊಂದಲ
ನ[ಂ]ಸಿದೇಸ್ವರದೇವರ್ಗೆ ನಾಗಾತಿಯರಸ ಪರತ್ರಯ ಸಿಂಹರಾಸಿಗಳ ಕಾಲಂಕರ್ಚ್ಚಿ ಕೊಟ್ಟ ಅಂತಾ ಸಾಯಿ

ರ ಮತ್ತರಿಂಗೆ ಅಜಿವಣ ಗದ್ಯಾಣ ಹನ್ನೆರಡುಂ ಬ್ರಹ್ಮಚರ್ಯ್ಯಮುಳ್ಳವರು ಸ್ಥಾನಮಾನಾಳ್ವರು ಈ ಧ

ರ್ಮ್ಮಮಂ ಕಾದಾತಂಗೆ ಗಂಗೆ ಗಯೆ ವರಣಾಸಿ[ಯೊ]ಳು ಸಾಯಿರ ಕವಿಲೆಯ ಕೋಡುಂ ಕೊಳಗುಮಂ ಪೊಂ

ನೊಳ್ಕಟ್ಟಿಸಿ ಸಾಸಿರ್ವ್ವತ್ತಪೋಧನ(ರ್ಗ್ಗಂ. ಚ[ತುರ್ವ್ವೇದ ಪಾರಾಯ]ಣರಿಗಂ ಕೊಟ್ಟ ಫಲ ಈ ಧರ್ಮ್ಮಮಂ ಪೊಂಡಳಿದವಂಗೆ ಸ

ಹಸ್ರ ಕವಿಲೆಯುಮಂ [ತ]ಪೋಧ[ನ]ರುಮಂ [ವಧಿ]ಸಿದ ಪಂಚಮಹಾಪಾತಕ ಸ್ವಸ್ತಿ ಸಮಸ್ತ ಭುವನಾಸ್ರಯಂ

ಶ್ರೀ (ಪ್ರಿ)ಥ್ವಿವಲ್ಲಭಂ ಮಹಾರಾಜಾಧಿರಾಜಂ [ಪರಮೇಶ್ವರಂ ಪರಮಭಟ್ಟಾ]ರಕ[ಂ] ಚಾಳುಕ್ಯಾ ಭರಣಂ ಶ್ರೀಮಜ್ಜಗದೇಕ

ಮಲ್ಲದೇವರು ಕೊಳ್ಳಿಪಾಕೆಯ ಬೀಡಿನೊ[ಳು ಸು]ಖ ಸಂಖ[ಥಾ ವಿನೋ]ದದಿಂ ರಾಜ್ಯಂಗೆಯ್ದೆ ಸಕವರ್ಷ ೯೫೫ನೆಯ

ಶ್ರೀಮುಖ ಸಂವತ್ಸರಂ ಪ್ರವರ್ತ್ತಿಸೆ ಶ್ರೀಮನ್ಮಹಾಸಾಮಂತ ನಾಗಾತಿಯರಸಂ ಶ್ರೀಮತ್ ತೇಜೋರಾಸಿ ಪಂಡಿತರ

ಕಾಲಂ ಕಚ್ಚಿ ಪುರದಕೇರಿಯ ಪೊಗದೆ.......ವರ್ಗ್ಗೆ ಬಿಟ್ಟ ಪರಿಸೂತ್ರ ದೊಳಾದ ದಂಡ ದೋ

ಶಮುಂ ದೇವರ್ಗೆ ಈ ಧರ್ಮ್ಮಮನಜುವರ್ಗ್ಗ [ವುಂಡಗಳು ಪ್ರತಿಪಾಳಿಸಿ]ಸುವರು ಇದನಳಿದವಂಗೆ ಕಪಿಲೆಯಂ ತ

ಪೊಧನರುಮಂ ವಧಿಸಿ[ದ ಪಾತಕಮಕ್ಕು ಸ್ವದತ್ತಂ ಪರದತ್ತಂ ವಾ ಯೋ]ಹರೇತಿ ವಸುಂಧರಂ ಸಷ್ಟಿವರ್ಷ ಸಹಸ್ರಾಣಿ

ವಿಷ್ಠಾಯಂ ಜಾಯತೇ ಕ್ರಿಮಿಃ ॥ ಶ್ರೀ ಸಿಂದೇಶ್ವರ ದೇವರಾಚಾರ್ಯ [ತೇಜೋರಾಸಿ ಪ]ಂಡಿತರು ಜೀರ್ಣ್ಣೋ

ದ್ಧಾರವ [ಂ] ಪುನ[ಃ] ಪ್ರತಿಷ್ಠೆ ಮಾಡಿದರು @ ಮಂಗಳ ಮಹಾಶ್ರೀ ಶ್ರೀ ಶ್ರೀ"[೭]

ಎಂಬ ಉಲ್ಲೇಖ ಬರುತ್ತದೆ. ಇಲ್ಲಿರುವ 'ಪುಲಿಗಹೀಶ್ವರನ ಈ ಶಿಶು' ಮತ್ತು ಪನ್ನೆಗಾಧಿಪತಿ' ಎಂಬ ಹೆಸರುಗಳು ಪುರಾಣಗಳ ಮೂಲದಿಂದಲೇ ಬಂದಿರುವುದನ್ನು ಗಮನಿಸಬೇಕು. ಇಲ್ಲಿ ಹೊಗಳಿಕೆ ಇದ್ದರೂ ಕೂಡ ನಾಗಾದಿತ್ಯನ ಹೆಚ್ಚುಗಾರಿಕೆಯನ್ನು ದೇವತೆಗಳೊಂದಿಗೆ ಸಮೀಕರಿಸಲಾಗಿದೆ. ಒಬ್ಬ ಸಾಮಂತನ ಬಲ ಹೀಗಿದ್ದ ಮೇಲೆ ಇನ್ನು ಅರಸನ ಮಹಿಮೆ ಎಂಥದ್ದಿರಬೇಕು ಎಂಬ ಕುತೂಹಲ ಮೂಡುತ್ತದೆ. ಇದರ ಸಾಧ್ಯಾಸಾಧ್ಯತೆಗಳನ್ನು ಒರೆಗೆ ಹಚ್ಚಿ ನೋಡಲು ಸೂಕ್ತ ದಾಖಲೆಗಳು

ದೊರೆಯುವುದಿಲ್ಲವಾದ ಕಾರಣ ಇದ್ದರೂ ಇರಬಹುದು ; ಇಲ್ಲದೆಯೂ ಇರಬಹುದು ಎಂಬ ಊಹಾ ಸಿದ್ಧಾಂತವನ್ನು ಇಲ್ಲಿ ಪಾಲಿಸಬಹುದು.

ಬಾದಾಮಿ ತಾಲೂಕಿನ ಯಂಡಿಗೇರಿ ಗ್ರಾಮದ ಪಶ್ಚಿಮಕ್ಕೆ ಸುಮಾರು ಒಂದು ಮೈಲು ದೂರದ ಹೊಲದಲ್ಲಿರುವ ಬಸವಣ್ಣ ಗುಡಿಯಲ್ಲಿ ನಿಲ್ಲಿಸಿರುವ ಕಲ್ಲಿನ ಮೇಲಿನ ಶಾಸನದಲ್ಲಿ ಬರುವ ವಿಚಾರ ಒಂದಿಷ್ಟು ವಿಚಿತ್ರವಾಗಿ ಕಾಣುತ್ತದೆ. ಇಲ್ಲಿ ಬಸವಣ್ಣನನ್ನು ಪಾವಾಡಿಕನನ್ನಾಗಿ ತೋರಿಸಿರುವುದು ಕಂಡುಬರುತ್ತದೆ.

'ಮಹಲಿಂಗ ಶ್ರೀ // ಯಿದು ಬಸವಂಣನ / ... ... ... ... ...//ಕಟಿದರು
ಯಿ ಬಸ್ವಂಣನೆ // ದನಕ ಉಣವರ
ಹಸ್ತದಲ್ಲಿ ಪುಟಿದಾ / ಪುಟಿದರೆ ಯಿವರು
ಯಿಲೇಕೆ [ಆ]ದರೆಂದು ಕಾದವರ ಕಳಿದಾ ನಿರ್ವ್ವಣ
ವನು ಕೇಳಿದಾ... ... ... ಬಸವನಾಗಿ ಹೋಗುತಿರ ಅಂ
ದ// ಹಾದಿ ಬಸನಾಗಿ ನಾಲು ಹೋಗದಿಲ್ಲ ಮುಂದೆ
... ... ... ... ಮಿ ಆಗ ಪಾವಾಡ ಮೆರಿಬೇಕೆಂದು ಬಂದಿವಿ//
... ... ... ... ಪುದಿಗೊಳ್ಳಾವಾ // ಪುದಿಗೊಳ್ಳಸಲ
ಕ // ಅವರ ಮನೆಯೊಳಗೆ ಪ
ವಾಡವಾ ಮಾಡಿದರು'[೮]

ಈ ಶಾಸನಕ್ಕೆ ಸಂಪಾದಕರು ನೀಡುವ ವಿವರಣೆ ಹೀಗಿದೆ ; '... ... ಶಾಸನದ ಭಾಷೆ ಶುದ್ಧವಾಗಿಲ್ಲ. ಅದರ ಸಾರಾಂಶ ಹೀಗಿದೆ. ಬಸವಣ್ಣನ ಕಟ್ಟಿದವರು ಊಟ ಮಾಡುವವರ ಹಸ್ತದಲ್ಲಿ ಹುಟ್ಟಿದವರು. ಇವರು ಇಲ್ಲೇಕೆ ಹುಟ್ಟಿದರು ಎಂದರೆ ನಾನು ಊರಬಸವನಾಗಿ ಹೋಗುತ್ತೇವೆ. ಹಾದಿ ಬಸವನಾಗಿ ಹೋಗುವುದಿಲ್ಲ ಎಂದರು. ಮುಂದಿನ ದಿನಗಳಲ್ಲಿ ಪವಾಡ ಮೆರೆಯಬೇಕೆಂದು ಬಂದಿದ್ದೀವಿ ಎಂದರು. ಪವಾಡ ಮಾಡಿದರು ಎಂದೂ ಇದೆ. ಅಲ್ಲಲ್ಲಿ ಶಾಸನ ತ್ರುಟಿತವಾಗಿರುವುದರಿಂದ ಅರ್ಥ ಸರಿಯಾಗುವುದಿಲ್ಲ'.[೯] ಇದು ಜನ್ಮಾಂತರದ ವಿಷಯವನ್ನು ಪ್ರತಿಪಾದಿಸುವ ಒಂದು ಕತೆಯಿದ್ದಂತೆ ತೋರುತ್ತದೆ.

ಶಾಸನಗಳಲ್ಲಿ ಕತೆಯನ್ನು ಅಳವಡಿಸುವುದು ಮೊದಲಿನಿಂದಲೂ ನಡೆದುಕೊಂಡು ಬಂದಿದೆ. 'ಊರ ಬಸವ ಮತ್ತು ಹಾದಿ ಬಸವ' ಉಲ್ಲೇಖಗಳು ಇಲ್ಲಿ ಗಮನಾರ್ಹ. ಬಹುಶಃ ಶೈವ ಪರಂಪರೆಯ ಕತೆಯ ಎಳೆ ಇಲ್ಲಿ ಇರುವಂತೆ ತೋರುತ್ತದೆ. 'ಊರ ಬಸವ' ಎಂದರೆ ದೇವಾಲಯಗಳಲ್ಲಿ ಲಿಂಗದ ಮುಂದಿರುವ ನಂದಿಯೆಂದೂ 'ಹಾದಿ ಬಸವ' ಎಂದರೆ ದೇವರಿಗೆ ಬಿಟ್ಟ ದನ ಅಥವಾ ಬೀಡಾಡಿ ದನ ಎಂದೂ ಅರ್ಥ ಮಾಡಿಕೊಂಡರೆ ಈ ಶಾಸನದ ಅರ್ಥ ಒಂದಿಷ್ಟು ಸ್ಫುಟಗೊಳ್ಳುತ್ತದೆ.

ಊರ ಬಸವಣ್ಣ ಪವಾಡ ಮೆರೆಯಲು ಅಲ್ಲಿ ಉದ್ಭವನಾಗಿದ್ದಾನೆ ಎಂದು ಶಾಸನಕಾರರು ಹೇಳಿದಂತೆ ತೋರುತ್ತದೆ. ಅಷ್ಟೇ ಅಲ್ಲ ಯಾರೋ ಒಬ್ಬರ (ಶಾಸನ ತ್ರುಟಿತವಾಗಿದ್ದು ಹೆಸರು ಅಳಿಸಿ ಹೋಗಿದೆ) ಮನೆಯಲ್ಲಿ ಪವಾಡವನ್ನೂ ಮಾಡಿದನ್ನು ಶಾಸನ ದಾಖಲಿಸುತ್ತದೆ. ಭಾವಿಕರ ಮನೋಸ್ಥಿತಿಯ ಪ್ರಭಾವ ಇಲ್ಲಿದೆ ಎಂದು ಹೇಳಬೇಕಾಗುತ್ತದೆ. ಯಾವ ಬಸವಣ್ಣ ಗುಡಿ–ಗುಂಡಾರಗಳಿಂದ ಮುಕ್ತಗೊಂಡಿದ್ದನೋ ಅಂಥವನಿಗಾಗಿಯೇ ಇಂದು ಗುಡಿ–ಗುಂಡಾರಗಳು ಹುಟ್ಟಿಕೊಂಡಿವೆ. ಸ್ಥಾವರವನ್ನು ಬಿಟ್ಟು ಜಂಗಮದ ಕಡೆ ಹೆಜ್ಜೆ ಹಾಕಿದ್ದ ಬಸವಣ್ಣನನ್ನು ಇಂದು ಸ್ಥಾವರವನ್ನಾಗಿಸಲಾಗಿದೆ. ಹೀಗೆಲ್ಲ ಮಾಡಿದವರು ಬಸವಣ್ಣ ಒಬ್ಬ ಪುರಾಣದ ವ್ಯಕ್ತಿ ಎಂದುಕೊಂಡು ಹಲವಾರು ಪುರಾಣಗಳನ್ನೂ ರಚಿಸಲಾಗಿದೆ. ಹೀಗಾಗಿ ಬಸವಣ್ಣ ಇಂದು ವೈಚಾರಿಕ ತಳಹದಿಯ ಹೋರಾಟಗಾರ, ಐತಿಹಾಸಿಕ ವ್ಯಕ್ತಿ ಎಂಬುದನ್ನು ಬಿಟ್ಟು ಆತನನ್ನು ಪುರಾಣ ಪುರುಷನನ್ನಾಗಿ ಮಾಡಲಾಗಿದೆ.

ಬಿ. ಜಾಲಹಾಳ ಗ್ರಾಮದ ಹುಲಿಗೆಮ್ಮನ ಕೊಳ್ಳದಲ್ಲಿರುವ ಒಂದು ಕಲ್ಲಿನ ಮೇಲೆ ಇರುವ ಶಾಸನದಲ್ಲಿ 'ಸ್ವರ್ಗ'ದ ಪ್ರಸ್ತಾಪ ಬಂದಿದೆ. 'ಸ್ವಸ್ತಿ ಶ್ರೀ ವಿಕ್ರಮಾದಿತ್ಯ ಸತ್ಯಾಶ್ರಯ ದೇವಾರಿಯ ಮಗನು ಬೆನಮ್ಮ ಕರಂಡದ ಪಾರದನ ಕೇಸಿದ ಧರ್ಮ್ಮವಕ್ಕೆ' (ವಿಕ್ರಮಾದಿತ್ಯ ಸತ್ಯಾಶ್ರಯ ದೇವಾರಿಯ ಮಗ ಬೆನಮ್ಮ ಎಂಬುವವನು ಕರಂಡದ ಸ್ವರ್ಗದ ದಾರಿಯ ಗಾಡಿಯನ್ನು ಮಾಡಿದ) ಎಂದಿದೆ.[೧೦] ಸ್ವರ್ಗ ಪರಿಕಲ್ಪನೆ ಪುರಾಣಗಳಲ್ಲಿ ಮಾತ್ರವಲ್ಲ ಜನರ ಬದುಕಿನಲ್ಲಿಯೂ ಹಾಸುಹೊಕ್ಕಾಗಿದೆ. ಹೀಗಾಗಿ ಸತ್ತವರೆಲ್ಲ ಸ್ವರ್ಗಕ್ಕೆ ಹೋಗುತ್ತಾರೆ ಎಂಬ ನಂಬಿಕೆ ಸಾಮಾನ್ಯವಾಗಿದೆ. 'ಸ್ವರ್ಗಾಧೀನ' ಎಂದರೆನೇ ಮರಣ ಎನ್ನುವ ಅರ್ಥವೂ ಕೂಡ ಇರುವುದನ್ನು ಗಮನಿಸಬೇಕು. ಹೀಗಾಗಿ ಜನರ ಬದುಕು ಪುರಾಣದೊಂದಿಗೆ ಮಿಳಿತವಾಗಿದೆ ಎಂಬುದು ಇಲ್ಲಿ ಗಮನೀಯ.

ಈಗಾಗಲೇ ಹೇಳಿದಂತೆ ರಾಮಾಯಣ ಮತ್ತು ಮಹಾಭಾರತಗಳೂ ಈಗ ಪುರಾಣಗಳಾಗಿ ಬಿಟ್ಟಿವೆ. ಹೀಗಾಗಿ ಉತ್ತರ ಕರ್ನಾಟಕ ಶಾಸನಗಳಲ್ಲಿ ಅವುಗಳ ಬಳಕೆ ಹೆಚ್ಚಾಗಿ ಕಾಣಿಸಿಕೊಳ್ಳುತ್ತದೆ. ಪಟ್ಟದಕಲ್ಲಿನ ಪಾಪನಾಥನ ಗುಡಿಯ ಪೂರ್ವದಿಕ್ಕಿನ ಬಲಗೋಡೆಯಲ್ಲಿರುವ ಶಾಸನದಲ್ಲಿ 'ವಿವೀಶಣನ್ ಮತ್ತು ಲಕ್ಕಣನ್'[೧೧] ಎಂಬ ಹೆಸರುಗಳು ಬಂದಿದ್ದು ಇವು ರಾಮಾಯಣದ ವಿಭೀಷಣ ಮತ್ತು ಲಕ್ಷ್ಮಣನನ್ನು ಹೆಸರನ್ನು ಸೂಚಿಸುತ್ತವೆ. ಅದೇ ಸ್ಥಳದಲ್ಲಿ ಇರುವ ಶಾಸನದಲ್ಲಿ 'ಕುಮ್ಭಕರ್ನ್ನನ್'[೧೨] ಎಂದರೆ ಕುಂಭಕರ್ಣನ ಉಲ್ಲೇಖ ಬಂದಿದೆ. ಶಾಸನಗಳು ತ್ರುಟಿತವಾಗಿರುವುದರಿಂದ ಅವು ಏನನ್ನು ಹೇಳುತ್ತವೆ ಎಂಬುದನ್ನು ವಿವರಿಸಲು ಸಾಧ್ಯವಿಲ್ಲ. ಆದರೂ ಅವು ರಾಮಾಯಣದ ಕತೆಯನ್ನೋ ಅಥವಾ ರಾಮಾಯಣದ ವ್ಯಕ್ತಿಗಳ ಮಹಿಮೆಯನ್ನೋ ಸಾರಲು ಇರುವ ಶಾಸನಗಳಾಗಿರಬೇಕು ಎಂದು ಊಹಿಸಲು ಸಾಧ್ಯವಿದೆ.

ಹಾಗೆಯೇ ಆ ದೇವಾಲಯದ ಆಗ್ನೇಯ ಮೂಲೆಯ ಗೋಡೆಯ ಮೇಲೆ ನಳ, ಹನುಮಂತ, ವಿಭೀಷಣನನ್ನೂ ದಕ್ಷಿಣ ಗೋಡೆಯ ಮೇಲಿರುವ ಶಾಸನದಲ್ಲಿ ಸುಗ್ರೀವ ಮತ್ತು ಅಂಗದನನ್ನೂ ಹೆಸರಿಸಲಾಗಿದೆ.[೧೩] ಅಲ್ಲಿಯೇ ವಾಲಿ, ಸುಗ್ರೀವ, ಲಕ್ಷ್ಮಣ, ರಾಮರ ವಿಗ್ರಹಗಳನ್ನು ಹೆಸರಿಸಿದ್ದು, ಅಲ್ಲಿಯೇ ಸುಗ್ರೀವ, ವಾಲಿ, ರಾಮ, ಲಕ್ಷ್ಮಣರ ಹೆಸರನ್ನೂ ಉಲ್ಲೇಖಿಸಲಾಗಿದೆ. ಹಾಗೆಯೇ ವಾಲಿ, ಜಟಾಯು, ರಾವಣನ ಉಲ್ಲೇಖ ಕೂಡ ಬಂದಿದೆ.[೧೪] ಅದೇ ಸ್ಥಳದಲ್ಲಿ ಹೊನ್ನಜಿಂಕೆ (ಪೊಂನ್ವರಿ), ಲಕ್ಷ್ಮಣ, ರಾಮ, ಸೀತೆಯರನ್ನೂ ಮತ್ತೊಂದರಲ್ಲಿ ರಾವಣ, ಸೂರ್ಪನಕಿಯನ್ನೂ ಮಗದೊಂದರಲ್ಲಿ ಕರದೂಶಣ, ಲಕ್ಷ್ಮಣ, ಸೀತೆ, ರಾಮರನ್ನೂ ಉಲ್ಲೇಖಿಸಲಾಗಿದೆ.[೧೫] ಅಲ್ಲೇ ಸೂರ್ಪನಖಿ (ಸುಪ್ಪನಕ್ಕಿ) ಉಲ್ಲೇಖವೂ ಕಂಡುಬರುತ್ತಿದ್ದು, ಗವಾಕ್ಷದ ಮೇಲೆ ಸೂರ್ಪನಖಿಯೊಂದಿಗೆ ರಾಮ, ಸೀತೆಯರ ಪ್ರಸ್ತಾಪವೂ ಆಗಿದೆ. ಗವಾಕ್ಷಿಯ ಹಿಂಬದಿ ಗೋಡೆಯ ಮೇಲೆ ಸೀತಾ–ರಾಮರನ್ನು ಹೆಸರಿಸಲಾಗಿದೆ.[೧೬] ದೇವಾಲಯದ ದಕ್ಷಿಣ ದಿಕ್ಕಿನ ಕಂಬದ ದಕ್ಷಿಣಮುಖದ ಮೇಲ್ಭಾಗದಲ್ಲಿ ರಾಮ ಮತ್ತು ವಿಭೀಷಣರ ಉಲ್ಲೇಖ ಬಂದಿದೆ.[೧೭]

ಇಲ್ಲಿ ಬಂದಿರುವ ರಾಮಾಯಣದ ವ್ಯಕ್ತಿಗಳೆಲ್ಲರ ಬಗ್ಗೆ ಶಬ್ದಚಿತ್ರವನ್ನು ಆ ಶಾಸನಗಳು ಹೇಳುವಂತಿವೆ. ಆದರೆ ಇಲ್ಲಿಯೂ ಕೂಡ ಶಾಸನಗಳು ತ್ರುಟಿತವಾಗಿದ್ದು ಅರ್ಥಗ್ರಹಿಕೆ ಸರಿಯಾಗಿ ಲಭಿಸುವುದಿಲ್ಲ. 'ನಳ'ನ ಉಲ್ಲೇಖ ಇರುವುದು ಮತ್ತಷ್ಟು ಸೋಜಿಗವನ್ನುಂಟು ಮಾಡುತ್ತದೆ. ಈ ಬಗ್ಗೆ ಹೆಚ್ಚಿನ ಅಧ್ಯಯನಗಳು ನಡೆಯಬೇಕಾದ ಅನಿವಾರ್ಯತೆ ಇದೆ.

ಅದೇ ದೇವಾಲಯದ ಉತ್ತರ ದಿಕ್ಕಿನ ಹೊರಗೋಡೆಯ ಮೇಲಿರುವ ಮಹಿಷಾಸುರಮರ್ಧಿನಿ ಸಮೀಪದಲ್ಲಿ ಪುರಾಣ ಕಥೆಯೊಂದನ್ನು ಹೇಳುವ ಶಾಸನವಿದೆ. ಬಹುಶಃ ಇದು ಶಾಪಗ್ರಸ್ತ ಗಂಧರ್ವನ ಬಗ್ಗೆ ಇಲ್ಲಿ ಉಲ್ಲೇಖ ಬಂದಿದೆ ಎನಿಸುತ್ತದೆ. 'ಹೋ ಹೋ ಪುರುಷ ಸಿಂಹನೇ ಗಂಧಮಾತಳ ಎಂಬ ಪರ್ವತದಲ್ಲಿ ದೇಹಗಳು ಸುವರ್ಣಮಯವಾಗಿದ್ದು, ನನಗೆ ಹಂದಿಯ ಮುಖ ಬರಲು ಕಾರಣವೇನು ? ನಾನು ಅನೇಕ ರೀತಿಯ ದಾನಗಳನ್ನು ಮಾಡಿದ್ದೇನೆ. ಆದರೆ ದುಃಖರಹಿತ ದಾನವನ್ನು ಕೊಡಲಿಲ್ಲ. ಆದ್ದರಿಂದ ನನ್ನ ಮುಖ ಹಂದಿಯದಾಗಿದೆ. ಗಂಧಮಾದನೆಂಬುವವನು ಇದನ್ನು ಹೇಳಿಕೊಂಡಂತೆ ತೋರುತ್ತದೆ'[೧೮] ದಾನವನ್ನು ನೀಡುವಾಗ ಕೊಡುತ್ತಿದ್ದೇನೆ ಎಂಬ ಅಹಂಕಾರವಾಗಲಿ ಅಥವಾ 'ಅಯ್ಯೋ ಇಷ್ಟೊಂದೆಲ್ಲ ಪರರ ಪಾಲು ಮಾಡುತ್ತಿರುವೆನಲ್ಲ' ಎಂದು ಹಳಹಳಿಸುವುದು ಸರಿಯಲ್ಲ ಎಂಬ ಅರ್ಥ ಇಲ್ಲಿದೆ.

ದಾನ ಎಂಬುದು ಪುಣ್ಯಪ್ರಾಪ್ತಿಗಾಗಿ ಇರುವ ಒಂದು ಮೌಲ್ಯ. ಅದನ್ನು ನೀಡುವಾಗ ಮನಸ್ಸು ಚಂಚಲಗೊಳ್ಳಬಾರದು ಎಂಬ ವಿಷಯವನ್ನು ಮನವರಿಕೆ ಮಾಡಿಕೊಡಲು ಈ ಶಾಸನವನ್ನು ರಚಿಸಿದಂತೆ ತೋರುತ್ತದೆ. ದಾನ ನೀಡಿಯೂ ಹಂದಿಯ ಮುಖವನ್ನು ಪಡೆದುಕೊಂಡ ಗಂಧಮಾತಳ ಪರ್ವತದಲ್ಲಿ ಎಲ್ಲರ ದೇಹಗಳು ಸುವರ್ಣಮಯವಾಗಿದ್ದರೂ ತನಗೆ ಮಾತ್ರ ಹಂದಿಯ ಮುಖ

ಏಕೆ ಬಂತು ಎಂಬ ಪ್ರಶ್ನೆಯೂ ಅದಕ್ಕೆ ಪೂರಕವಾದ ಉತ್ತರವೂ ಈ ಶಾಸನದಲ್ಲಿದೆ. ಇದೊಂದು ಮಹತ್ವದ ಶಾಸನವೆಂದು ಪರಿಭಾವಿಸಬೇಕು. ಯಾಕೆಂದರೆ ಇಂತಹ ಉಲ್ಲೇಖ ಇರುವ ಶಾಸನ ಬೇರೆ ಎಲ್ಲಿಯೂ ಕಂಡುಬಂದಿಲ್ಲ. ಪೌರಾಣಿಕತೆಯ ಲೇಪನ ಕೊಟ್ಟು ಹೇಳಿರುವ ವಿಷಯ ಇಲ್ಲಿ ಗಮನಾರ್ಹವಾಗಿದೆ.

ಅಲ್ಲೇ ಎಡಭಾಗದಲ್ಲಿ ಮಹಾಭಾರತದ ಭೀಮಸೇನನನ್ನು ಉಲ್ಲೇಖಿಸಿರುವ ಶಾಸನ ಕಂಡುಬರುತ್ತದೆ. ವಿರೂಪಾಕ್ಷ ದೇವಾಲಯದ ಮಧ್ಯ ಬಲಕಂಬದಲ್ಲಿ ಚಿತ್ರಪಟ್ಟಿಕೆಯಲ್ಲಿ ಕರದೂಷಣ, ಸೂರ್ಪನಖಿ, ಲಕ್ಷ್ಮಣ, ರಾಮ, ಸೀತೆ, ರಾವಣ, ಮಾರೀಚ, ಸುಧಾರಿಶ್ವ, ಜಟಾಯು ಎಂಬ ರಾಮಾಯಣದಲ್ಲಿ ಬರುವ ವ್ಯಕ್ತಿಗಳ ಹೆಸರುಗಳು ಕಂಡುಬರುತ್ತವೆ.[೧೯] ಇದು ಕೂಡ ಶಬ್ದಚಿತ್ರವನ್ನು ಸಾಕಾರಗೊಳಿಸಲು ರಚಿಸಿದ ಶಾಸನ ಇರಬೇಕು ಎಂಬ ಗ್ರಹಿಕೆಯನ್ನು ಇಟ್ಟುಕೊಳ್ಳಬೇಕು.

ಇಲ್ಲಿ ಹೇಳಲೇ ಬೇಕಾದ ವಿಶೇಷವಾದ ಮತ್ತೊಂದು ಶಾಸನವೆಂದರೆ ಅದು ಕ್ರಿ.ಶ. ಸುಮಾರು ೯೮೦ ರ ಸೊಗಲ ಶಾಸನ (ಸವದತ್ತಿ ತಾಲೂಕು, ಬೆಳಗಾವಿ ಜಿಲ್ಲೆ). ಇದೊಂದು ದಾನ ಶಾಸನವಾಗಿದ್ದರೂ ಸೊಗಲ ಕ್ಷೇತ್ರದ ಮಹಿಮೆಯನ್ನು ತ್ರೇತಾಯುಗದ ಅಂತ್ಯ ಕಾಲದ ಪರಿಸರದೊಂದಿಗೆ ಕಟ್ಟಿಕೊಡಲಾಗಿದೆ.

'ನೋಡಿರೆ ರಾಘವದ್ವಿಷನ ನಚ್ಚುವ ಮಾಲಿ ಸುಮಾಲಿ ದಾನವ–
ರ್ಮ್ಮಾಡಿದ ಸುಪ್ರತಿಷ್ಠೆಯದಱಿಂದೆ ಸುವರ್ಣ್ಣಮಹಾಕ್ಷಿದೇವರೆಂ–
ಬೀಡಿತನಾಮಮಾದುದು ಸುಮಾಲಿ ಪೆಸರ್ನ್ನಗರಕ್ಕೆ ರೂಢಿಯೊಳ್–
ಕೂಡಿದುದೆಂದೊಡೇವೊಗಳ್ವೆ ಕೂಣ್ಡಿಮಹೀವಳಯಾನ್ತರಾಳದೊಳ್//[೨೦]
'ಮಾಲಿ ಸುಮಾಲಿದ್ವಯ ಭೂ
ಪಾಲರ್ದ್ದೇವರ್ಗ್ಗೆ ಸೋಲು ಮೂವತ್ತಂ ಸ
ಲ್ಲೀಲೆಯೊಳೆ ಬಿಟ್ಟು ಸುಗತಿಸು
ಖಾಲಯಮಂ ತ್ರೇತೆಯಂತ್ಯಕಾಲದೆ ಪೊಕ್ಕರ'[೨೧]

ಇಲ್ಲಿರುವ ಶಾಸನದ ಎರಡೂ ಉಲ್ಲೇಖಗಳಲ್ಲಿ ರಾವಣನ ಮೆಚ್ಚಿನವರಾದ ಮಾಲಿ ಮತ್ತು ಸುಮಾಲಿ ಎಂಬ ದಾನವರು ಈ ಸ್ಥಳದಲ್ಲಿ ದೇವರನ್ನು ಪ್ರತಿಷ್ಠಾಪಿಸಿದರು ಎಂಬ ವಿಷಯ ಬಂದಿದೆ. ಸೊಲು (ಸೊಗಲ) ೩೦ನ್ನು ಆ ದೇವರಿಗೆ ದತ್ತಿ ಕೊಟ್ಟರೆಂಬ ಪ್ರಸ್ತಾಪವೂ ಬಂದಿದೆ. ಹೀಗಾಗಿಯೇ ಆ ದೇವರಿಗೆ 'ಸುವರ್ಣ ಮಹಾಕ್ಷಿದೇವ' ಎಂಬ ಹೆಸರೂ ದತ್ತಿ ಬಿಟ್ಟ ಊರಿಗೆ 'ಸುಮಾಲಿ' ಎಂಬ ಹೆಸರೂ ಪಡೆದುಕೊಂಡವು ಎಂದು ಹೇಳಲಾಗಿದೆ. ಅಂದರೆ ರಾಮಾಯಣ ಅಂತ್ಯ ಕಾಲದ ಕಥಾವಸ್ತುವೊಂದು ಇಲ್ಲಿ ದೊರೆಯುತ್ತದೆ.

'ಮೇಳಿಸಿ ನಾಯಡಗಂ ಚಾಂ
ಡಾಳೆ ಕಪಾಳದೊಳೆ ಕಳ್ಳನೆಱೆದಡುತಂ ತ
ತ್ಕಾಳದೆ ಕೆರ್ಪ್ಪಿಂ ಮುಚ್ಚೆ ಸ
ಮಾಳೋಕದೊಳಿಂದ್ರನಾಕೆಯಂ ಬೆಸಗೊಣ್ಡಂ'[೨೨]

ಶಾಸನದ ಫಲಶ್ರುತಿಯನ್ನು ಹೇಳುವಾಗ ಶಾಸನಕಾರ ಮತ್ತೇ ಪುರಾಣ ಪರಂಪರೆಯನ್ನು ವೈಚಾರಿಕವಾದ ನೆಲೆಯಲ್ಲಿ ಮೂಡಿಸಿದ್ದಾನೆ. ಇದು ಸಂಸ್ಕೃತದಿಂದ ಶ್ಲೋಕಗಳ ಕನ್ನಡೀಕರಣವಾಗಿದೆ ಎಂಬುದು ಸಂಪಾದಕರ ಮಾತು.[೨೩] ಇಲ್ಲಿಯ ವಿಚಾರವೆಂದರೆ ಇಂದ್ರನು ಚಾಂಡಾಳೆಗೆ ಏನು ಮಾಡುತ್ತಿದ್ದೀಯಾ ಎಂಬ ಪ್ರಶ್ನೆ ಮಾಡಿದಂತಿದೆ. ಅದಕ್ಕೆ ಉತ್ತರವಾಗಿ ಆಕೆ ನಾಯಿಯ ಮಾಂಸವನ್ನು ಹೆಂಡದೊಡನೆ ತಲೆಬುರುಡೆಯಲ್ಲಿ ಬೇಯಿಸುತ್ತಿದ್ದು, ದತ್ತಿಯನ್ನು ಅಪಹರಿಸುವ ಪಾಪಿಗಳ ಪಾದಧೂಳಿ ಬಿದ್ದೀತೆಂದು ಚರ್ಮದಿಂದ ಮುಚ್ಚಿರುವೆ ಎಂಬುದಾಗಿ ಆಕೆ ಹೇಳುತ್ತಾಳೆ. ಅಂದರೆ ನಾಯಿಯ ಮಾಂಸ ಸೇವನೆ ಮಾಡುವವರಿಗಿಂತ, ದೈವದ ಸೊತ್ತನ್ನು ಅಪಹರಿಸಿದವರು ಕೀಳು ಎಂಬ ಮಾತು ಇಲ್ಲಿ ಕಾಣಿಸಿಕೊಂಡಿದೆ.

ಬರೀ ರಾಮಾಯಣ ಮಾತ್ರವಲ್ಲ ಮಹಾಭಾರತವೂ ಶಾಸನಗಳಲ್ಲಿ ಕಾಣಿಸಿಕೊಂಡಿದೆ. ಮೇಲಿನ ಶಾಸನ ಬರುವ ಅದೇ ಸ್ಥಳದ ಎಡಕಂಬದ ಮೇಲೆ ಮಹಾಭಾರತದ ಶಲ್ಯನ ಹೆಸರು ಪ್ರಸ್ತಾಪವಾಗಿದೆ.[೨೪] ಅದೇ ಕಂಬದ ದಕ್ಷಿಣಮುಖದ ಮೇಲೆ ಮಹಾಭಾರತದ ಅರ್ಜುನ, ಉತ್ತರಕುಮಾರ, ಶಲ್ಯ, ಕರ್ಣ, ಹೆಸರುಗಳ ಜೊತೆಗೆ ಗೋಗ್ರಹಣದ ಪ್ರಸ್ತಾಪವೂ ಬಂದಿದೆ.[೨೫] ಹಾಗೆಯೇ ಅದೇ ದೇವಾಲಯದ ಗರ್ಭಗೃಹದ ಮುಂದಿನ ಎಡಕಂಬದ ಮೇಲೆ ಇಂದ್ರ, ತಿಲೋತ್ತಮೆ, ಅಹಲ್ಯೆಯರ ಹೆಸರುಗಳೂ ವಿರೂಪಾಕ್ಷ ದೇವಾಲಯದ ಇನ್ನೊಂದು ಕಂಬದ ಮೇಲೆ ಭೀಷ್ಮ, ಶಲ್ಯ, ಕರ್ಣ, ವಿಷ್ಣು, ಅರ್ಜುನ, ತಿಲೋತ್ತಮೆ, ಉತ್ತರಕುಮಾರ ಇಂದ್ರರ ಹೆಸರುಗಳ ಜೊತೆಗೆ ಭಾರತಯುದ್ಧ ಮತ್ತು ಗೋಗ್ರಹಣದ ಪ್ರಸ್ತಾವೂ ಬಂದಿದೆ.[೨೬]

ಇಡೀ ಮಹಾಭಾರತವನ್ನು ಶಬ್ದಚಿತ್ರದ ಮೂಲಕ ಕಾಣಿಸುವ ಸಂಗತಿ ನಿಜಕ್ಕೂ ಅಪರೂಪ ಎನ್ನಬೇಕಾಗುತ್ತದೆ. ದೇವಾಲಯಗಳಲ್ಲಿ ಸಾಮಾನ್ಯವಾಗಿ ಪಟ್ಟಿಕೆಗಳ ಮೇಲೆ ಶಿಲ್ಪ ಕೆತ್ತನೆಯ ಮೂಲಕ ರಾಮಾಯಣ, ಮಹಾಭಾರತ ಮೊದಲಾದ ಕತೆಗಳನ್ನು ಹೇಳಿರುವುದನ್ನು ಕಾಣುತ್ತೇವೆ. ಆದರೆ ಈ ಶಾಸನಗಳನ್ನು ಗಮನಿಸಿದಾಗ ಕತೆಯನ್ನು ಚಿತ್ರದಲ್ಲಿ ಹೇಳದೇ ಅವುಗಳನ್ನು ಶಬ್ದಗಳಲ್ಲಿ ಸೆರೆ ಹಿಡಿದಿರುವುದು ಮಹತ್ವ ಪಡೆದುಕೊಳ್ಳುತ್ತದೆ. ಉತ್ತರ ಕರ್ನಾಟಕದ ಶಾಸನಗಳ ವೈಶಿಷ್ಟ್ಯ ಇರುವುದೇ ಇಂತಹ ಸಂದರ್ಭಗಳಲ್ಲಿ ಎಂದರೆ ತಪ್ಪಾಗಲಾರದು.

ರಂಬಲದೇವಿ ಶಾಸನ

ನ ತಶೂರಂ ಚಲದಂಗ [೦]

ಗ ಮಹಿಪಂ ತತ್ಪುತ್ರಕಂ
ಬಾಸಂಭೂಪತಿಗೆ ತತ್
ಪ್ರಿಯಂ ಕಾವಣಬ್ಬರಿಸಿ
ಗಂ ಸ್ತ್ರೀ ರತ್ನಮೆಂಬನ್ನದುನ್ನ
ತಿಯಿಂ ರಂಬಲದೇವಿ ಪುಟ್ಟಿ
ಜಗದಿಂದ ರಂಭಾರುರಂಭಾಭಿಮಾರೆ
ಸತಿ ತಾಂ ಬಿಕ್ಕಲದೇವ ಪ
ತಿಯೆನಿಸಲ್ಕಂ ನೊನ್ತಳೆಲ್ಲ
ದಿಂ ॥ ಇನ್ತನೆ ಧಾತ್ರಿಯೊ
ಳ್ ನೆಗಳ್ದಿ ರಂಬಲದೇವಿ
ವಿಳೋಳ ನೇತ್ರವಾಕಾನ್ತೆ
ಯೆನಿಪ್ಪಿನಂ ಶ್ರುತ[ದೇ]
ಳವಾಗಿ ಬಱೆಕ್ಯವಾದತ[ನ್ನ]
ನ್ವ ವಿಧಾನದೊಳೆ ಜಿನಪ
ದದ್ವಯಮುಂ ನೆನೆಯುತ್ತ
ವಿಟ್ಟು ಪೂವಿಂತಳೆರ್ವ್ವೊನ್ದು ಕಂಪೆ[ನಿ]
ಸಿ ಪೊಗಿ ಸುರೋತ್ತಮೆಯಾಗಿ
ಪುಟ್ಟಿದಳ್ ॥

**ಎಡಭಾಗ**

ಅಳಿನೀಳಾಳಕಿ ಲೋಳ
ಲೋಚನೇ ಚಳದೆ ಭ್ರೂ
ಯುಗ್ಮೆ ಬಿಂಬೋಷ್ಟಿಕೆ
ಳ ಬಾಹುಯುಗೆ ತುಂಗ[ವೃ]
ತ್ತ ಕುಚೆ ರಂಭಾಭೋರು
ಸತ್ಕರ್ಣ್ಣಿಕಾರ ಲತಾಂ ತೋ
ಳ ವರ್ಣ್ಣೇ ಹಂಸಗತಿ
ರಂಭಾದೇವಿಯನ್ದನ್ದೆ ತ
ದ್ವಿಳಸದೆ ರೂಪ ಕಳಾ
ಪವಿಭ್ರಮಮಾ ನಿನ್ನೇ

ವರ್ಣ್ಣಿಪೊಂ ಬಣ್ಣಿಪಂ
ಮಿಗಿಲೆನಿಪ ಪಣ್ಡಿ
ರೆಲ್ಲೀ ಜಗದೊಳ್ ದೊರೆಯ[ಪ್ಪೊ]
ಕ್ಕಮೇನಾನುಂ ಪನ್ನಗಶಯ
ನ ವಿಪುಳ ವಕ್ಷ ಸ್ಥಗಿತ ಶ್ರೀ
ದೇವಿ ನಿನಗೆ ರಂಭಾದೇವಿ
ಶ್ರೀ ಚನ್ದ್ರಭಟ್ಟಾರಕರ ಗು
[ಡ್ಡಿ] ರಂಭಾದೇವಿ ॥

**ಹಿಂಭಾಗ**

ಸ್ವಸ್ತಿ ಸಕವರ್ಷ ೯೧೯ನೆ
ಯ ಸರ್ವ್ವಜಿತ್ಸಂವತ್ಸರದಾ
ಶ್ವಯುಜ ಬಹುಳ ಪಞ್ಚಮಿ
[ವಿ] ಸುಗತಿಯಂ ಸಾಧಿಸಿದಳ್॥'[೨೭] (೯೮೭)

ಎಂಬ ವಿಚಾರ ಬಂದಿದೆ. ಈ ಶಾಸನ ಮತ್ತೊಂದು ವಿಶೇಷವನ್ನು ತಿಳಿಸುತ್ತದೆ. ಚಲದಂಕಗಂಗನ ಮಗನಾದ ಬಾಸ–ಕಾವಣಬ್ಬರಸಿ ದಂಪತಿಗಳ ಮಗಳು ರಂಬಲದೇವಿಯು ಶ್ರೀಚಂದ್ರಭಟ್ಟಾರಕನ ಗುಡ್ಡಿಯಾಗಿ ಜಿನಪದವನ್ನು ನೆನಯುತ್ತ ಮರಣಿಸಿ ಸುರಲೋಕದಲ್ಲಿ ಸುರೋತ್ತಮೆಯಾಗಿ ಹುಟ್ಟಿದಳು ಎಂಬ ಉಲ್ಲೇಖ ಬರುತ್ತದೆ. ಜೈನ ಧರ್ಮೀಯಳಾದ ರಂಬಲದೇವಿಯ ಸುರಲೋಕ ಪ್ರಾಪ್ತಿ ಪಡೆದಳು ಎಂಬುದು ಶೈವ–ವೈಷ್ಣವ ಪರಂಪರೆಯಲ್ಲಿ ಕಾಣಿಸುವ ಕಲ್ಪನೆಯಾಗಿದೆ. ಇಲ್ಲಿರುವ ಇನ್ನೊಂದು ವಿಶೇಷವೆಂದರೆ ಆಕೆ ಸುರಲೋಕ ಮಾತ್ರ ಸೇರಲಿಲ್ಲ ; ಸುರಲೋಕದಲ್ಲಿ ಸುರೋತ್ತಮೆಯಾಗಿ ಮರುಹುಟ್ಟು ಪಡೆದಳು ಎಂದಿರುವುದು ಜೈನ ಶಾಸನಗಳಲ್ಲೇ ಅಪರೂಪವಾದ ವಿಷಯವಾಗಿದೆ.

ತ್ರಿಕಾಲಯೋಗಿ ಶಾಸನ

'... ಘನ ಘನ ಗರ್ಜ್ಜನಂ ನೆಗ
ಟ್ ವೃಷ್ಟಿ ನಿರಂನ್ತರಮಾಗೆ ಮಿಂ
ಚು ಸಂಜನಿಸೆ ಸಿಡಿಲ್ಗಳೆ
ಯ್ದೆ ಭಯಮಂ ಪಡೆಯು
ತಿರೆ ವೃಕ್ಷಮೂಳದೊಳ್
ನಮಿತಭವ್ಯರವ್ಯ
ಯಗುಣರ್ಜಿನನು
ತ ತ್ರಿಕಾಳಯೋಗಿ..'[೨೮]

ಎನ್ನುವ ವಿಷಯ ಕೊಪ್ಪಳದ ಆಗ್ನೇಯ ದಿಕ್ಕಿನ ಕೋಟೆಗೆ ಸೇರಿಸಿದ್ದ ೧೨ನೇ ಶಾಸನದಲ್ಲಿ ಬರುತ್ತದೆ. ಗೊಲ್ಲಾಚಾರ್ಯನ ಶಿಷ್ಯ ತ್ರಿಕಾಲಯೋಗಿ ತಪಸ್ಸು ಕುಳಿತಾಗ ಆತನ ತಪವನ್ನು ಕೆಡಿಸಲು ಮೋಡಗಳು ಆರ್ಭಟಿಸಿದವು. ಸಿಡಿಲು-ಮಿಂಚುಗಳು ಹೆದರಿಸಿದವು. ಮಳೆಯಂತೂ ಬಿಟ್ಟು ಬಿಡದೇ ಸುರಿಯುತ್ತಿತ್ತು ಎಂಬ ವಿಷಯ ಇಲ್ಲಿ ಬರುತ್ತದೆ. ಇಂತಹ ಉಲ್ಲೇಖಗಳು ಸಾಮಾನ್ಯವಾಗಿ ಋಷಿಮುನಿಗಳು ತಪಸ್ಸು ಕೈಗೊಂಡಾಗ ಅವರ ತಪಸ್ಸನ್ನು ಕೆಡಿಸಲು ಪುರಾಣಗಳಲ್ಲಿ ಬಳಕೆಯಾಗಿವೆ. ಹಿರಣ್ಯಕಶ್ಯಪು, ವಿಶ್ವಾಮಿತ್ರ, ಕುಂಭಕರ್ಣ ಮೊದಲಾದವರನ್ನು ಕುರಿತು ಇರುವ ಕತೆಗಳಲ್ಲಿ ಇಂತಹ ವಸ್ತು ಬಂದಿರುವುದನ್ನು ಗಮನಿಸಿದಾಗ ಅವೆಲ್ಲ ಪುರಾಣ ಕಲ್ಪನೆಗಳು ಎಂದುಕೊಂಡ ಆಧುನಿಕ ಪ್ರಪಂಚದಲ್ಲಿ ತ್ರಿಕಾಲಯೋಗಿಯ ತಪಸ್ಸು ಕೆಡಿಸಲು ಗುಡುಗು-ಸಿಡಲು, ಮಿಂಚು, ಮಳೆ ಪ್ರಯತ್ನಪಟ್ಟರೂ ಆತ ಅವುಗಳಿಗೆ ಅಂಜಲಿಲ್ಲ ; ಅಳುಕಲಿಲ್ಲ ಎಂಬ ವಿಚಾರ ಇಲ್ಲಿದೆ. ಇವೆಲ್ಲ ಪೌರಾಣಿಕ ಹಿನ್ನೆಲೆಯ ಅಗ್ನಿ, ವರುಣ, ವಾಯು ಎಂಬ ದೇವತೆಗಳ ಪ್ರತೀಕಗಳೇ ಆಗಿವೆ.

ಇನ್ನು ಸಾಮಾನ್ಯವಾಗಿ ಕಾಣಸಿಗುವ ಚಿತ್ರಣವೊಂದು ಕೊಪ್ಪಳದ ಶಾಸನದಲ್ಲಿ ದೊರೆತಿದೆ. ಅದು ಇಂತಿದೆ ;

ಸ್ವಸ್ತಿ ಶತಕ.....ಕಾಳಾಕ್ರಾನ್ತ ಸಂವ[ತ್]
ಸರ ಶತಂಗಳ್ ೮೯೯ ನೆಯ ಧಾತು ಸಂವತ್ಸರದ ಕಾರ್ತ್ತಿ
ಕ ಮಾಸದ ಪುಣ್ಣಮೆಯಂದು ಪೊಲೆಯಬೆಯ ಮ
ಗಳ್ ಎಱೆಯಬೆ ಮನುಚರಿತ ಗಂಗಚನ್ದ್ರಾವನೀತ
ಳ ಪಾಳಕನ ಲೋಕನೆವಯ್ಯಭೂವಿ ಗುಣಗಣ ತಿ
ಳಕರಾತನ ವನಿತೆಯ....ಮಿದ.....ಧರೆ
ಯೊಳ್ ನೆಗೞ್ದಳ್ ॥
[ಬ್ಬೆ]ನಾಲ್ವೆ[ರೆಲ್ಮ]......
ಜಿಪದಂಮ್ಮನ.
ನೆಯನಾಲಗ ಪಂಚನ
ಮಸ್ಕ್ರಿಯೋಪದೇಶನ ವಿ
ಧಿಯೊಳ್ತಗುಳ್ಚಿರೆ ಲಲಾ
ಟ ತಟಾರ್ಪ್ಪಿತಹ [ಸ]
ಯುಗ್ಮೇ ಸನ್ಮೌನಿಜನಮ
ಧ್ಯದೊಳ್ನೆಱೆಯೆನೋನ್ತೆ

ಱೆಯಬ್ಬೆ ಸಮಾಧಿ [ಯೋ]

ಗದಿಂ ಜನಕ ತನೂಜೆ

ಯನ್ತೆ ಸುರಲೋಕ ಪತಿ [ತ್ವ]

ಮನೆಯ್ದಿ ತಾಳಿದಳ್ ॥'[೨೯]

ಕೊಪ್ಪಳದ ಆಗ್ನೇಯ ದಿಕ್ಕಿನ ಕೋಟೆಗೆ ಸೇರಿಸಿದ್ದ ಶಾಸನದಲ್ಲಿ ಈ ಪ್ರಸ್ತಾಪ ಬಂದಿದ್ದು, ಪೊಲೆಯಬ್ಬೆಯ ಮಗಳು ಎಱೆಯಬ್ಬೆಯು ಸಮಾಧಿಯೋಗದಿಂದ ಸುರಲೋಕಕ್ಕೆ ಸಂದಳು ಎಂಬ ವಿಷಯವನ್ನು ತಿಳಿಸುತ್ತದೆ. ಈ ಸುರಲೋಕದ ಬಗ್ಗೆ ಹೆಚ್ಚಿನ ವ್ಯಾಖ್ಯಾನಗಳನ್ನು ನೀಡುವ ಅವಶ್ಯಕತೆ ಇಲ್ಲ. ಇದೊಂದು ಉತ್ಪ್ರೇಕ್ಷಿತ ಸಂಗತಿಯಾಗಿಯೂ ಜನಮಾನಸದಲ್ಲಿ ಮರಣಕ್ಕೆ ಪ್ರತಿಯಾಗಿ ಬಳಕೆಯಾಗುವ ಪದವಾಗಿದೆ. ಆದರೂ ಸುರಲೋಕ ಎನ್ನವುದು ಪುರಾಣಗಳ ಹಿನ್ನೆಲೆಯಲ್ಲಿಯೇ ಅನಾವರಣಗೊಳ್ಳುತ್ತದೆ ಎಂಬುದನ್ನು ಮರೆಯುವಂತಿಲ್ಲ.

ಕೊಪ್ಪಳದ ಆಗ್ನೇಯ ದಿಕ್ಕಿಗೆ ಸೇರಿಸಿದ್ದ ೨೬ನೇ ಶಾಸನದಲ್ಲಿ ಹೀಗೆ ಬರುತ್ತದೆ ;

'... ... ಇರುಳುಂ ಪಗಲುಂ ತಪಮಿನ್ತೆ ಸನ್ದು

ದೆಂಬಕದ ಬರರೆಯ್ದೆ ತೊಱೆದಿಟ್ಟಾದಲಿನ್ದಸುವ

ಸುಚಿತ್ತದಿನ್ದಂ ಕಳೆದೆಯ್ದಿದ ಸುಗತಿಯಂ ಮಲ

ಧಾರಿಗಳಗ್ರ ಸೂರಿಗಳ್ // ಸ್ಮರನರಲಂಬುಗಳ್ಮ ನಮ

ನುಟಳ್ಚಿದ ದಿಶ್ಚರಿತಂ ನೆಗಟ್ತೆಯಳ್ಪೊರೆಯದೆ ಮೋಹ

ಪಾಶದ ತೊಡರ್ಪ್ವಣಮಿಲ್ಲದ ಕರ್ಮ್ಮಬನ್ಧದೊಳ್ಕೊರ[ಳ]

[ದಾ]ಚಿತ್ತದಿನ್ತೊಱದು ನೋನ್ತಪಜೀವಿತದಿನೆ ಮುಕ್ತಿಯೊಳ್

..ರೆಧನುವಿನ ಮಾನುಷಮೀ ಲೋಕದೊಳಿ ಮಲಧಾರಿದೇವರ

... ... ... ... ... ... ... ... ... ... ... ... ... ... ... ...

... ಮಳಧಾರಿದೇವರಿ.......

ನೆಟ್ಟ್ದಿ ಪೊಗಟ್ದಂ ನಿಜಲೋಕದೊಳನ್ತದಕೆ

ಭೂಭುವನಮೊಟಲ್ದು ಬಣ್ನಿಸಿದುದಿ

ನ್ದ್ರನು ಮಾಡಿದಿನಿನ್ದ್ರಲೋಕದೊಳ್ದಿವಿಜರೊ

ಲ್ದು ಕುಡೆ ಗುಡಿಗಟ್ಟಿದರೇಮ್ಮುನಿಪ

ರ್ಮ್ಮಹಾತ್ಮರೋ'[೩೦]

ಈ ಶಾಸನದಲ್ಲಿ ಕೊಂಡಕುಂದಾನ್ವಯ ದೇಸಿಗಣದ ಶ್ರೀಧರ ವಿಮುಕ್ತ ಭಟಾರರ ಶಿಷ್ಯ ಮಲಧಾರಿ ಮುನಿಯು ಪಾಪವೆಂಬ ಕಂಬವನ್ನು ಮುರಿದು, ಇಂದ್ರಿಯಗಳನ್ನು ಗೆದ್ದು, ಹಗಲು

ಇರುಳು ತಪಸ್ಸು ಮಾಡಿ ಸದ್ಗತಿ ಪಡೆದನು. ಈತನ ತಪದ ಪರಿಣಾಮ ಮನ್ಮಥ ಸನಿಹಕ್ಕೂ ಸುಳಿಯಲಿಲ್ಲವಂತೆ ; ಬಾಯಾರಿಕೆ ಇಂಗಿ ಹೋಯಿತು ; ಕರ್ಮ ನಾಶವಾಯಿತು ಎಂದಿರುವುದಲ್ಲದೆ ಈ ಮುನಿಯು ಸುಗತಿಯನ್ನು ಸಾಧಿಸಿದಾಗ ಇಂದ್ರಲೋಕದಲ್ಲಿ ಇಂದ್ರನು ಸಂತೋಷದಿಂದ ದೇವತೆಗಳೊಡನೆ ಕುಣಿದಾಡಿದನಂತೆ ! ಮರಣಾನಂತರದ ಇಂತಹ ಕತೆಗಳು ಐತಿಹ್ಯಗಳಾಗಿ ಬೆಳೆದು ಬಂದಿರುತ್ತವೆ. ಮಲಧಾರಿ ಮುನಿ ಎಲ್ಲವನ್ನೂ ತೊರೆದು, ಎಲ್ಲದರ ಮೇಲೆಯೂ ನಿಯಂತ್ರಣ ಇಟ್ಟುಕೊಂಡ ಮನುಷ್ಯ. ಇಂತಹ ವ್ಯಕ್ತಿ ತಪಸ್ಸನ್ನೇ ತನ್ನ ಜೀವನದ ಉಸಿರಾಗಿಸಿಕೊಂಡಿದ್ದ. ಇದೇ ಕಾರಣಕ್ಕೆ ಆತ ಸುಗತಿಯನ್ನು ಸಾಧಿಸಿದಾಗ ಅಂದರೆ ಮರಣವನ್ನಪ್ಪಿದಾಗ ಇಂದ್ರಲೋಕದಲ್ಲಿ ಇಂದ್ರನು ಇತರೆ ದೇವತೆಗಳೊಂದಿಗೆ ಕುಣಿದಾಡಿದ ಎಂಬ ಉಲ್ಲೇಖಕ್ಕೆ ಎರಡು ಮುಖಗಳಿವೆ. ಮೊದಲನೆಯದು ಇಂತಹ ಒಬ್ಬ ಮಹಾಪುರುಷ ತನ್ನ ಲೋಕಕ್ಕೆ ಬರುತ್ತಿದ್ದಾನೆ ಎಂಬ ಸಂತೋಷ ಇಂದ್ರನಿಗಾಗಿದೆ ; ಎರಡನೆಯದು ಮಹಾನ್ ತಪಸ್ವಿಯೊಬ್ಬ ಇನ್ನಿಲ್ಲವಾದ ಸುದ್ದಿ ಇಂದ್ರನಿಗೆ ಖುಷಿ ಕೊಟ್ಟಿದೆ. ಯಾಕೆಂದರೆ ಇಂದ್ರ ಇಂತಹ ಕಾಲದಲ್ಲಿ ಖುಷಿ ಪಡುವ ಸಂಗತಿಗಳು ಹಲವಾರು ಪುರಾಣಗಳಲ್ಲಿ ಕಾಣಿಸಿಕೊಳ್ಳುತ್ತವೆ. ಭೂಲೋಕದಲ್ಲಿ ತಪೋನಿರತರ ತಪಸ್ಸು ಕೆಡುವಂತೆ ಮಾಡುವುದರಲ್ಲಿ ಇಂದ್ರ ಎತ್ತಿದ ಕೈ ಎಂಬುದು ಪುರಾಣಗಳಲ್ಲಿ ಕಾಣಸಿಗುತ್ತದೆ. ಹೀಗಾಗಿ ಇದು ಸರಿ ಎನಿಸುತ್ತದೆ. ಆದರೆ ಇಲ್ಲಿರುವ ವಿಚಾರ ಇದಕ್ಕಿಂತ ಭಿನ್ನವಾಗಿದೆ ಎಂಬುದು ಕೂಡ ಅಷ್ಟೇ ಸತ್ಯ. ಯಾಕೆಂದರೆ ಶಾಸನದ ಉದ್ದೇಶ ಮಲಧಾರಿಯನ್ನು ವರ್ಣಿಸುವುದಾಗಿದೆ. ಹೀಗಾಗಿ ಮೊದಲನೆಯ ಮುಖದಲ್ಲಿ ಗುರುತಿಸಿರುವುದು ಈ ಶಾಸನದ ಪ್ರಮುಖ ಉದ್ದೇಶ ಎನಿಸಿಕೊಳ್ಳುತ್ತದೆ.

ಕೊಪ್ಪಳದ ಆಗ್ನೇಯ ದಿಕ್ಕಿಗೆ ಇರುವ ಕೋಟೆಗೆ ಸೇರಿಸಿದ್ದ ೩೩ನೇ ಶಾಸನವು ಹೀಗಿದೆ ;

'... ... ತುಂಬುರು
ನಾರದ ಗೀತ ನಿಸ್ವನಂ [ಆ]ಯ
ಮಟಿವಪ್ಸರೋಗಣದ ನ
ರ್ತ್ತನಮೆಂಬಿದು ರೇವಕಯ್ಯೆ
ಕಂತಿಯರೆಳೆಯಿಂ ದಿವಕೆ
ವರೆ ಸ್ವರ್ಗ್ಗದೊಳಾಯ್ತು ಮಹಾ
ಮಹೋತ್ಸವಂ//

ಈ ಶಾಸನದಲ್ಲಿ ಬರುವ ರೇವಕಯ್ಯೆ ಮಾಂಡಳೇಶ್ವರನ ಪತ್ನಿಯಾಗಿದ್ದರೂ ಕಾಣೂರುಗಣದ ಕನಕನಂದಿ ಮುನಿಯಿಂದ ದೀಕ್ಷೆ ಪಡೆದ ಕಂತಿಯಾಗಿದ್ದಂಥವಳು. ಆಕೆ ಸನ್ಯಾಸ ಸ್ವೀಕರಿಸಿ ಮಡಿದಾಗ ದೇವಲೋಕದಲ್ಲಿ ಮಹೋತ್ಸವವನ್ನು ಆಚರಿಸಲಾಯಿತು ಎಂದು ಇಲ್ಲಿ ಪ್ರಸ್ತಾಪ ಬಂದಿದೆ. ರೇವಕವ್ವೆಯ ಮರಣವನ್ನು ಸೂಚಿಸುವ ಈ ಶಾಸನದಲ್ಲಿ ದೇವಲೋಕದಲ್ಲಿ ಮಹೋತ್ಸವವನ್ನು ಆಚರಿಸಲಾಯಿತು ಎನ್ನುವಲ್ಲಿಯೂ ಕೂಡ ಮೇಲಿನ ವಿವರಣೆಯೇ ಕಾರಣವಾಗಿದೆ.

ಇಂಥ ಹೊಗಳಿಕೆಗಳು ಕೇವಲ ಮರಣ ಸಂದರ್ಭದಲ್ಲಿ ಮಾತ್ರವಲ್ಲ ದಾನ ನೀಡಿದ ಸಂದರ್ಭದಲ್ಲಿಯೂ ಕಾಣಿಸಿಕೊಳ್ಳುತ್ತವೆ. ಆಗರ್ಭ ಶ್ರೀಮಂತರು ದಾನ ಮಾಡಿದಾಗ ಅದು ಢಾಣಾಡಂಗುರವಾಗುವಂತೆ ನೋಡಿಕೊಳ್ಳುತ್ತಾರೆ ಎಂಬುದು ಇಂದಿಗೂ ಇದೆ ; ಹಿಂದೆಯೂ ಇತ್ತು. ಇದಕ್ಕೆ ಉದಾಹರಣೆಯಾಗಿ ಯಲಬುರ್ಗ ತಾಲೂಕಿನ ಸಂಕನೂರು ಗ್ರಾಮದ ತ್ರಿಲಿಂಗೇಶ್ವರ ದೇವಾಲಯದ ಬಲಭಗದಲ್ಲಿರುವ ಶಾಸನದಲ್ಲಿ ಮುದವೊಳಲ ಸಾವಿರ ಅಶೇಷ ಮಹಾಜನರು ಗವರೇಶ್ವರದೇವರ ದೇವಾಲಯ ಕಟ್ಟಿದ್ದು ಅವರನ್ನು ಹಲವು ವಿಶೇಷಣಗಳಿಂದ ಹೊಗಳಲಾಗಿದೆ. ಅದು ಇಂತಿದೆ,

ಗ್ರಾಮ ನಾಮೋತ್ತಮರು ಕಲಿಯುಗ ರಾಮರು ಏಕವಾಕ್ಯರು । ಶ್ರೀ ಸ್ವಯಂಭು ಜಡೆಯ ಶಂಕರದೇವರ ಪಾದಾರಾಧಕರು । ನಾಮಾದಿ ಸಮ

ಸ್ತ ಪ್ರಶಸ್ತಿ ಸಹಿತ ಶ್ರೀಮನ್ಮಹಾಗ್ರಹಾರಂ ಮುದುವೊಳಲಶೇಷ ಮಹಾಜನಂಗಳು ಸಾಸಿರ್ವ್ವರು॥ ಭೂವಂದ್ಯರ್ವ್ವೇದವೇದೀ

ಗುರುಮಂರುದತಿಥಿಬ್ರಾತಪೂಜಾರತರ್ಭೂದೇವೋತಂಶ ಪ್ರತಾಪ ಪ್ರಸಮಿತ ರಿಪುಗಳ್ವಿಶ್ವ ವಿದ್ಯಾವಿರಿಂಚಮ್ಮೂರ್ವತ್ತಿಚ್ಛಾಸಿರಕ್ಕಂ

ತಲೆಯೆನಿಪ ಯಶಶ್ರೀಗಡರ್ಪ್ಪುದುದಾತ್ತತ್ತಾವೆಂದಂದಣ್ಮಂ ಸಾಸಿರ್ವ್ವರ ಮಹಿಮೆಯನಿಂ ಬಣ್ಣಿಸಲು ಬಲ್ಲನಾವಂ ॥ ಪೆಱರವಿಶೇಶದಿಂ ಪೊ

ಗಳ್ವೞರ್ಕ್ಕಮ ಬಣ್ಣಿಸಲು ಬಗೆವನುಂಗೆಱವೇ ॥ ವಂದಿಕಜ್ಬ್ಬಮಹಿಜನಂ ಶರಣಾಗತ ವಜ್ರ ಪಂಜರರ್ತ್ತೊಱಪ ಕುಳಾನ್ತಕರ್ಸ್ಸಿತರ ಮನ್ನೆ

ಯ ಪನ್ನೆಗ ವೈನತೇಯರೆಂಬಱಿಕೆಯ ನಾಮಮಾಲೆ ತಮಗೊಪ್ಪಿರೆ ಸಂದಮಹಾನುಭಾವರು॥ ಸುರಕುಜಮಂ ತಿರಸ್ಕರಿಪ ನಂದನದಿಂ ಸು

ರಧೇನುವಂ ನಿರಾಕರಿಪ ಪಯಂಗಳಿಂ ಸುರವಿಮಾನಮನೇಳಿಪ ಚಿತ್ರಸದ್ಮದಿಂ ಸುರಗುರವಂ ಪಳಂಚಲೆವ ಪಂಡಿತರಿಂ ಪರಿಪೂ

ರ್ಣ್ನಮಗಾಗಿ ಧಿಕ್ಕರಿಪುದು ಪೆಂಪಿನಿಂ ಮುದುವೊಳಲು ಸುರರಾಜನ ರಾಜಧಾನಿವೊಲ್ ॥ ಅದರೊಳಗೆ ॥ ಸುರಶೈಳೋರ್ಜ್ಜಿತಮೆಂತಂತನುಪಮರಖಿ

ಳಾಶಾತವಾರಾಸಿಯೆಂತಂತಿರೆ ಪೆಂಪಿ ಗುಣ್ಬೆನಾಗ್ಗ್ರಂ ಪಿರಿಯರನಿಮಿಶಪ್ರಿತವಕ್ಷಂಗಳಿವಂ ತಿರಲೀವರ್ಧನಮಂ ಮಾನವ ಜನಮೆ

ಮೆಯಲು ಚಂದ್ರನೆಂತಂತಿರಲ್ಕಾವರಿಸುತ್ತಿರ್ದ್ದತ್ತುಕೀರ್ತ್ತಿ ಪ್ರಭುಗುಣಮಣಿ ಸಂಪೂಜ್ಯ [ರಿ] ನ್ನೂರ್ವ್ವರ್ಂರೊಳ್ಪಿಂ ॥ ಇವರ ಸತ್ಯಭ್ರಾತರುತ್ತಮೋತ್ಥ

ಮರಫಕ್ಷೀಣರ್ದ್ಧರಾಧಾರಂವಿಪ್ರರಹೀಂದ್ರಾಭರಣಪ್ರಿಯರ್ಸ್ಸುಚರಿತರ್ದ್ದಾನಾಗ್ರಗಣ್ಯ ರ್ಮ್ಮಹಾಪುರ್ಶ ಪ್ಪೊಗಲ ಕೀರಿತಿ

ಪೂಜ್ಯರೆನಿಸಿರ್ದ್ದಿನ್ನೂರ್ವ್ವರೀ ಧರ್ಮ್ಮಮಂ ನಿರುತಂ ರಕ್ಷಿಪುದುತ್ಸವಂ ಬೆರಸಿ ಚಂದ್ರಾರ್ಕ ತಾರಂಬರಂ ॥ ಕಂ ॥ ಅವರಾಜ್ಞೆಯಿಂದೆ ಶ್ರೀ ಶಿವನ

ವನಮನತಿಯಯುಮಾಗಿರಲು ನಿರ್ಮ್ಮಿಸಿದರ್ಭ್ಭುವನತ್ರಯವಿದಿತ ಯಶರ್ಸ್ಸವಿನಯ ಸಂಪನ್ನರಧಿಕ ಗುಣಶ್ರೀರಯ್ಯೂರ್ವ್ವರು ॥

ಭುವನ ಮುಖ ಮುಕುರಮೆನಿಸಿಯೆ ಧವಳಯಶಂ ಬಡೆದು ನೆಗರ್ದ್ದವಿದ್ವಾಪುರಕೋತ್ಸವಮಂ ಮಾಡಲು ನೆಲಸಿದ ಶ್ರೀ ಗವಱೇಶ್ವರ

ದೇವನೀಗೆ ಸುಖಸಂಪದಮಂ ॥ ಸ್ವಸ್ತಿ ಸಮಸ್ತ ಭುವನ ವಿಖ್ಯಾತ ಪಂಚಸತವೀರ ಸಾಸನ ಲಬ್ಧಾನೇಕ ಗುಣಗಣಾಳಂಕೃತ ಸತ್ಯ

ಸೌಚಾಚಾರ ಚಾರಿತ್ರ ನಯವಿನಯ ವಿಜ್ಞಾನ ವೀರಬಳಂಜಧರ್ಮ್ಮ ಪ್ರತಿಪಾಳನ ವಿಸುದ್ಧ ಗುಡ್ಡ ಧ್ವಜ ವಿರಾಜಿತಾನೂ

ನ ಸಾಹಸ ಸತ್ಯಬಳ ವೀರಲಕ್ಷ್ಮೀಲಂಗಿತ ವಿಶಾಳ ವಕ್ಷಸ್ಥಳ ಭುವನ ಪರಾಕ್ರಮೋನ್ನತರುಂ ॥ ವಾಸುದೇವಖಣ್ಡಳೀ ಮೂ

ಳಭದ್ರ ವಂಶೋದ್ಭವರುಂ । ಭಗವತೀ ಲಬ್ದವರಪ್ರಸಾದರುಂ । ದ್ವಾತ್ರಿಂಶವೇಳಾವೂರಷ್ಟಾದಶಪಟ್ಟಣರುಂ । ಚೌಷಷ್ಟಿಯೋಗ ಪೀಠಸ

ಯುತರುಂ । ಬಲ್ಲುಂಕಿ ದಂಡಹಸ್ತರುಂ । ಈಶ್ವರ ವರಪ್ರಸಾದರುಂ । ಅಯ್ಯಾವೊಳೆಯ ಪುರವರಾಧೀಶ್ವರರರುಂ ಶ್ರೀಮಚ್ಚ

ಕ್ರವರ್ತ್ತಿ ಪ್ರಸನ್ನರುಂ । ಶರಣಾಗತ ವಜ್ರಪಂಜರರುಮಪ್ಪ ಶ್ರೀಮದಯ್ಯೂರ್ವ್ವರ ಪರಾಕ್ರಮಮೆನ್ತೆಂದಡೆ ಬಲ

ದೊಳು ಬಾಲಿಯಂ ಚಲದೊಳು ದುರ್ಯ್ಯೋಧನನಂ ಸತ್ಯದೊಳು ಧರ್ಮ್ಮಪುತ್ರನಂ ಸಾಹಸದೊಳು ಭೀಮನಂ । ಪರಾಕ್ರಮ

ದೊಳರ್ಜುನನಂ । ಅಱೆತದೊಳು ಸಹದೇವನಂ । ಸೌಚದೊಳು ಗಾಂಗೇಯನಂ । ತೇಜದೊಳಾದಿತ್ಯನಂ । ಬೋಗದೊಳಿಂದ್ರನಂ । ತ್ಯಾಗದೊಳು ಕ

ರ್ಣ್ನನಂ । ಕೋಪದೊಳಗ್ನಿಯಂ । ಬಲ್ಲಾಳ್ತನದೊಳು ಜವನಂ । ಪೆಂಪಿಂದಾಕಾಶಮಂ । ಬಿಣ್ಪಿಂ ಧರಣಿಯಂ । ಗುಣ್ಪಿಂ ಮಹಾಸಮುದ್ರಮಂ ಪೋ

ಲ್ವಯ್ಯೂರ್ವ್ವರಮಹಿಮೆಯೆಂತೆಂದಡೆ ॥ ವೃ ॥ ನಿನಗೇನಂ ಪೇಳ್ವೆನಯ್ಯೂರ್ವ್ವರ ಮಹಿಮೆಯ ನೀವಾರ್ಪ್ಪನೊಳ್ಪ ಖೇಚರಾದೀಶನನು

ದೃತ್ ಸೌರ್ಯ್ಯದೊಳು ಷಣ್ಮುಖನನದಟಿನೊಳು ತಾರ್ಕ್ಷ್ಯನ ಸೌರ್ಯ್ಯದೊಳು ದೇವನದಿ ಸಂಜಾತನಂ ಧರ್ಮ್ಮಜನನಱೆವಿನೊ

ಳು ದರ್ಪ್ಪಕಾರಾತಿಯಂ ರೂಪಿನೊಳಿಂದ್ರಾದ್ರೀಂದ್ರಮಂ ಧೈರ್ಯ್ಯದೊಳೆ ಮಿಗುವರೆಂದಂದಡೆ
ಬಣ್ಣಿಪ್ಪನಾವಂ ॥ ಉಱದಿದಿರಾಂತ
ರಂ ಸಮರದೊಳ್ತಱಿದೊಟ್ಟುವ ಬಂದು ಭೀತಿಯಿಂ ಮಱೆವುಗೆ ಕಾದು ರಕ್ಷಿಸುವ ಪೊಣ್ದಿರೆವರ್ತ್ಥಿ
ಜನಕ್ಕೆ ಲಕ್ಷ್ಮಿ ಕಣ್ದೆಱೆದವೊ
ಲೀಲಮಾಂತನದ ಚಾಜದ ಬೀರದೊಳಾದ ಹೆರ್ಮ್ಮೆಯಂ ನೆಱೆ ಪೊಗಳಲ್ಲ[ಕ್ಕ]ದಾರಪವಣಾಯ್ತೊ
ಬಳಂಜದ ಸೆಟ್ಟಿಗುತ್ತರ[ಂ] ॥ [ಕಂ] ॥ ಸುರ
ಗಿರಿತದುನ್ನತಿರ್ಕ್ಕೆಗೆ ಸುರತರು ವಿತರಣಗುಣಕ್ಕೆ ದಾನೋದಯದಿಂದ ಸುರರಾಜ ಮದಗಜೇಂದ್ರ
ದೊರೆಯಲ್ತಯ್ನೊರ್ವ್ವರಳವನೇ ವರ್ಣ್ಣಿಪುದೋ ॥[೩೧]

ಅಂದರೆ ಈ ಅಶೇಷ ಮಹಾಜನರು ಬಲದಲ್ಲಿ ವಾಲಿಯಂತೆ (ಬಲಿಯಂತೆ ?) ಯೂಥಲದಲ್ಲಿ ಧುರ್ಯೋಧನನಂತೆಯೂ ಸತ್ಯದಲ್ಲಿ ಧರ್ಮರಾಯನಂತೆಯೂ ಸಾಹಸದಲ್ಲಿ ಭೀಮನಂತೆಯೂ ಪರಾಕ್ರಮದಲ್ಲಿ ಅರ್ಜುನನಂತೆಯೂ ಜ್ಞಾನದಲ್ಲಿ ಸಹದೇವನಂತೆಯೂ ಶೌಚದಲ್ಲಿ ಭೀಷ್ಮ (ಗಾಂಗೇಯ)ನಂತೆಯೂ ತೇಜದಲ್ಲಿ ಸೂರ್ಯನಂತೆಯೂ ಭೋಗದಲ್ಲಿ ಇಂದ್ರನಂತೆಯೂ ತ್ಯಾಗದಲ್ಲಿ ಕರ್ಣನಂತೆಯೂ ಕೋಪದಲ್ಲಿ ಅಗ್ನಿಯಂತೆಯೂ ಗಟ್ಟಿತನದಲ್ಲಿ ಯಮನಂತೆಯೂ ಪೆಂಪಿನಲ್ಲಿ ಆಗಸದಂತೆಯೂ ಬಿಣುಪಿನಲ್ಲಿ ಭೂಮಿಯಂತೆಯೂ ಗುಣ್ಪಿಯಲ್ಲಿ ಮಹಾಸಾಗದಂತೆಯೂ ಹೋಲುತ್ತಿದ್ದರು ಎನ್ನಲಾಗಿದೆ.

ಒಂದು ಊರಿನಲ್ಲಿ ಹಣಬಲ ಮತ್ತು ಜನಬಲವನ್ನು ಉಳ್ಳ ಬಲಾಢ್ಯರು ಹೆಸರಿಗಾಗಿ ಏನೆಲ್ಲ ಮಾಡುವುದನ್ನು ಇಂದಿಗೂ ಕೂಡ ಕಾಣಬಹುದು. ಹೊಗಳಿಕೆಯಿಂದ ಅವರು ನಿರಂತರವಾಗಿ ಜನಮಾನಸದಲ್ಲಿ ಇರುವ ಸಲುವಾಗಿಯೋ ಅಥವಾ ದುರ್ಬಲರನ್ನು ಬೆಳೆಯಗೊಡದಂತೆ, ಅಂಜಿಕೆ ಹಾಕುವ ಸಲುವಾಗಿಯೋ ಅವರು ಯಜಮಾನರಾಗಿಯೇ ಇರಲು ಬಯಸುತ್ತಾರೆ. ಮೇಲಿನ ಶಾಸನದಲ್ಲಿ ಇಂತಹದ್ದೊಂದು ಮಾಹಿತಿ ಇರುವಂತೆ ತೋರುತ್ತದೆ. ಯಾಕೆಂದರೆ ಉಳ್ಳವರು ಏನು ಮಾಡಿದರೂ ನಡೆಯುತ್ತದೆ. ಹಾಗಾಗಿ ಇದನ್ನು ಶಾಸನದಲ್ಲಿ ಬರುವವರೇ ಹೇಳಿಸಿ ಹಾಕಿಸಿದ ವರ್ಣನೆ ಎನಿಸುತ್ತದೆ. ಅದೇನೇ ಇದ್ದರೂ ಇಲ್ಲಿ ಪುರಾಣವ್ಯಕ್ತಿಗಳಿಗೆ ಚಾರಿತ್ರಿಕ ವ್ಯಕ್ತಿಗಳನ್ನು ಸಮೀಕರಿಸಿ ಪುರಾಣವನ್ನು ಇತಿಹಾಸಗೊಳಿಸುವ ಕಾರ್ಯ ನಡೆದಿರುವುದು ಸ್ಪಷ್ಟವಾಗುತ್ತದೆ.

ಆನೆಗೊಂದಿಯಲ್ಲಿ ಉತ್ತರಕ್ಕಿರುವ ಕಡೇ ಬಾಗಿಲ ಬಳಿಯ ಹೊಲದಲ್ಲಿ ದೊರೆತ ಎಂಟು ಹಲಗೆಗಳ ತಾಮ್ರಶಾಸನವು ಕುಂಬಾರರನ್ನು ಕುರಿತು ಹೇಳುತ್ತದೆಯಾದರೂ ಇಲ್ಲಿ ಗಿರಿಜಾ ಕಲ್ಯಾಣದ ಕತೆ ಮತ್ತು ಸಮುದ್ರ ಮಥನದ ಕತೆ ದೀರ್ಘವಾಗಿ ಮತ್ತು ಕೆಲವು ಬದಲಾವಣೆಗಳೊಂದಿಗೆ ಕಾಣಿಸಿಕೊಂಡಿವೆ. ಕಾವ್ಯಾತ್ಮಕವಾಗಿ ಇರುವ ಈ ಶಾಸನವು ಉತ್ತರ ಕರ್ನಾಟಕದ ಶಾಸನಗಳಲ್ಲಿ ಹೊಸದೊಂದು ಅಂಶವನ್ನು ಒಳಗೊಂಡಿದೆ ಎಂದು ಹೇಳಿದರೂ ನಡೆಯುತ್ತದೆ.

ಮೊದಲು ಗಿರಿಜಾ ಸ್ವಯಂವರ ಬರುತ್ತದೆ. ಈ ಕತೆಯಲ್ಲಿ ಕೃತಾಯುಗದಲ್ಲಿ ದೇವರಿಗೂ-ಮನುಷ್ಯರಿಗೂ ವ್ಯತ್ಯಾಸಗಳಿರಲಿಲ್ಲ ಎಂಬುದನ್ನು ತಿಳಿಸುತ್ತದೆ. ಅಲ್ಲಿ ಯಾವುದೇ ವ್ರತವಾಗಲಿ, ಶಿಕ್ಷೆ-ದೀಕ್ಷೆಗಳಾಗಲಿ ನಡೆಯುತ್ತಿರಲಿಲ್ಲ. ದೇವರಿಗೂ ಮನುಷ್ಯರಿಗೂ ವ್ಯತ್ಯಾಸಗಳೇ ಇಲ್ಲವೆಂದ ಮೇಲೆ ವ್ರತ-ಉಪವಾಸ, ಪೂಜೆ-ಪುನಸ್ಕಾರಗಳ ಅವಶ್ಯಕತೆಯೂ ಇರುವುದಿಲ್ಲವಲ್ಲ. ಹಾಗಾಗಿ ಕಲ್ಲದೇವರಿಗೆ ಪ್ರತೀತಿ ಬರಲೆಂದು ಗಿರಿರಾಜನ ಮಗಳು ಪಾರ್ವತಿ ಪರ್ವತೊಂದರ ಬಳಿ ತಪಸ್ಸಿಗೆ ಕುಳಿತುಕೊಳ್ಳುತ್ತಾಳೆ. ಅಂದರೆ ಪಾರ್ವತಿಯೇ ಮೊಟ್ಟ ಮೊದಲು ಪೂಜಾ ವಿಧಾನವನ್ನು ಅನುಸರಿಸದಳು ಎಂಬುದನ್ನು ಕತೆ ಹೇಳುತ್ತದೆ. ಹಾಗೆ ಆಕೆ ತಪಸ್ಸಿಗೆ ಕುಳಿತಾಗ ಆಗ ಶಿವನು ಬೇಡ ರೂಪಧಾರಿಯಾಗಿ ಮನ್ಮಥನೊಂದಿಗೆ ಅಲ್ಲಿಗೆ ಬೇಟೆ ಆಡಲು ಬರುತ್ತಾನೆ. ಪಾರ್ವತಿಯನ್ನು ಕಂಡು ಮರುಳಾಗುತ್ತಾನೆ. ಮನ್ಮಥನೂ ಜೊತೆಗಿದ್ದಾನೆಂದರೆ ಇದು ಅಸಾಧ್ಯವಲ್ಲ ಬಿಡಿ. ಶಿವನಿಗೆ ಪಾರ್ವತಿಯ ಮೇಲೆ ಮೋಹ ಉಂಟಾಗಿ ಮದುವೆಯಾಗಬೇಕೆಂಬ ಆಸೆ ಹುಟ್ಟುತ್ತದೆ. ಇದನ್ನು ಅರಿತ ಮನ್ಮಥನು ವಿಷ್ಣು, ಬ್ರಹ್ಮ, ಬೃಹಸ್ಪತಿ ಮತ್ತು ದೇವೇಂದ್ರರನ್ನು ರಾಯಭಾರಕ್ಕೆ ಗಿರಿರಾಜನಲ್ಲಿಗೆ ಕಳುಹಿಸುತ್ತಾನೆ. ಎಲ್ಲರ ಒಪ್ಪಿಗೆ ದೊರೆತ ನಂತರ ಶಿವ-ಪಾರ್ವತಿಯರ ಮದುವೆಯಾಗುತ್ತದೆ. ಇಲ್ಲಿ ಹಲವಾರು ವಿಶೇಷಣಗಳು ಪೌರಾಣಿಕವಾದ ಹೆಚ್ಚಿನ ಸಂಗತಿಗಳೂ ಅಳವಟ್ಟಿವೆ.

ಇಲ್ಲಿ ವಿಶೇಷವಾದ ಸಂಗತಿಯೆಂದರೆ ಗಿರಿಜಾ ಕಲ್ಯಾಣದಲ್ಲಿ ಬರುವ ಮನ್ಮಥ ದಹನದ ಪ್ರಸ್ತಾಪವೇ ಇಲ್ಲ ! ಬದಲಿಗೆ ಮನ್ಮಥನೇ ಶಿವ ಪ್ರೀತಿಗೆ ಮತ್ತು ಮದುವೆಗೆ ಕಾರಣನಾಗುತ್ತಾನೆ. ಮೂಲದಲ್ಲಿ ಇರುವ ಸಂಗತಿಯನ್ನು ಸೂಕ್ತ ಬದಲಾವನೆಯೊಂದಿಗೆ ಇಲ್ಲಿ ದಾಖಲಿಸಿರುವುದು ತಿಳಿದು ಬರುತ್ತದೆ. ಪುರಾಣವನ್ನು ಹೀಗೂ ಕಟ್ಟಬಹುದು ಎಂಬುದಕ್ಕೆ ಈ ಕತೆ ಸಾಕ್ಷಿಯಾಗುತ್ತದೆ. ಪುರಾಣವನ್ನು ಹೊಸ ದೃಷ್ಟಿಕೋನದಿಂದ ನೋಡುವ ಈ ಶಾಸನ ಉತ್ತರ ಕರ್ನಾಟಕವಷ್ಟೇ ಅಲ್ಲ ಇಡೀ ಕರ್ನಾಟಕದಲ್ಲಿಯೇ ವೈಶಿಷ್ಟ್ಯಪೂರ್ಣವಾದದ್ದು ಎಂದು ಹೇಳಲೇ ಬೇಕಾಗುತ್ತದೆ.

ಈ ಕತೆ ಮುಗಿದ ನಂತರ ಕುಂಬಾರ ಕುಲದ ಬಗ್ಗೆ ಮಾಹಿತಿಯನ್ನು ನೀಡಲಾಗಿದೆ. ಆನಂತರದಲ್ಲಿ ಸಮುದ್ರ ಮಥನದ ಕತೆ ಬಂದಿದೆ. ಇಲ್ಲಿಯೂ ಕೂಡ ಪುರಾಣದ ಮೂಲಕತೆಯನ್ನು ಬದಲಾವಣೆ ಮಾಡಲಾಗಿದೆ. ಸುರಾಸುರರು ಸಮುದ್ರ ಮಥನ ಮಾಡಲು ಬೃಹಸ್ಪತಿ ಮತ್ತು ಶುಕ್ರನನ್ನು ಕೇಳಿಕೊಳ್ಳುತ್ತಾರೆ. ಇದಕ್ಕೆ ಶಿವ ಅನಿವಾರ್ಯವೆಂದು ಒಪ್ಪಿಕೊಂಡು ಕೈಲಾಸಕ್ಕೆ ಹೋಗಿ ಶಿವನಿಗೆ ವಿಷಯ ತಿಳಿಸುತ್ತಾರೆ. ಅಲ್ಲಿ ಉದಯಿಸಿದ ಹಲವಾರು ವಸ್ತುಗಳನ್ನು ಸುರ-ನರರಿಗೆ ಸಮನಾಗಿ ಹಂಚಿ ಕೈಲಾಸಕ್ಕೆ ಹೋಗುತ್ತಾನೆ ಎಂಬ ವಿಷಯ ಬಂದಿದೆ.[೨]

ಇಲ್ಲಿ ಗಮನಿಸಬೇಕಾದ ವಿಷಯವೆಂದರೆ ಮೂಲಕತೆಯಲ್ಲಿ ಸುರಾಸುರರು ಸಮುದ್ರ ಮಥನ ಮಾಡಿದಾಗ ಅಲ್ಲಿ ಉತ್ಪತ್ತಿಯಾಗುವ ಹಲವಾರು ವಸ್ತುಗಳು, ವ್ಯಕ್ತಿಗಳು ಮತ್ತು ಪ್ರಾಣಿಗಳನ್ನು ಹಲವು ದೇವತೆಗಳು ತಮ್ಮದನ್ನಾಗಿಸಿಕೊಳ್ಳುತ್ತಾರೆ. ವಿಷ ಹುಟ್ಟಿದಾಗ ಶಿವನು ಅದನ್ನು ಕುಡಿದು

ತನ್ನ ಗಂಟಲಿನಲ್ಲಿ ಇಟ್ಟುಕೊಂಡು ನೀಲಕಂಠನಾಗುತ್ತಾನೆ. ಅಂತಿಮ ಘಟ್ಟದಲ್ಲಿ ಅಮೃತ ದೊರೆತಾಗ ಅದು ಅಸುರರ ಪಾಲಾಗಬಾರದು ಎಂಬ ನಿಲುವಿಗೆ ಬರುವ ಸುರರು ವಿಷ್ಣುವನ್ನು ಮುಂದೆ ಮಾಡುತ್ತಾರೆ. ಆಗ ವಿಷ್ಣು ಹೆಣ್ಣಿನ ಅವತಾರ ತಾಳಿ, ಮೋಹಿನಿಯಾಗಿ ಅಸುರರಿಗೆ ಮೋಸ ಮಾಡಿ ಅಮೃತವನ್ನು ಸುರರಿಗೆ ಮಾತ್ರ ನೀಡುತ್ತಾನೆ. ಅಂತಹ ಸಂದರ್ಭದಲ್ಲಿ ಮೋಹಿನಿಯ ರೂಪಕ್ಕೆ ಮರುಳಾಗುವ ಶಿವ ಆಕೆಯನ್ನು ಅಪೇಕ್ಷಿಸುತ್ತಾನೆ. ಕತೆ ಹೀಗೆ ಮುಂದುವರಿಯುತ್ತದೆ. ಆದರೆ ಶಾಸನದಲ್ಲಿ ಬಂದಿರುವ ಕತೆ ತುಂಬ ಭಿನ್ನವಾಗಿ ನಿಲ್ಲುತ್ತದೆ.

ಸಮುದ್ರ ಮಥನ ಕಾರ್ಯ ನೆರವೇರಬೇಕಾದರೆ ಅದಕ್ಕೆ ಶಿವ ಅನಿವಾರ್ಯ ಎನ್ನುವುದನ್ನು ಇಲ್ಲಿ ಹೇಳಲಾಗಿದೆ. ಸಮುದ್ರ ಮಥನವಾದಾಗ ಅಲ್ಲಿ ಉತ್ಪತ್ತಿಯಾದ ವಸ್ತುಗಳನ್ನು ಶಿವನೇ ಸುರಾಸುರರಿಗೆ ಸಮನಾಗಿ ಹಂಚಿ ಕೈಲಾಸಕ್ಕೆ ಹೋಗುತ್ತಾನೆ. ಇಲ್ಲಿ ಶಿವ ನೀಲಕಂಠನಾಗಿದ್ದ ಎಂಬುದು ಬರುವುದೇ ಇಲ್ಲ. ಹಾಗೆಯೇ ವಿಷ್ಣು ಮೋಹಿನಿ ರೂಪು ತಾಳಿದ್ದೂ ಕೂಡ ಕಂಡುಬರುವುದಿಲ್ಲ. ಶಿವ ಆಕೆಯನ್ನು ಮೋಹಿಸಿದ್ದೂ ಇಲ್ಲ. ಇಲ್ಲಿ ಅಸುರರಿಗೆ ಅನ್ಯಾಯವಾಗುವುದೂ ಇಲ್ಲ. ಶಿವನನ್ನು ಭಿನ್ನ ದೃಷ್ಟಿಕೋನದಲ್ಲಿ ಕಾಣಿಸುವ ಪ್ರಯತ್ನ ಇಲ್ಲಿ ಕಾಣಿಸಿಕೊಳ್ಳುತ್ತದೆ.

ಕಾವ್ಯದ ಗುಣವನ್ನೇ ಒಳಗೊಂಡ ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಸಿರಸಂಗಿ ಗ್ರಾಮದ ಶಾಸನ ಕಾಣಿಸಿಕೊಳ್ಳುತ್ತದೆ. ಸಿರಸಂಗಿಯ ಕಾಳಮ್ಮನ ದೇವಾಲಯದಲ್ಲಿರುವ ಈ ಶಾಸನ[೩೩]ವು ತುಂಬ ದೀರ್ಘವಾಗಿದ್ದು ಕಾವ್ಯಾತ್ಮಕವಾಗಿ ಮೂಡಿಬಂದಿದೆ. ಇದೊಂದು ದತ್ತಿ ಶಾಸನವಾಗಿದ್ದರೂ ಒಂದು ಸುಂದರವಾದ ಪೌರಾಣಿಕ ಕತೆಯನ್ನು ಅಚ್ಚುಕಟ್ಟಾಗಿ ಹೇಳುವಲ್ಲಿ ಯಶಸ್ವಿಯಾಗಿದೆ. 'ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ...' ಎಂದು ಆರಂಭಗೊಳ್ಳುವ ಈ ಶಾಸನದಲ್ಲಿ ಸಿರಸಂಗಿಯ ವಿಷಯವನ್ನು ಪ್ರಸ್ತಾಪಿಸಲಾಗಿದೆ.

'ಆ ಸ್ಥಳದಾದಿ ಪ್ರಪಂಚವೆಂತೆಂದೊಡೆ
ಹಿಮವತ್ಪರ್ಬ್ಬತ ವಿಂಧ್ಯಶೈಳಪತಿ ಕಿಷ್ಕಿಂಧಾದ್ರಿಯೀ ಮೂಱು ಭೂ
ದ್ರಮೆ ಪೂರ್ವ್ವಾಪರ ವಾರ್ಧ್ಧಿಯಾಂಕೆ ನಿಜ ವಿಸ್ತಾರಕ್ಕೆನ[ಲ್] ನೀಳ್ದವಾ
ಹಿಮವದ್ವಿಂಧ್ಯರಾಧರಂಗಳೆರಡಕ್ಕಂ ತಾನೆ ಮೇಲಾ[ದುದು]
ತ್ತಮ ಕಿಷ್ಕಿಂಧ ಗಿರೀಂದ್ರ[ವು]ತ್ತಮ ಜನೌಘಂ ತಂನೊಳೊಪ್ಪುತ್ತಿರ[ಲ್]
ಅವರಾರೆನೆ
ತರದಿಂ ಬಾಲಿ ಮರುತ್ಸುತಾಂಗದ ದಿನೇಶಾಪತ್ಯತಾರಾಮನೋ
ಹರಿ ವಿಪ್ರರ್ಷಿ ಮತಂಗ ಹಂಸ ಕಪಿಲ ಶ್ರೀ ಶೌನಕಾಗಸ್ತ್ಯ ಸ
ಚ್ಚರಿತೋದ್ಭಾಸಿ ವಿಭಾಂಡಕ ಪ್ರಿಯಸುತ ಶ್ರೀ ರಿಶ್ಯಶೃಂಗ ಬ್ರತೀ
ಶ್ವರರ್ಗಾ[ಯ್ತಾ]ಶ್ರಯವಂತದೆಂಬೆನಜಿಯೆಂ ಕಿಷ್ಕಿಂಧಮಂ ಬಣ್ಣಿಸ[ಲ್]'[೩೪]

ಎಂಬುದಾಗಿ ಹೇಳಿ ರಿಶ್ಯಶೃಂಗಿ ಸಮೀಪವೇ ಕಿಷ್ಕಿಂದ ಬೆಟ್ಟವಿದ್ದು ಅಲ್ಲಿ ಸುಗ್ರೀವ, ಮತಂಗ, ಕಪಿಲ, ಅಗಸ್ತ್ಯ ಮೊದಲಾದವರ ಆಶ್ರಯ ತಾಣವಾಗಿತ್ತು. ಅಲ್ಲಿನ ತಪ್ಪಲು ಪ್ರದೇಶದಲ್ಲಿ ವೇದಾಂತಿ ವಿಭಾಂಡಕ ಮುನಿಯೂ ವಾಸವಾಗಿದ್ದ ಎಂಬುದನ್ನು ತಿಳಿಸಲಾಗಿದೆ. ಅಂದರೆ ಸವದತ್ತಿಯ ಸಿರಸಂಗಿಯು ಪುರಾಣ ಕಾಲದಲ್ಲಿ ಬರುವ ಕಿಷ್ಕಿಂಧೆಯಾಗಿತ್ತು ಎನ್ನುವ ವಿಚಾರ ಇಲ್ಲಿ ಪ್ರಸ್ತಾಪವಾಗಿದೆ. ಜೊತೆಗೆ ಹಲವಾರು ಪುರಾಣ ಪ್ರಸಿದ್ಧ ಮುನಿವರ್ಯರು ಇಲ್ಲಿ ವಾಸವಾಗಿದ್ದರು ಎಂಬುದೂ ತಿಳಿದುಬರುತ್ತದೆ. ಇದು ಒಂದು ರೀತಿಯಲ್ಲಿ ವಿಶೇಷವೆನಿಸಿಕೊಳ್ಳುತ್ತದೆ. ಜೊತೆಗೆ ಮುಂದಿನ ಭಾಗದಲ್ಲಿ ಕೂಡ ವಿಶೇಷವಾದ ಕತೆಯೊಂದು ಸಿರಸಂಗಿಗೆ ಸಂಬಂಧಿಸಿದಂತೆ ಬಿಚ್ಚಿಕೊಳ್ಳುತ್ತ ಸಾಗುತ್ತದೆ.

ಮಂಜುಘೋಷೆ ಎಂಬ ಅಪ್ಸರೆಯು ಸುಂದರವಾದ ರೂಪವತಿಯಾಗಿದ್ದು, ತನ್ನ ಸೌಂದರ್ಯದ ಬಗ್ಗೆ ಆಕೆಗೆ ಮೋಹವಿತ್ತು. ಹೀಗಿರುವಾಗ ಆಕೆ ಶೃಂಗಿ ಎಂಬ ಬ್ರಹ್ಮರ್ಷಿಯನ್ನು ಸೋಂಕಿ ಹೋಗುತ್ತಾಳೆ. ಆಗ ಆ ಮುನಿ ಆಕೆಗೆ ಶಾಪ ನೀಡುತ್ತಾನೆ. ವಿಶಾಪ ಬೇಡಿದಾಗ ವಿಭಾಂಡಕ ಮುನಿಯ ವೀರ್ಯದಿಂದ ವಿಶಾಪವಾಗುವುದು ಎಂದು ತಿಳಿಸುತ್ತಾನೆ.

'ಸ್ನಾನಾರ್ತ್ಥದಿಂ ವಿಭಾಂಡಕ
ನಾ ನಗದೊಳದೊಂದು ತೀರ್ತ್ಥಕೆಳ್ತ[ಂ]ದಿರದಂ
ತಾ ನಳಿನಿಯೊಳಿರ್ದ್ದ ತನುನಿ
ಧಾನಮ[ನು]ರ್ಬ್ಬಶಿಯನಾ ಮುನೀಂದ್ರಂ ಕಂಡಂ
ಕಾಣಲೊಡೆ
ಅಸ್ಖಳಿತ ಚಿತ್ತನಾ ಚೇ
ತಸ್ಖಳನೆ[ಯೆ]ನವಶವೆನಿಸಿ ಪೊಱಪೊಣ್ಮುವರೇ
ತಸ್ಖಳನೆಗೆ ನಾಣ್ಚು[ತ]ತಿ
ದುಃಖಾಂನ್ವಿತನಬ್ಜದಳದೊಳಂತದನಾಂತಂ
ಮರೆವಿಡಿದಾಘ್ರಾಯಿಸೆ ಮುನಿ
ವರ ವೀರ್ಯ್ಯವಮೋಘವೀರ್ಯವಪ್ಪುದಜೆಂದಾ
ಮರೆವಣ್ಣ ಗರ್ಭದಿಂದವ
ತರಿಸಿದನೊರ್ವ್ವಂ ಕುಮಾರಕಂ ಶೃಂಗಯುತಂ'[೩೫]

ಅಂದರೆ ವಿಭಾಂಡಕ ಮುನಿಯು ಸ್ನಾನ ಮಾಡಲು ಹೋದಾಗ ಸರೋವರದಲ್ಲಿದ್ದ ಸೌಂದರ್ಯವತಿ ಮಂಜುಘೋಷೆಯನ್ನು ಕಂಡು ಮೋಹಿತನಾಗುತ್ತಾನೆ. ಆತನ ಮನಸ್ಸು ಕಾಮಪೂರಿತವಾಗಿ ವೀರ್ಯ ಸ್ಖಲನವಾಗುತ್ತದೆ. ಮಂಜುಘೋಷೆ ಆ ವೀರ್ಯವನ್ನು ಆಘ್ರಾಯಿಸುತ್ತಾಳೆ.

ಆಗ ಆಕೆ ಗರ್ಭವತಿಯಾಗಿ ಗಂಡುಮಗುವಿಗೆ ಜನನ ನೀಡುತ್ತಾಳೆ. ಆ ಗಂಡುಮಗುವಿಗೆ ತಲೆಯಲ್ಲಿ ಕೊಂಬುಗಳಿದ್ದವು.

ಮುಂದಿನ ಕತೆಯಲ್ಲಿ ಮಂಜುಘೋಷೆ ಶಾಪವಿಮುಕ್ತಳಾಗಿ ಮಗುವನ್ನು ಅಲ್ಲೇ ಬಿಟ್ಟು ಹೊರಟು ಹೋಗುತ್ತಾಳೆ. ವಿಭಾಂಡಕ ಮುನಿಯು ತ್ರಿಕಾಲದರ್ಶಿಯಾಗಿದ್ದರಿಂದ ಆ ಮಗುವಿನ ಮಹಿಮೆಯನ್ನು ಅರಿತು ಸಾಕುತ್ತಾನೆ. ತಲೆಯಲ್ಲಿ ಕೊಂಬು (ಶೃಂಗ) ಇರುವುದರಿಂದ ಆ ಮಗುವಿಗೆ ರಿಶ್ಯಶೃಂಗ ಎಂದು ಹೆಸರಿಡುತ್ತಾನೆ. ಅಶ್ವಿನಿ ದೇವತೆಗಳಿಂದ ವರಗಳನ್ನು ಕೊಡಿಸುತ್ತಾನೆ. ರಿಶ್ಯಶೃಂಗ ಬೆಳೆದು ದೊಡ್ಡವನಾದ ಮೇಲೆ ಮುನಿಯಾಗಿ ಪ್ರಖ್ಯಾತಿಯನ್ನು ಗಳಿಸುತ್ತಾನೆ. ಅದನ್ನು ಕೇಳಿದ ದಶರಥ ಮಹಾರಾಜನು ಆತನನ್ನು ಕರೆತಂದು ಪುತ್ರಕಾಮೇಷ್ಠಿ ಯಾಗವನ್ನು ಮಾಡಿಸುತ್ತಾನೆ. ಆಗ ರಾಮ, ಲಕ್ಷ್ಮಣ, ಭರತ, ಶತೃಘ್ನರು ಹುಟ್ಟುತ್ತಾರೆ. ರಾವಣನನ್ನು ಕೊಂದು ಲಂಕೆಯಿಂದ ಮರಳುವಾಗ ರಾಮ–ಲಕ್ಷ್ಮಣರು ಈ ರಿಶ್ಯಶೃಂಗ ಮುನಿಯ ಆಶ್ರಮಕ್ಕೆ ಬಂದು ಅಲ್ಲಿ ರಾಮೇಶ್ವರ, ಲಕ್ಷ್ಮಣೇಶ್ವರ, ಹನುಮಂತೇಶ್ವರಗಳನ್ನು ಪ್ರತಿಷ್ಠಾಪಿಸುತ್ತಾರೆ. ಈ ಮುನಿಯ ಕಾರಣದಿಂದಲೇ ಆ ಪ್ರದೇಶಕ್ಕೆ ರಿಶ್ಯಶೃಂಗಿ ಎಂಬ ಹೆಸರು ಬಂತು. ಆನಂತರ ರಿಶಿಪಳ್ಳಿ ಆಯಿತು ಎಂದು ಶಾಸನದಲ್ಲಿ ಹೇಳಲಾಗಿದೆ.

ಇಲ್ಲಿ ಬಹುದೀರ್ಘವಾದ ಕತೆ ಇದ್ದು ಸಿರಸಂಗಿ ಊರಿನ ಐತಿಹ್ಯವನ್ನು ಸೂಕ್ತವಾಗಿ ಚಿತ್ರಿಸಲಾಗಿದೆ. ಇಲ್ಲಿ ಪುರಾಣ ಕಲ್ಪನೆ ಕಾವ್ಯಾತ್ಮಕವಾಗಿ ಮೂಡಿ ಬಂದಿದ್ದು ಗಮನೀಯ. ಮುಂದೆ ಈ ರಿಶ್ಯಶೃಂಗವೇ ಅಪಭ್ರಂಶಗೊಂಡು ಆಡುಮಾತಿನ ಓಘದಲ್ಲಿ ಸಿರಸಂಗಿ ಆಗಿದೆ. ಪೌರಾಣಿಕ ಕಥಾನಕದ ಮೂಲಕ ಇಲ್ಲಿ ರೂಪಿತವಾದ ಶಾಸನವು ಉತ್ತರ ಕರ್ನಾಟಕದಲ್ಲಿ ವಿಶಿಷ್ಟವೆನಿಸಿದೆ.

**ಮುನಿರಾಬಾದ್ ರಸ್ತೆಯಲ್ಲಿರುವ ಶಾಸನ**

'... ... ... ತ್ರಿಪೂರಾರಿದವ್ವೆಯ
ಗ್ಗಾಳ ಕುಮಾರ ಆನಂದ ಸಿದ್ಧದೇವನ ಭಕ್ತಿಗೆ ಯಿಷ್ಟ
ಲಿಂಗ ಬಂದು ಪೂಜೆಗೊಂಬ ಸಿಮ[ವ]ನುಂ ಸುದ್ಧಾ
ತ್ಮ ಮಂತ್ರ ಪುಷ್ಪದಿಸದೆಂ ಪೂಜಿಪ ಪ್ರಸಂನ ಸಿದ್ಧ
ನ ಅತಿಸಯದಿಂದಂ //'[೨೬]

ಆನೆಗೊಂದಿ–ಮುನಿರಾಬಾದು ರಸ್ತೆಯಲ್ಲಿ ಒಂಟಿಬಾಗಿಲಿನ ಬಳಿಯ ಕಣಿವೆಯಲ್ಲಿನ ದೊಡ್ಡ ಗುಂಡಿನ ಮೇಲೆ ಬರೆದಿರುವ ಈ ಶಾಸನವು ತ್ರಿಪುರಾರಿದವ್ವೆಯ ಮಗ ಸಿದ್ಧದೇವನ ಭಕ್ತಿಗೆ ಮೆಚ್ಚಿ ಸ್ವತಃ ಶಿವನೇ ಇಷ್ಟಲಿಂಗ ರೂಪದಲ್ಲಿ ಕಾಣಿಸಿಕೊಂಡು ಪೂಜೆಗೊಂಡ ಎಂಬ ವಿಚಾರವಿದೆ. ಪೌರಾಣಿಕವಾದ ಕಥಾಭಿತ್ತಿಯೊಂದನ್ನು ಈ ಶಾಸನದಲ್ಲಿ ಕಾಣಿಸಿಕೊಂಡಿದೆ. ಭೂಲೋಕದ ಒಬ್ಬ ವ್ಯಕ್ತಿಯು ತನ್ನ ಭಕ್ತಿಯಿಂದ ದೇವರನ್ನು ಒಲಿಸಿಕೊಳ್ಳುವ ಕತೆಗಳು ಭಾರತದಲ್ಲಿ ಹಿಂದಿಯಾಗಿ

ದೊರೆಯುತ್ತವೆ. ಅವುಗಳ ಮಾದರಿಯಲ್ಲಿಯೇ ಇಲ್ಲಿಯ ಕತೆ ಬಂದಿದ್ದು, ಸಿದ್ಧದೇವ ಭಕ್ತಿಯ ಸ್ವರೂಪವನ್ನು ಇಲ್ಲಿ ದಾಖಲಿಸಲಾಗಿದೆ. ಇಷ್ಟಲಿಂಗವಾಗಿ ಸ್ವತಃ ಶಿವನೇ ಆತನ ಭಕ್ತಿಗೆ ಮೆಚ್ಚಿ ಬಂದ ಎಂಬುದು ತುಂಬ ಮಹತ್ವದ್ದು. ಇದೊಂದು ರೀತಿಯಲ್ಲಿ ಐತಿಹ್ಯ ಕೂಡ ಆಗುತ್ತದೆ.

ಮಾನ್ವಿ ತಾಲೂಕಿನ ಬಲ್ಲಟಗಿ ಗ್ರಾಮದ ಶರಣಪ್ಪನ ಎಂಬುವವರ ಹೊಲದಲ್ಲಿ ಇರುವ ಕಲ್ಲಿನ ಮೇಲಿನ ಶಾಸನದಲ್ಲಿ ಚಾಲುಕ್ಯ ಮೊದಲನೇ ತ್ರೈಲೋಕ್ಯಮಲ್ಲ ಸೋಮೇಶ್ವರನ ರಾಣಿ ಚಾಮಲದೇವಿ ದಾನ ಮಾಡಿರುವುದನ್ನು ಉಲ್ಲೇಖಿಸಿ, ಆಕೆಯನ್ನು ಹಲವು ವಿಶೇಷಣಗಳಿಂದ ಕರೆಯಲಾಗಿದೆ.

'... ಸಹಸ್ರಫಳ ಭೋಗಭಾಮಿನಿ ಕಳಹಂಸಗಾಮಿ
ನಿ ಗೋತ್ರಪವಿತ್ರೆ ವಿಮಳಚರಿತ್ರೆ ಪಾತ್ರ ಚೂಡಾಮಣಿ ಸು
ಜನ ರಕ್ಷಾಮಣಿ ಚಿತ್ತವಿದ್ಯಾಧರಿ ಸಕಳ ಕಳಾಧರಿ ಮಲೆ
[ಯ] ಬೆಡಂಗಿ ಬ್ರಮ್ಮನಣುಗಿ ಯಾಶ್ರಿತ ಜನ ಕಾಮಧೇನು
[ಕ]ಲಿಯುಗ ಸೀತೆ ಪರಹಿತ ಗಿರಿಜಾತೆ ಶ್ರೀಮತ್ತ್ರೈ
ಳೋಕ್ಯ ಮಲ್ಲದೇವ ವಿಶಾಳವಕ್ಷಸ್ಥಳ ನಿವಾಸಿನಿಯರಪ್ಪ
ಶ್ರೀಮಚ್ಚಾಮಲದೇವಿ...'[೩೭]

ಎಂಬ ಉಲ್ಲೇಖ ಬಂದಿದ್ದು ಸೋಮೇಶ್ವರನ ಮಡದಿ ಚಾಮಲದೇವಿಯ ಗುಣಗಾನ ಮಾಡಲಾಗಿದೆ. ಇದೂ ಒಂದು ರೀತಿಯಲ್ಲಿ ವರ್ಣನೆಯಾದರೂ ಇದರಲ್ಲಿ ಅತಿಶಯೋಕ್ತಿ ಇದ್ದಿರಲಾರದು ಎನ್ನುವಂತಿಲ್ಲ. 'ಕಲಿಯುಗ ಸೀತೆ' ಮತ್ತು 'ಬ್ರಮ್ಮನಣುಗಿ' ಎಂಬ ಪದಗಳು ವಿಶೇಷವಾಗಿವೆ. ಹಾಗೆಯೇ 'ಯಾಶ್ರಿತ ಜನ ಕಾಮಧೇನು' ಎಂಬಲ್ಲಿಯೂ ವಿಶೇಷ ಅರ್ಥವಿದೆ. ಅಂದರೆ ಚಾಮಲದೇವಿ ಸೀತೆಯಂತೆ ಪವಿತ್ರಳೂ ಸರಸ್ವತಿಯಂತೆ ಬುದ್ಧಿವಂತೆಯೂ ಹಾಗೂ ಕಾಮಧೇನುವಿನಂತೆ ಬೇಡಿದ್ದನ್ನು ನೀಡುವ ಕೊಡುಗೈದಾನಿಯೂ ಆಗಿದ್ದಳು ಎಂಬುದನ್ನು ಈ ಶಾಸನ ತಿಳಿಸುತ್ತದೆ. ಇಲ್ಲಿ ಪೌರಾಣಿಕ ವ್ಯಕ್ತಿಗಳಿಗೆ ಇತಿಹಾಸದ ವ್ಯಕ್ತಿಯಾದ ಚಾಮಲದೇವಿಯಮ್ಮ ಸಮೀಕರಿಸುವುದು ಕಂಡುಬರುತ್ತದೆ.

ಮಾನ್ವಿ ತಾಲೂಕಿನ ಕವುತಾಳ ಗ್ರಾಮದ ತ್ರೈಯಂಬಕೇಶ್ವರ ದೇವಾಲಯದ ಒಳಗೆ ಇಟ್ಟಿರುವ ಕಲ್ಲಿನ ಮೇಲೆ ಇರುವ ಶಾಸನವು ಪುರಾಣಗಳ ಹಿನ್ನೆಲೆಯಲ್ಲಿ ವಿಶಿಷ್ಟವಾಗಿದೆ. ಅಲ್ಲಿ ಬರುವ

'ಶ್ರೀ ಗಿರಜಾಲಿಂಗನ ಸಂಭೋಗ ಸುಖಾಂತನಗೊಡಚ್ಛೋಲಾನತ ತತಿಗಂ ಆಗದೆಸೆವನಿಂಬಾಗಿ
ಹಡೆಗು ಸು
ಳ ಸಂಪದವನು ॥ ಚತುರಂಭೋರಾಶಿವೇಳಾವಳಯಿತಂ ವಸುಧಾಭಾರ ಪೂರಾ ತರಂಗ
ಪ್ರಭಳ ವಿನಮಿತಾ ।

ಚಾರ ದೌರೇಯದೋರ್ಮ್ಮಂಡಿತ ಚಂಡೋಗ್ರಾಶಿ ಕಾಳೋರಗ ವದನ ನಿಶಿಪಿತಾಹಿತ ಪ್ರಾಣನತ್ಯೂರ್ಜ್ಜಿತ ತೇಜೋರಾಶಿ ರಾಜ ಪ್ರಬ

ಳ ಘನ ಘನಧ್ವಾನ ರೌದ್ರಂ ಸಮುದ್ರಾನು ॥ ಎಸೆವ ಸಮುದ್ರತಳ ಮಧ್ಯಮ ಭಾಗದೊಳಾಮಹಾವಳಂ ಪೆಸರ

ದು ಮೇರುವನ್ತದಱ ದಕ್ಷಿಣ ಭಾಗದೊಳೊಪ್ಪಿ ತೋರ್ಪ್ಪುದಾ ಭಾರತಖ್ಯಂ ಭಾರತಾಖ್ಯದೊಳೊಪ್ಪುವ ಜಂಬು ಜಂ ।

ಬುವಿಂದೊಳು ಪೆಸರ್ವ್ವೆತ್ತ ದೀಪದೊಳಗೊಪ್ಪೆ ದೊರ್ಯಣವಾಡಿ ಸಂತತಂ ॥ ಸೇವುಣ ವೊಂಶ ಶಿಖಾಮಣಿ ಭೂವಳಯ !

ವೆನಾಳ್ದ ತಂನ ತೋಲ್ವಲದಿದಂ ರಾವಣನಾಳವ ಪೊಲಾಳ್ದಂ ಕೇವಳಮೆ ಚಕ್ರವರ್ತ್ತಿ ಸಿಂಗಣ ದೇವನು ॥ ಅನ್ತಿನೆಪ ಸೇವುಣ ಚಕ್ರ

ವರ್ತ್ತಿಯ ಪ್ರತಾಪವೆನ್ತೆ(ಂ.ದಡೆ ॥ ಮಗದಂ ಮಾಳವನಂಜದಂ ಕದನದೊಳು ಬೆಂಗೊಟ್ಟನಾ ಗೂರ್ಜ್ಜರನು । ಗಜವಾಜಿ ಬ್ರಜವ ।

ಸ್ತಾಕಾಷವೆನಲಾ ಗೌಳೇಶ್ವರಂ ಕೊಟ್ಟನಾ ಚೋಳಂ ಕುರ್ಗ್ಗಿದನಂಣ್ನಲ ಕುಗಿದನಿ ಗಂಭೀರ ಚಕ್ರೇಶ್ವರಂಗೆಣೆಯಾರ್ಸ್ಸಿ

ಂಗಣದೇವನಿಂ ಕದನದೊಳು । ವಿದ್ವಿಷ್ಟಭೂ ॥ ಪಾಳಕರು ॥ ಸ್ವಸ್ತಿ ಸಮಸ್ತ ಭುವನಾಶ್ರಯಂ ಶ್ರೀ ಪ್ರಿಥ್ವೀವಲ್ಲಭಂ ಮ ।

ಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕಂ ಚೋಳಕುಳಾನ್ತಕಂ ಅರಿರಾಯ ಗೋಮೂಲ ಘರಟ್ಟಂ ಮಾಳವ ದೀಶಾಪಟ್ಟ ಯಾ

ದವ ನಾರಾಯಣ ಸೇವುಣ ಪ್ರತಾಪಚಕ್ರವರ್ತ್ತಿ ಸಿಂಗಣದೇವ ವಿಜಯರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವರ್ದ್ಧಮಾನಮಾ ಚಂ

ದ್ರಾರ್ಕ್ಯ ತಾರಂಬರಂ ಸಲುತ್ತಮಿರೆ ದೇವಗಿರಿಯ ನೆಲೆವೀಡಿನೊಳು ಸುಖಸಂಕಥಾ ವಿನೋದದಿಂ ರಾಜ್ಯಂಗೆಯುತ್ತಮಿರೆ ॥ ಅನ್ತಿನೆಪ ಕುಂತ ।

ಳೊರ್ಬ್ಬಿಪಾನ್ತರದೊಳು ಕನ್ತುರಾಜ ನೆಲಸಿದ ನೆಲದೆಂಬನ್ತಿರೆಸೆದು ತೋರ್ಪ್ಪುದು ಸಂತತ ಲಕ್ಷ್ಮೀನಿವಾಸ ಸಿರಿ ರವಾಸಂ ॥ ರವಿ ಪರಿತಂದು ಶಂಕರ

ಪದದ್ವಯವಂ ಪಡೆದಜ್ಜಷಂಡದಿಂ ವರ ಜನಪಥನಾಕ್ಷತಯಿನರ್ಚಿಪ ತಾಣದೊಳಾಗಳಾಗಳಾ ಧರನಪ್ಪ ವಾಸುಗಿವರಾಳಿಯೊ

ಳಾಣತಿ ಮಾಡೆಗೆಯದಿಂದೆನ್ನದ ವಾಜಿ ಸಂಭವ ನೃಪೋತ್ತಮನಂದಹಿಹೆ ವಂಶಜನು ॥ ತೊಡರದೆ ಪೋಗಿ ಪೋಗಿ ವೈರಿಗಳ ಸಂಹತಿದೂ

ರದಿ...ಲ್ಲ ದೇವನೊಳು ತೊಡರ್ದಡೆ ಗಂಟಲಂ ಮೋಜೆಯನೆ ಪಿಡಿದೊತ್ತನೆ ಕುತ್ತಿನೆತ್ತರಂ ಕುಡಿಯನೆ ಬೆಂನಹಟ್ಟಿಗಳನೆತ್ತನೆಂಬಳ್ಳದಗಿಂಡೆಯಾಡನೆ ದಡಿಗಪಿಶಾ

...ಟಿರುಣ ಲೆಕ್ಕನೆ ಮಿಕ್ಕುದನಾಜಿ ರಂಗದೊಳು ॥ ಸ್ವಸ್ತ್ಯನೇಕ ಭಂಗುರ ತರಂಗ ಸಂಘಾತ ವಿಚೇನಿಚಯ ಲವಣಾಬ್ಧಿವೇಳಯ ವಳಯ ವಳಯಿೀತ ವೇಳಾವನ ಗಂ

ಗಾತೀರ ಪಾರಿಯಾತ್ರಂ ತನುಮಧ್ಯದೇಶಾದೀಶ್ವರಂ ಮಾಹೀಶ್ಮತಿ ಪುರವರಾಧೀಶ್ವರಂ ಸಹಸ್ರ ಬಾಹುಪ್ರತಾಪ ಭೂಪ ದೀಳಿಪನಹಿಹೆಯ ವಂಶೋದ್ಧವಂ ವಿವೇ

ಕ ಕಮಳೋದ್ಭವಂ ಅತ್ಯುಗ್ರನರಶಿರೋದರ್ಪ್ಪಣ ಧ್ವಜವಿರಾಜಮಾನ ದಾನಕಾನೀನ ಮಾಲಕಜೆ ಘೋಷಣಂ ನೃಪರತ್ನಭೂಷಣಂ ಸಮರಪ್ರಚಂಡ ಮೂ

ಱು ಲೋಕ ಗಂಡನೈಯಣಾದಿತ್ಯನರಸಾಂಕ ಶಂಕರಂ ಸಮರ ಭಯಂಕರಂ ನರಲೋಕ ಜಗದಳಂ ಕದನದಲಸದಳಂ ನಾಲ್ಕು ಭಾಸೆ

ಯ ಜಗಬಿರುದ ಮಂಡಳಿಕ ಗಂಡ ನುಡಿದನ್ತೆ ಗಂಡ ಸತ್ಯ ರಾಧೇಯ ಶೌಚ ಗಾಂಗೇಯನುಂ ಗೋತ್ರಪವಿತ್ರಂ ಪರಾಂಗನಾಪುತ್ರಂ ಕಟಕ ತೊ

ಟಿಕಾಱಂ ಮಂನ್ನೆಯ ಬೇಂಟೆಕಾಱಂ ಮೊರಟದ ಶ್ರೀ ಮಲ್ಲಿಕಾರ್ಜುನದೇವರ ಶ್ರೀ ಪಾದರಾದಕನುಮಪ್ಪ ಮಹಾಮಂಡಳೇಶ್ವರಂ ಇಂಮ್ಮಡಿ ಮಲ್ಲಿದೇವರ

ಸರು ಐವಣ ಸಿರಿವುರದೊಳು ಸುಖಸಂಕಥಾ ವಿನೋದದಿಂ ರಾಜ್ಯಂಗೆಯುತ್ತಮಿರೆ ॥ ತತ್ಪಾದ ಪದ್ಮೋಪಜೀವಿಯೆನಿಸಿದ ಬೇಚಿಸೆಟ್ಟಿಯರನ್ವ

ಯಾವತಾರವೆಂತೆಂದಡೆ ॥ ನಿಜ ಜನಕೆ ಶಂಕರ ಸದನಮನುವಯದೆ ಮಾಳ್ಪ ಪುತ್ರಾದಿಗಳ ಪಡೆದು ಮೃಡಪದವಿವಡೆದನು ಕೃತಕ್ರಿತ್ಯ

ನೋ ಧಾತ್ರಿಯೊಳಗೆ ಶಂಕರಸೆಟಿ ॥ ಬಳದೀ ಬೆಳರ್ತ್ತ ಶಾಳೀ ಕಡುವೆಯ ಮನು ಪಂಕಯ ಒಲಂಕಗಳು ಪರಿವೃತ ದೇವತಾಭವನವೊಪ್ಪುವ ಚೂತವನ ಪ್ರ

ವಿಥಿವೆತ್ತಿತಿಪೆಗಿಲು ಬಗ್ಗಿಸುವ ಕೋಗಿಲೆ ಕೋಗಿಲೆಯಿಕ್ಕೆದಾಣದೊಳು ಮೊರೆವಳಿ ವಿಂಡಿಪಿಂಡನೊಳ ಗೋದಿರಲಿ ಶಕವಾಸ ಕನ್ತುವಾಸೆದಸಲೆನಲು ಚೆಲ್ವೆಸೆದು ತೋ

ಱುವುದು ಕುಂತಳದರ್ಪ್ಪಣಂ ॥ ಸ್ವಸ್ತಿ ಸಮಸ್ತವಸ್ತು ವಿಸ್ತೀರ್ಣ್ನ ಘೂರ್ನ್ನಿತಾರ್ನ್ನವ ಪ್ರಣೂತಾ ನೂತರ್ಭುವನ ವಿಖ್ಯಾತ ಪಂಚಶತ ವೀರಶಾಸನ ಲಬ್ಧಾನೇಕ ಗುಣಗಣಾ

ಳಂಕೃತ ಸತ್ಯಶೌಚಾಚಾರ ಚಾರು ಚರಿತ ನಯವಿನಯ ವಿಜ್ಞಾನ ವೀರಬಣಂಜು ಸಮಯ ಧರ್ಮ್ಮಪ್ರತಿಪಾಳನ ವಿಶುದ್ಧಗರುಡಧ್ವಜ ವಿರಾಜಮಾನನೂನ ಸಾ

ಹಸೋತ್ತುಂಗ ನಿಜಭುಜ ವಿಜಯ ವೀರಲಕ್ಷ್ಮೀ ವಿಶಾಲ ವಕ್ಷಸ್ಥಳ ಸಮಾಲಿಂಗಿತರುಂ ತ್ರಿಭುವನ ಪರಾಕ್ರಮೋನ್ನತರುಂ ಬಲದೇವ ವಾಸುದೇವ ಖಂಡಳಿಮೂಳಭದ್ರ ವಂ

ಸೋದ್ಭವರುಂ ಅಹಿಚ್ಛತ್ರಪುರ ವಿನಿರ್ಗತರುಂ ನಾರಾಯಣದತ್ತ ಚಕ್ರಲಾಂಛನ ಕೀರ್ತ್ತಿಕೇತನ ಪಲ್ಲವ ಧ್ವಜಪತಾಕರುಂ ಚಾಳುಕ್ಯಾನ್ವಯರುಂ

ಮೊರಟ ಮುಂನೂಱಱ ಸೆಟ್ಟಿಗುತ್ತ ಬೇಚಿಸೆಟ್ಟಿಯರುಂ ರೇಚಿಸೆಟ್ಟಿಯರುಮಿರ್ದ ತಂಮಯನ ಹೆಸರೊಳು ಲಿಂಗಪ್ರತಿಷ್ಠೆಯಂ ಮಾಡಿದಾ ಸ್ಥಳಕ್ಕೆ ಮಾಳ್ಪ

ವ್ರಿತ್ತಿ ಸಂಕಲ್ಪವೆಂತೆಂದಡೆ ॥ ಬೆಳವರ್ಪ್ಪುಣ್ಯಫಲಂಗಳಂ ಗಿರಿಸುತಾಧೀಶಾಂಘ್ರಿ ಸಂಪೂಜೆಯಂ ಬೆಳವರ್ಕ್ಕಿರ್ತ್ತಿಯನಂನದಾನದೊದವಿಂ ಸೌವ

ರ್ಣ್ನ ದಾನಂಗಳಿಂದ ಕವತಾಳ ಸ್ಥಿತರುಂನ್ನತರ್ನ್ನಗವರುಂ ಬೇಚಯ ರೇಚೆಯನುಂ ಬೆಳಗೆಂದೀ ಶಿರ ಶಂಕರಂಗೆಯಂ ಮಹಿಮೆಯಂ ಕೊಟ್ಟರ್ಮ್ಮಪಾಜ್ಞೆಯೊಳು ॥ ಅವರ ಕುಲಗುರುಗಳಪ್ಪ

ಸಂಕರಾಸಿ ಪಂಡಿತರ ತಪಪ್ರಭಾವೆಂತೆಂದಡೆ ॥ ಎಳೆವಱಿಯ ಚಂದ್ರಕಾನ್ತದ ತಿಳಿಗೋಳ ನಿಂಗಡಲ ನಂದನಂಗಳ ಮಳಯಾನಿಳದ ಮಳಯಜದ ತಂಪಂ ತಳೆದಿ

ರ್ದ್ದುದುವಾವುರಾಶಿಯ ಮಳಯ ಗುಣಂಗಳು ॥ ಆಲದ ಬಿಳಲಂನ್ತೆ ಜೆಡೆಬತ್ತದೆ ಸಾಲುವುದೆ ಹೇಳಿರಂಣ್ಣ ಪೆಂಪಾಲಯವಾಗಿ ಸಚ್ಚರಿತವಾಗಿ ದಯಾಗ್ರಣಿಯಾಗಿ ಧರ್ಮ್ಮವಂ

ಪಾಳಿಪನಾಗಿ ಸುಬ್ರತಿಯವಾಗಲೇವೇಳುಮೆನುತ ಸಜ್ಜನರ್ಲ್ಲೀಲೆಯನೊಲಿದು ಬಂಣ್ಣಿಪರ್ ಶಂಕರ ಪಂಡಿತರಂ ನಿರಂತರಂ ॥ ಶ್ರೀ ವಿಕ್ರಮೇಶ್ವರದೇವರ ಸ್ಥಾನಾಚಾ

ರ್ಯ್ಯರಪ್ಪ ಶ್ರೀಮದ್ರಾಜಗುರು ಯೋಗೀಶ್ವರದೇವರ ಸಕಲ ಗುಣವಿಶೇಷೋನ್ನತರಪ್ಪ ಬೇಚಿಸೆಟಿ ರೇಚಿಸೆಟ್ಟಿಯರ್ಗೆ ಧರ್ಮ್ಮೋಪದೇಶಂ ಮಾಡಲು ॥ ಸ್ವಸ್ತಿ ಯಮ ನಿಯಮ ಸ್ವಾ'[೨೧]

ಎಂಬ ಉಲ್ಲೇಖದಲ್ಲಿ ರಾವಣನ ಆಳ್ವಿಕೆಯ ಪ್ರದೇಶದ ಉಲ್ಲೇಖ ಬಂದಿದೆ. ಸಿಂಗಣ ದೇವನು ರಾವಣ ಆಳ್ವಿಕೆ ಮಾಡಿದಂತೆ ಮಾಡುತ್ತಿದ್ದ ಎಂಬುದು ಇಲ್ಲಿ ಬಂದಿರುವ ವಿಚಾರ. ರಾವಣ ಶಿವಭಕ್ತನಾಗಿದ್ದರಿಂದ ಸಿಂಗಣದೇವ ಕೂಡ ಶಿವನಾರಾಧಕನಾಗಿರಬೇಕು. ಹಾಗೆಯೇ ರಾವಣನ ಭಕ್ತಿ ಮಾತ್ರವಲ್ಲ ಆತನ ರಾಜ್ಯದ ಸಮೃದ್ಧ ಸಿರಿ ಸಂಪತ್ತು, ಅಪಾರ ಶೌರ್ಯ, ಸ್ವಾಭಿಮಾನ ಸಿಂಗಣದೇವನಲ್ಲಿ ಇದ್ದವು ಎಂಬುದನ್ನು ಇದು ಸೂಚಿಸುತ್ತದೆ. ಕರ್ನಾಟದಲ್ಲಿ ರಾವಣನ ಗುಣಗಳನ್ನು ರಾಜನೊಬ್ಬ ತನಗೆ ಹೋಲಿಸಿಕೊಂಡು ಹಾಕಿಸಿದ ಶಾಸನ ಬಹುಶಃ ಇದೊಂದೇ ಅನ್ನಿಸುತ್ತದೆ.

ಸಿಂಧನೂರು ತಾಲೂಕಿನ ಮುಕ್ಕುಂದಿ ಗ್ರಾಮದ ಮುರಹರಿ ದೇವಾಲಯದ ನವರಂಗದ ಗೋಡೆಗೆ ಹಾಕಿರುವ ಶಾಸನದಲ್ಲಿ ಪೆರ್ಗಡೆ ಬೆನಿವಣ ಎಂಬಾತನ ಪತ್ನಿ ಚಂಡಿಯಕ್ಕನನ್ನು ಸೀತೆ, ಪಾರ್ವತಿ, ಸರಸ್ವತಿ ಮತ್ತು ರತಿಗೆ ಹೋಲಿಸಿ 'ಚಣ್ಡಿಯಕ್ಕನೆನೆ ಪೆಸರಿಂದ ಸೀತೆಗೆ ನೆಗಳಿರ್ದ್ದ ಗಿರಿಜಾತೆಗೆ ವಾಕ್ಸತಿಗೆ ರತಿಗೆ ದಂಸಟಿಯ...'[೨೭] ಎಂದು ವರ್ಣಿಸಲಾಗಿದೆ.

ಕಲ್ಯಾಣದ ಭೂಲೋಕಮಲ್ಲನ ಆಳ್ವಿಕೆಯಲ್ಲಿ ಸಿಂಧಕುಲದ ಬಾಚರಸ ಮಾಂಡಲೀಕನಾಗಿದ್ದು ಬೆನಿಬಣ ಆತನ ಪೆರ್ಗಡೆಯಾಗಿ ಕಾರ್ಯ ನಿರ್ವಹಿಸುತ್ತಿದ್ದ.

ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀಪೃಥ್ವೀವ
ಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪ
ರಮ ಭಟ್ಟಾರಕಂ ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾ
ಭರಣಂ ಶ್ರೀಮತ್ಪೈಲೋಕ್ಯಮಲ್ಲದೇವರ ವಿಜಯರಾ
ಜ್ಯ ಮುತ್ತರೋತ್ತರಾಭಿವೃದ್ಧಿ ಪ್ರವರ್ದ್ಧಮಾನಮಾ
ಚಂದ್ರರ್ಕ್ಕತಾರಂ ಸಲುತ್ತಮಿರೆ ಸ್ವಸ್ತನವರತ ಪರಮ
ಕಲ್ಯಾಣಾಭ್ಯುದಯ ಸಹಸ್ತಫಳ ಭೋಗ ಭಾಮಿನೀ
ದ್ವಿತೀಯ ಲಕ್ಷ್ಮೀಸಮಾನೆ ಶೀಮದಾಹನ ಮ
ಲ್ಲದೇವ ಚಿತ್ತಾಮಿತ್ರವಾರ್ಧ್ಧಿವರ್ದ್ಧಿನಪೂರ್ಣ್ಣೇನ್ದೂಪ
ಮಾನೆ ತ್ರೈಲೋಕ್ಯಮಲ್ಲದೇವ ವಿಶಾಲವೃಕ್ಷ
ಸ್ಥಳ ಕ್ರೀಡಾವಿಳಾಸ ಶ್ರೀಕಾಂನ್ತೆ ಚರಣಸರೋರು
ಹಾನನತಿಕ್ರಿತಿ ಸಕಳ ಸುದ್ದಾಂನ್ತೆ ಸರ್ವ್ವರ್ತ್ಥಸಾರ್ತ್ಥ ಚಿಂತಾ
ಮಣಿ ಸೌಭಾಗ್ಯಸಾರ ಸರ್ವಸ್ವ ಲಲನಾ ಚೂಡಾಮಣಿ ಪ್ರ
ತ್ಯಕ್ಷ ಪಾರ್ವ್ವತಿತ್ಯಖಿಳಂ ಸ್ವರ್ತ್ತಭಿದಾನ ಪೂಜಿತೆಯರು ಮ
ಗ್ರಮಹಿಷಿ ಪದವಿರಾಜಿತಯರುಮಪ್ಪ ಶ್ರೀಮತ್ರೈ
ಳೋಕ್ಯ ಮಹಾದೇವಿಯರು ಕಲ್ಯಾಣದ ನೆಲೆವೀ
ಡಿನೊಳು ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ ನಿ
ಟ್ಟರೆವೆಯಪ್ಪತ್ತಱ ಬಳಿಯಗ್ರಹಾರ ಮಕ್ಕುಂದೆಯಂ ತ್ರಿಭೋಗಾಭ್ಯನ್ತರ
ಸಿದ್ಧಿಯಿನಾಳುತ್ತುಂ ತೊಱ ತುಂಗಭದ್ರೆಯ ತಡಿಯ ಕಪಾಳೇ
ಶ್ವರ ದೇವರ್ಗ್ಗೆ ಸಕವರಿಷ ೯೮೮ನೆಯ ಪರಾಭವ ಸಂತ್ಸರದು
ತ್ತರಾಯಣ ಸಂಕ್ರಾಂತಿ ಪರ್ವ್ವನಿಮಿತ್ಯದಿಂ ಸೆಟ್ಟಿಕಬ್ಬೆಯ ಗಡಿಂಬದ
ಘಳೆಯಲೂರಿಂ ಪಡುವಣ ಪೊಲಮೇಲೆ ಕರುಸೆಗಟ್ಟಿನ ಕಗ್ಗಲ್ಲ ಗುಡ್ಡೆಯಿಂ
ಮ್ಣೂಡ ಕಾಂತನೂರ ಬಟ್ಟೆಯಿಂ ತೆಂಕ ಪಲ್ಲಣಗಲ್ಲಿಂ ಬಡಗಲಳೆದು ಬಿಟ್ಟ ಕರಿಯ
ನೆಲಂ ಮುತ್ತರ್ಪ್ಪನ್ನೆರು ಅಂಕದೊಳಂ ಮತ್ತ ೧೨ ದೇವರ ನಿವೇದ್ಯಕ್ಕೆ
ಬಿಟ್ಟ ಕಪಾಳೇಶ್ವರದ ಗುಯ್ಯಲೊಂದು ದೇವರ ಮುಂದಣ ಪೊಳೆ
ಯ ಬಟ್ಟೆಯೆರಡು ಕಲದ ತೋಂಟವೊನ್ದು ದೇವರ ನದ್ದಾದೀವಿಗೆಗೆ೪೦

ಎಂಬ ವಿಚಾರ ಅದೇ ಗ್ರಾಮದ ಪಾನಾಶೇಶ್ವರ ದೇವಾಲಯದ ಮುಂಭಾಗದಲ್ಲಿ ನೆಟ್ಟಿರುವ ಶಾಸನದಲ್ಲಿ ಕಂಡುಬರುತ್ತದೆ. ಇದು ಕೂಡ ಮುಕ್ಕಂದಿ ಶಾಸನದಂತೆಯೇ ಕಂಡುಬರುತ್ತದೆ.

ಕುರುಗೋಡಿನ ೧೧೭೩ರ ಶಾಸನದಲ್ಲಿ 'ದೇವರೊಂದುದಿವಸಂ ಪ್ರತ್ಯಕ್ಷದಿಂ ಬೆ(ಬ)ರ್ಪ್ಪುಧು(ದು)ಂ //ವ// ಆಗಳ್ ನಂದಿನಾಥ ನಂದಿ ಮಹಾಕಾಲಿ(ಳ) ವೀರಭದ್ರ ಪ್ರಮುಖಪ್ರಮಥಯೂಥ ಸಮೇತನುಂ ಹರಿವಿರಂಚಿ ಸುರಾಸುರೊರಗಾದಿ ಪ್ರಸಿದ್ಧಾ

ಮರ ಗಣ ಸೇವಿತನುಮೆನಿಸಿ ಪಾರ್ವ್ವತೀಪತಿ ಬಂದವತರಿಸಿ ನಿಂದಿರಲ್ ರಾಚಮಲ್ಲರಸಂ ಭೋಂಕನೆ ಕಂಡು ಪೊಡವಟ್ಟಾನಂದದಿಂ ಕರಕಮಳಮುಕುಳಿತನಾಗಿರಲ್ ಹರ[ಂ] ದರಹಸಿತವದನಾರವಿಂದಂ ಕೈಲಾಸಾವ

ಳೋಕನಾರ್ಥವಭಯ ಹಸ್ತಾವಳಂಬಕನಾಗೆ ಮಹಾಪ್ರಸಾದಮೆಂದು ಮಹಾವಿಭೂತಿಯಿಂ ಗಣಾಡಂಬರವಂ ಮಾಡಿ ಶಿವಾರ್ಚನೆಯನಾಡಿ //ವೃ// ಧರೆಗಿಂತತತ್ಯಂತಚೋದ್ಯಾವಹಮೆನೆ ಶಿವಲಿಂಗಾರ್ಚನಂ ಮಾಡಿ

ಪೃಥ್ವೀಭರ ರಾಜ್ಯಶ್ರೀಯುಮಂ ಸಂತತಿಗೆ ನಿಲಿಸಿದಂ ರಾಚಮಲ್ಲಂ ಶರೀರಂ ಬೆರೆಸುತ್ತುಂಗಾಶ್ವ ಚಂಚಚ್ಚಾಮರರುಹೆ(ಹ) ಶಿ(ಸಿ)ತ ಛತ್ರಚಿಹ್ನಾನ್ವಿತಂ ಶಂಕರನೊಳ್ ಸಾಲೋಕ್ಯಮಂ ಪೂರ್ದ್ದಿಯುಮವಂಗೆ ಸಾಯು

ಜ್ಯದಿಂ ಲಿಂಗವಾಡೆ//

ಈ ಶಾಸನದಲ್ಲಿ ಪ್ರಸ್ತಾಪವಾಗಿರುವ ಈ ವಿಷಯದ ಅರ್ಥವೆಂದರೆ ಸಿಂಧವಂಶದ ರಾಚಮಲ್ಲನಿಗೆ ಶಿವನು ಪಾರ್ವತಿಯೊಂದಿಗೆ ದರ್ಶನ ನೀಡಿ ಆತನನ್ನು ಕೈಲಾಸಕ್ಕೆ ಕರೆದುಕೊಂಡು ಹೋಗುತ್ತಾನೆ. ಆನಂತರ ಕುರುಗೋಡಿನ ಪಶ್ಚಿಮಕ್ಕೆ ಲಿಂಗರೂಪದಲ್ಲಿ ಉದ್ಭವಿಸಿ ರಾಚಮಲ್ಲೇಶ್ವರದೇವ ಎಂದು ಕರೆಯಿಸಿಕೊಂಡ ಎಂದು ಹೇಳಲಾಗಿದೆ. ಸಿಂಧವಂಶದ ರಾಚಮಲ್ಲ ಪರಮ ಶಿವಭಕ್ತನಾಗಿದ್ದು ವಾಸ್ತವಿಕ ವಿಚಾರವಾಗಿರಬಹುದಾದರೂ ಶಿವನು ಪಾರ್ವತಿಯೊಂದಿಗೆ ಬಂದು ಆತನನ್ನು ಕೈಲಾಸಕ್ಕೆ ಕರೆದುಕೊಂಡು ಹೋಗುವುದು ಮಾತ್ರ ಪುರಾಣೀಕರಣದ ವಿಷಯವೇ ಆಗಿದೆ. ಸಾಮಾನ್ಯವಾಗಿ ಮರಣ ಸಂಭವಿಸದಾಗ ಇಂತಹ ವರ್ಣನೆಗಳು, ಕತೆಗಳು ಕಂಡುಬರುತ್ತವೆ. 'ಕೈಲಾಸವಾಸಿ' ಎಂದರೆ ಮರಣ ಎನ್ನುವ ಅರ್ಥವೇ ಇರುವುದನ್ನು ಗಮನಿಸಬೇಕು.

ಹಡಗಲಿ ತಾಲೂಕಿನ ಕುರುವತ್ತಿ ಗ್ರಾಮದಲ್ಲಿ ಈಶ್ವರಲಿಂಗದ ಮೇಲಿನ ಶಾಸನದಲ್ಲಿ ಶಿವನ ಬಗ್ಗೆ ಪ್ರಸ್ತಾಪ ಬಂದಿದ್ದು ಇದು ಶಿವರಾತ್ರಿಯ ದಿನ ಬೇಡರ ಕಣ್ಣಪ್ಪ ಮಾಡಿದ ಸೇವೆಯನ್ನು ನೆನಪು ಮಾಡಿಕೊಂಡಂತಿದೆ. ಇರುವ ಎರಡೇ ಸಾಲಿನಲ್ಲಿ ಈ ಅರ್ಥ ಲಭಿಸುತ್ತದೆ.[೮೧]

ಹರಪನಹಳ್ಳಿ ತಾಲೂಕಿನ ಉಚ್ಚಂಗಿದುರ್ಗದ ತವಕೇಶ್ವರಸ್ವಾಮಿ ದೇವಾಲಯದ ಬಳಿ ನೆಟ್ಟ ಕಲ್ಲಿನ ಮೇಲಿರುವ ೧೦೬೪ ರ ಶಾಸನವು ಉಚ್ಚಂಗಿ ದುರ್ಗದ ಐತಿಹ್ಯವನ್ನು ಹೇಳುತ್ತದೆ. ಅದು ಹೀಗಿದೆ ;

'ಕದಂಬವಾಡಿನಾಡ ಮಧ್ಯದೊಳ್ಮೇರುವಿಪ್ಪಂತಿಟ್ಟುಚ್ಚಂಗಿಯ ಪರ್ವ್ವತಂ ಅದಕ್ಕೆ ನಾಲ್ಕುನಾಮೆವಂವದೆಂ

ತೆಂದೊಡೆ ಕೃತಯುಗದೊಳು ಮೇ[ಘನಾ]ದನೆಂಬ ರಾಕ್ಷಸನಿವಾಸಮಪ್ಪುದಱಿಂ ಮೇಘನಾ
ದವೆಂಬುದು ತ್ರೇತೆಯೊಳ್ ಹಿರಣ್ಯಕ ನಿವಾಸಮಾತನ ನಾರಾಯಣಂ ವಧೆಗೆಯ್ದುಂದಿನೊಸ
ಗೆಯೊಳ್ ಸ್ವರ್ಣ್ನವ್ರಿಷ್ಟಿ ಕಱೆದುದಱಿಂ ವೀರಕನಕಗಿರಿಯೆಂಬುದು ದ್ವಾಪಾರದೊಳುತ್ತಂಗಮ
ಹರಿಷಿ ಆಶ್ರಮಮಪ್ಪುಱಿದಂ ಉತ್ತುಂಗಪರ್ವ್ವತಮೆಂಬುದು ಕಲಿಯುಗದೊಳ್ ಉಚ್ಚಂಗಿಯ
ಬ್ಬೆಯೆಂಬಳು ಮೊದಲಾಗಿ ಮೂವರು ಬ್ರಾಹ್ಮಣಕನ್ನಿಕೆಯರು ತಪಂಗೆಯ್ದೀಶ್ವರ ವರ
ಪ್ರಸಾದದಿಂ ದೇವತ್ವಮಂ ಪಡೆದರ...[೪೨]

ಈ ವಿಷಯ ಹರಪ್ಪನಹಳ್ಳಿ ತಾಲೂಕಿನ ಉಚ್ಚಂಗಿ ದುರ್ಗದ ಹೊಲವೊಂದರಲ್ಲಿ ದೊರೆತ ಶಾಸನದಲ್ಲೂ ಪ್ರಸ್ತಾಪವಾಗಿದೆ.

ಉ'ಚ್ಚಂಗಿಯ ಪರ್ವ್ವತಕ್ಕೆ ನಾಲ್ಕು ನಾಮ ಕೃತ[ಯುಗದಲ್ಲಿ] ಮೇಘ[ನಾದನೆಂಬ] ರಾಕ್ಷಸನ ಮಾಂಸಮಿರ್ಪ್ಪುದಱಿಂ ಮೇಘನಾ

ದ[ಮೆಂತಿಪ್ಪು] ತ್ರೇತೆಯೊಳು ಹಿರಣ್ಯ[ನ] ನಿವಾಸಮಾಗಿ ... ... ... ಯೊಳು ಸುವರ್ಣ್ನ
ವ್ರಿಷ್ಟಿ... ... ದು [ಪ]ಡೆ[ದಂ] ಕನಕಗಿರಿಯೆಂಬ ... ಯುತ್ತುಂಗ ಮಹಾಗಿರಿಯಾಶ್ರಮಂ ಮತ್ತು[ಂ] ಕಾರಣದಿಂ ಚ

ತು... ... ... ... ಬಂದು ಕಲಿಯುಗದಂದುಚ್ಚಂಗಿಯಬ್ಬೆ ಯೆಂಬಳ್ಮೊದಲಾಗಿ ಮೂರ್ಧನ್ಯ ಬ್ರಾಹ್ಮಣಕನ್ಯಕಿ...'[೪೩]

ಆದರೆ ಇಲ್ಲಿಯ ಶಾಸನವು ಕೆಲವು ಕಡೆ ತ್ರುಟಿತವಾಗಿದೆ. ಈ ಎರಡೂ ಶಾಸನಗಳಲ್ಲಿ ಉಚ್ಚಂಗಿ ದುರ್ಗ ಪುರಾಣ ಕಾಲದಲ್ಲಿಯೂ ಇತ್ತು ಎಂಬ ವಿಷಯ ಪ್ರಸ್ತಾಪವಾಗಿದೆ. ಕೃತಾಯುಗದಲ್ಲಿ ಈ ದುರ್ಗವು ಮೇಘನಾದ ಎಂಬ ಅಸುರನ ವಾಸಸ್ಥಾನವಾಗಿದ್ದರಿಂದ ಅದು ಮೇಘನಾದ ಎಂಬ ಹೆಸರು ಬಂತು. ತ್ರೇತಾಯುಗದಲ್ಲಿ ಹಿರಣ್ಯಕ ಎಂಬ ಅಸುರನ ನೆಲೆ ಅದಾಗಿತ್ತು. ಆತನನ್ನು ನಾರಾಯಣ ವಧಿಸುತ್ತಾನೆ. ಆಗ ದೇವತೆಗಳೆಲ್ಲ ಕನಕವೃಷ್ಟಿಯನ್ನು ಸುರಿಸಿದರು. ಹಾಗಾಗಿ ಆ ಸ್ಥಳಕ್ಕೆ ವೀರಕನಕಗಿರಿ ಎಂಬ ಹೆಸರು ಬಂತು ಎಂದು ಹೇಳಲಾಗಿದೆ. ದ್ವಾಪರ ಯುಗದಲ್ಲಿ ಉತ್ತಂಗ ಮಹರಿಷಿ ಎಂಬ ಮುನಿಯ ಆಶ್ರಮವಾಗಿದ್ದರಿಂದ ಆ ಸ್ಥಳಕ್ಕೆ ಉತ್ತಂಗ ಪರ್ವತ ಎಂಬ ಹೆಸರು ಬಂದಿತೆಂದು ತಿಳಿಸಲಾಗಿದೆ. ಕಲಿಯುಗದಲ್ಲಿ ಉಚ್ಚಂಗಿಯಬ್ಬೆ ಎಂಬುವಳು ಮೊದಲಾಗಿ ಮೂವರು ಬ್ರಾಹ್ಮಣ ಕನ್ನಿಕೆಯರು ತಪಸ್ಸು ಮಾಡಿ ಈಶ್ವರನನ್ನು ಒಲಿಸಿಕೊಂಡು ದೈವತ್ವವನ್ನು ಪಡೆದ ಕಾರಣದಿಂದ ಉಚ್ಚಂಗಿ ದುರ್ಗ ಎಂಬ ಹೆಸರು ಬಂದಿದೆ ಎಂದೂ ಇಲ್ಲಿ ಹೇಳಲಾಗಿದೆ.

ಒಂದು ಸ್ಥಳ ಪುರಾಣವನ್ನು ಹೇಳುವಲ್ಲಿ ಬಳಸಿರುವ ಈ ಶಾಸನ ನಿಜಕ್ಕೂ ಅದ್ಭುತ ಸೃಷ್ಟಿಯಾಗಿದೆ. ನಾಲ್ಕು ಕಾಲಘಟ್ಟದಲ್ಲಿ ಭಿನ್ನ ಭಿನ್ನ ಕಾರಣಕ್ಕೆ ಉಚ್ಚಂಗಿ ದುರ್ಗ ಭಿನ್ನ ಭಿನ್ನ ಹೆಸರು ಗಳಿಸಿತ್ತು ಎಂಬುದನ್ನು ಪೌರಾಣಿಕ ನೆಲೆಯಲ್ಲಿ ಹೇಳಿರುವುದು ಮಹತ್ವ ಪಡೆದುಕೊಳ್ಳುತ್ತದೆ. ಅದಲ್ಲದೇ ಒಂದೇ ಶಾಸನದ ಪಾಠವು ಎರಡು ಕಡೆ (ಕೆಲವು ತಿದ್ದುಪಡಿಗಳೊಂದಿಗೆ) ಕಾಣಿಸಿಕೊಂಡಿರುವುದು ಕೂಡ ವಿಶೇಷವಾಗಿದೆ. ಉಚ್ಚಂಗಿ ದುರ್ಗದ ಪುರಾಣವನ್ನು ಹೀಗೆ ಇತಿಹಾಸಗೊಳಿಸುತ್ತಿರುವುದು ಸಹ ಶಾಸನದ ಮಹತ್ವವನ್ನು ಹೆಚ್ಚಿಸಿದೆ.

ಅಷ್ಟೇ ಅಲ್ಲದೆ ಹರಪನಹಳ್ಳಿ ತಾಲೂಕಿನ ಉಚ್ಚಂಗಿದುರ್ಗದ ತವಕೇಶ್ವರಸ್ವಾಮಿ ದೇವಾಲಯದ ಬಳಿ ನೆಟ್ಟ ಕಲ್ಲಿನ ಮೇಲಿರುವ ೧೦೬೪ ರ ಶಾಸನವು ಕಲಿದೇವಸ್ವಾಮಿಯ ಬಗ್ಗೆ ಐತಿಹ್ಯವೊಂದನ್ನು ಹೇಳುವಾಗಲೂ ಕೂಡ ಮಹಾಭಾರತದ ಉಲ್ಲೇಖವನ್ನು ಮಾಡಿರುವುದು ಕಂಡುಬರುತ್ತದೆ.

ಉ'ಚ್ಚಂಗಿಯಾ ಪರ್ವ್ವತಮೆಂಬುದು ಆ ಪ
ರ್ವ್ವತದ ಮೂಡಣದೆಸೆಯೊಳು ಹಿಡಿಂಬವನಮಾ ಬನದೊಳಗೆ ಸ್ವಯಂಭುಕಲಿದೇ
ವಸ್ವಾಮಿಯೆಂಬುದು ಆ ದೇವರ್ಗ್ಗೆ ದೇಗುಲವಮ್ಮಾಡಿಸಿದಳು ಹಿಡಿಂಬೆ... ದಿತ್ತ
ಹಿಡಿಂಬೇಸ್ವರಮೆಂಬುದು ಆ ಲಿಂಗಂ ಪೆರ್ಚ್ಚೆ ಪೆರ್ಚ್ಚುವ ಕಾರಣದಿಂ ಕಳೇಶ್ವರಮದಮೃತ
ಲಿಂಗದೇ[ವರ್]'[೪೪]

ಈ ಶಾಸನದಲ್ಲಿ ಬಂದಿರುವ ಹಿಡಿಂಬಾ ವನದ ಉಲ್ಲೇಖ ಇಲ್ಲಿ ಮಹತ್ವ ಪಡೆದುಕೊಳ್ಳುತ್ತದೆ. ಸ್ವಯಂಭು ಕಲಿದೇವರಿಗೆ ಹಿಡಿಂಬೆ ದೇಗುಲ ಮಾಡಿಸಿದ ಕಾರಣಕ್ಕೆ ಅಲ್ಲಿರುವ ಲಿಂಗಕ್ಕೂ ಹಿಡಿಂಬೇಶ್ವರ ಎಂಬ ಹೆಸರು ಬಿತ್ತು ಎಂಬ ವಿಚಾರ ಸ್ಥಳ ಪುರಾಣವನ್ನು ತಿಳಿಸುತ್ತದೆ. ಮಹಾಭಾರತದಲ್ಲಿ ಹಿಡಿಂಬಾ ಎಂಬಾಕೆ ರಾಕ್ಷಸಿ ಪಾಂಡವರ ಭೀಮನನ್ನು ಮೋಹಿಸಿ ಮದುವೆಯಾದವಳು. ಆಕೆಗೆ ಭೀಮನಿಂದ ಘಟೋದ್ಗಜ ಎಂಬ ಮಗ ಕೂಡ ಹುಟ್ಟುತ್ತಾನೆ ಎಂಬ ಕತೆ ಬರುತ್ತದೆ. ಬಹುಶಃ ಆ ನೆಲೆಯಲ್ಲಿಯೇ ಇಲ್ಲಿಯ ಹಿಡಿಂಬಾ ವನ ಕೂಡ ಇರಬೇಕು ಮತ್ತು ಉಚ್ಚಂಗಿ ದುರ್ಗದಲ್ಲಿಯೇ ಆ ಮಹಾಭಾರತದ ಪ್ರಸಂಗ ನಡೆದಿರಬಹುದು ಎನಿಸುತ್ತದೆ. ಇದಕ್ಕೆ ಐತಿಹಾಸಿಕವಾದ ಯಾವ ಆಧಾರಗಳೂ ಇಲ್ಲ. ಸ್ಥಳಪುರಾಣಗಳ ಮಾದರಿಯೇ ಅಂಥದ್ದು ಅಥವಾ ಸಾಮಾನ್ಯವಾಗಿ ತಮ್ಮ ಊರಿನ ಘನತೆಯನ್ನು ಹೆಚ್ಚಿಸಲು ಇಂತಹ ಕತೆಗಳು ಹುಟ್ಟು ಪಡೆದುಕೊಳ್ಳುತ್ತವೆ ಎಂಬುದನ್ನೂ ಮರೆಯುವಂತಿಲ್ಲ.

ಬಿಜಾಪುರದ ವಸ್ತುಸಂಗ್ರಹಾಲಯದದಲ್ಲಿರುವ ಒಂದು ಕಲ್ಲಿನ ಮೇಲಿರುವ ಕ್ರಿ.ಶ. ಸುಮಾರು ೧೧ನೇ ಶತಮಾನವು ಶಾಸನದಲ್ಲಿ ವಸಿಷ್ಠಗೋತ್ರದ ಬಗ್ಗೆ ಪೌರಾಣಿಕ ಮಾಹಿತಿಯನ್ನು ನೀಡುತ್ತದೆ.

'... ... ... ದಾನವಮಥನನ ನಾಭಿಕಮಲದೊಳ್ ಪರಿಮಳದಂತುದಿಯಿಸಿ
ದಂ ತನ್ನ ಚತುರ್ವ್ವದನದೊಳುದಿಯಿಸಿ ಸಮಸ್ತ ವೇದನಿನಾದಂ // ಅಜನ ಮನಮೆಂಬ

ಕನಕಾಂಬುಜಜಾತ ಕಿಂಜಲ್ಕಪುಂಜಮೆನೆ ಜ

ನಿಯಿಸಿದು ತ್ರಿಜಗದ್ವಂದ್ವಂ ದಕ್ಷಪ್ರಜಾಪತಿ ಪ್ರಮುಖನಿಖಿಳ ಮಾನಸಪುತ್ರರು // ಅವರೊಳಗೆ ವೇದವೇದಾಂಗ

ವಿದಂ ಬ್ರಹ್ಮದ್ವಿತೀಯಮೂರ್ತ್ತಿಯೆನಲ್ ಭೂಭುವನಮನೆಱಗಿಸಿದಂ ಬ್ರಹ್ಮವರ್ಚ್ಚಸಂ ತನಗೆ ಸಹಜಮೆನಿಸಿ ವಸಿಷ್ಠಂ //

ಆ ಪರಮಬ್ರಹ್ಮಪ್ರತಿರೂಪಮೆನಲು ನೆಗಳ್ದಮುನಿಯ ಪೆಸರಿ ಜಗಮಂ ವ್ಯಾಪಿಸೆ ವಸಿಷ್ಠಗೋತ್ರಮಿಳಾ

ಪಾವನಮಾಯ್ತು ದಿವ್ಯಮನುಸೂತ್ರದವೋಲ್//[೪೫]

ವಸಿಷ್ಠ ಗೋತ್ರದ ಪೌರಾಣಿಕ ಚರಿತೆ ಇಲ್ಲಿ ಕಾಣಿಸಿಕೊಂಡಿದೆ. ನೇರವಾಗಿ ಬ್ರಹ್ಮನ ಮೂಲಕ ಬಂದಿರುವ ಗೋತ್ರ ಎಂದು ಹೇಳದೇ ಕಾವ್ಯಮಯವಾಗಿ ವರ್ಣನೆಗಳ ಮೂಲಕ ಅದನ್ನು ತಿಳಿಸಲಾಗಿದೆ. 'ದಾನವ ಮಥನನ' ಎನ್ನುವುದು ವಿಷ್ಣುವಿನ ಹೆಸರಾಗಿ ಇಲ್ಲಿ ಬಂದಿದೆ. ಆತನ ನಾಭಿಕಮಲದಲ್ಲಿ ಜನಿಸಿದವನು ಚತುರ್‌ಮುಖ ಬ್ರಹ್ಮ. ಆತನಿಂದಲೇ ವೇದಗಳು ಜನಿಸಿದವು. ದಕ್ಷ ಪ್ರಜಾಪತಿ, ವಸಿಷ್ಠರು ಬ್ರಹ್ಮನ ಮಾನಸಪುತ್ರರು. ಈ ವಸಿಷ್ಠನು ಪರಮ ಬ್ರಹ್ಮನ ಪ್ರತಿರೂಪ ಎಂದೇ ಖ್ಯಾತನಾದವನು. ಈ ವಸಿಷ್ಠ ಮುನಿಯ ಹೆಸರಿನಿಂದಲೇ ವಸಿಷ್ಠ ಗೋತ್ರ ಜಗತ್ತನ್ನು ವ್ಯಾಪಿಸಿತು ಎನ್ನುವ ಉಲ್ಲೇಖ ಇಲ್ಲಿ ಬಂದಿದೆ. ಅಷ್ಟೇ ಅಲ್ಲ ಅದು ಮನುಸೂತ್ರ (ಮನುಸ್ಮೃತಿ) ಮೂಲಕವೂ ದಿವ್ಯವಾಗಿ ಬೆಳಗಿತು ಎನ್ನುವುದನ್ನು ಇಲ್ಲಿ ದಾಖಲಿಸಲಾಗಿದೆ. ಗೋತ್ರ ಎನ್ನುವುದು ಕೂಡ ಜಾತಿಗೆ ಸಮಾನವಾದ ಪದವೇ ಆಗಿದೆ. ಮದುವೆ ಮೊದಲಾದ ಸಂಬಂಧಗಳನ್ನು ನಿರ್ಧರಿಸಲು ಗೋತ್ರವನ್ನೂ ನೋಡಲಾಗುತ್ತದೆ ಎಂಬುದನ್ನು ಗಮನಿಸಿದರೆ ಇದು ವೇದ್ಯವಾಗುತ್ತದೆ. ಹಾಗಾಗಿ ಎಲ್ಲ ಗೋತ್ರಗಳಲ್ಲಿ ವಸಿಷ್ಠ ಗೋತ್ರ ಪ್ರಮುಖವಾದುದು ಪುರಾಣವ್ಯಕ್ತಿಯಾದ ವಶಿಷ್ಠನ ಗೋತ್ರವನ್ನು ಇತಿಹಾಸ ವ್ಯಕ್ತಿಗಳ ಗೋತ್ರವಾಗಿರುವುದನ್ನು ಶಾಸನಗಳಲ್ಲಿ ಕಾಣಬಹುದು.

ಬಿಜಾಪುರದ ವಸ್ತುಸಂಗ್ರಹಾಲಯದಲ್ಲಿ ಇರುವ ೨೭ನೇ ವೀರಗಲ್ಲಿನ ಮೇಲಿರುವ ಶಾಸನ ಇಂತಿದೆ ;

'[ಉ]ಯ್ಯಲನೇಱು ಸ್ವರ್ಗ್ಗಭುವನಾದಿಗಳಂ ಕೊಳಲೆನ್ದು ದಾಚಿ

...ಯ್ಯನೆ ತೂಳಿ [ಭೈ]ರವಮನಿಮ್ಬಿನೆ ಪಾಯ್ದೊಡೆ

ನ್ದುಯ್ಯಲೆ ಬನ್ದ ದಿವ್ಯಗಣಿಕಾಂಗನೆಯರ್ಮ್ಮನದೋತು ರಾಗದಿಂ

ಮೆಯ್ಯನೆ ಕೊಣ್ಡು ಪಾಱಿದರ ಸಂಗದೆ ಮುಕ್ತಿಯನೆಯ್ದುವನ್ನೆಗ'[೪೬]

ಎಂದು ಬಂದಿರುವ ಈ ಶಾಸನದಲ್ಲಿ ಲೋಕೆಯ ಪೆರ್ಗಡೆಯ ಮೊಮ್ಮಗ ಸ್ವರ್ಗವನ್ನು ಪಡೆಯಬೇಕು ಎಂದು ಹೋರಾಡಿ ಮಡಿದಾಗ ದೇವಲೋಕದ ಸ್ತ್ರೀಯರು ಸಂತೋಷದಿಂದ

ಆತನನ್ನು ಸ್ವರ್ಗಕ್ಕೆ ಕರೆದುಕೊಂಡು ಹೋದರು ಎಂಬ ಉಲ್ಲೇಖ ಬರುತ್ತದೆ. ಇದು ವೀರಗಲ್ಲು. ಯುದ್ಧದಲ್ಲಿ ಹೋರಾಡಿ ಮಡಿದಾಗ, ಮಡಿದ ವ್ಯಕ್ತಿಯ ನೆನಪಿಗಾಗಿ ನೆಡುವ ಕಲ್ಲಿನ ಮೇಲೆ ಆ ವ್ಯಕ್ತಿಯ ವಿಷಯವನ್ನು ಪ್ರಸ್ತಾಪ ಮಾಡಲಾಗುತ್ತದೆ. ಯುದ್ಧ ಎನ್ನುವುದು ಮೊದಲಿನ ಕಾಲದಲ್ಲಿ ಅಂದರೆ ಪ್ರಭುಪ್ರಭುತ್ವದಲ್ಲಿ ಒಂದು ಬಹುಮುಖ್ಯವಾದ ಏಳ್ಗೆಯ ಸಾಧನವಾಗಿತ್ತು. ವೈರಿಗಳನ್ನು ಸದೆ ಬಡಿದು, ರಾಜ್ಯದ ಗಡಿ ವಿಸ್ತರಣೆಯಾಗುತ್ತಿತ್ತು. ಹಾಗಾಗಿಯೇ ಯುದ್ಧದಲ್ಲಿ ಗೆದ್ದರೆ ರಾಜ್ಯಲಕ್ಷ್ಮಿ, ಸತ್ತರೆ ಸ್ವರ್ಗಲಕ್ಷ್ಮಿ ಎಂಬ ಮಾತು ಬರುತ್ತದೆ.

ಇಲ್ಲಿಯ ವಿಚಾರವನ್ನೇ ತೆಗದುಕೊಂಡರೂ ಕೂಡ ಅಂಥದ್ದೊಂದು ರೂಪಕವನ್ನು ಈ ವೀರಗಲ್ಲಿನ ಮೇಲಿರುವ ಶಾಸನ ಕಟ್ಟಿಕೊಡುತ್ತದೆ. ಚಿತ್ರ ಸಮೇತವಾಗಿರುವ ಶಾಸನಗಳೂ ಕೂಡ ಈ ವಿಚಾರವನ್ನು ಪ್ರತಿಪಾದಿಸುತ್ತವೆ. ಲೋಕೆಯ ಪೆರ್ಗಡೆಯ ಮೊಮ್ಮಗ ಸ್ವರ್ಗವನ್ನು ಪಡೆಯಲೇ ಬೇಕು ಎಂದು ಯುದ್ಧ ಮಾಡಿದ ಎಂಬುದನ್ನು ಇಲ್ಲಿ ಒತ್ತಿ ಹೇಳಲಾಗಿದೆ. ಇದು ಉತ್ಪ್ರೇಕ್ಷಿತವಾದರೂ ಮರಣಿಸಿದ ವ್ಯಕ್ತಿಯ ಬಗ್ಗೆ ಇಂತಹ ಹೇಳಿಕೆಗಳು ಸಾಮಾನ್ಯ. ಆತ ಮಡಿದಾಗ ದೇವಲೋಕದ ಸ್ತ್ರೀಯರು ಆತನನ್ನು ತುಂಬ ಸಂತೋಷದಿಂದ ಸ್ವರ್ಗಲೋಕಕ್ಕೆ ಕರೆದುಕೊಂಡು ಹೋದರು ಎಂಬ ವಿಷಯ ಇಲ್ಲಿ ಬಂದಿದೆ. ವೀರಗಲ್ಲುಗಳ ಮೇಲಿರುವ ಚಿತ್ರಿಕೆ ಮತ್ತು ಬರಹಗಳು ಯಾವಾಗಲೂ ಇದೇ ಮಾದರಿಯಲ್ಲಿ ಇರುತ್ತಿದ್ದು, ಇದು ಮಡಿದವರ ಸ್ತುತಿ ಮಾಡಿ, ಮುಂದಿನ ಪೀಳಿಗೆ ಅವರನ್ನು ಆದರ್ಶವಾಗಿಸಿಕೊಳ್ಳಲು ಕಾರಣವೂ ಆಗುತ್ತದೆ. ಇದು ಪ್ರಭುಪ್ರಭುತ್ವದ ಕಾಲದಲ್ಲಿ ಮಾತ್ರವಲ್ಲ ಇಂದಿನ ಪ್ರಜಾಪ್ರಭುತ್ವದಲ್ಲಿಯೂ ಕೂಡ ಚಾಲ್ತಿಯಲ್ಲಿದೆ. ಗಡಿ ಕಾಯುವ ಯೋಧರು ಯುದ್ಧ ಸಂದರ್ಭದಲ್ಲಿ ಹುತಾತ್ಮರಾದಾಗ ಅವರನ್ನು ಕೂಡ ಹೀಗೆಯೇ ಸ್ಮರಿಸಲಾಗುತ್ತದೆ.

ಬಾಗೇವಾಡಿ ತಾಲೂಕಿನ ಯಾಳವಾರ ಗ್ರಾಮದ ಸೋಮೇಶ್ವರ ದೇವಾಲಯದ ಆವರಣ ಗೋಡೆಯಲ್ಲಿರುವ ಒಂದು ಕಲ್ಲಿನ ಮೇಲಿರುವ ೧೬ನೇ ಶತಮಾನದ ಶಾಸನವೊಂದು ಶಿವನನ್ನು ಸ್ತುತಿಸಿದೆ.

'... ... ... ... ... ... ... ಹರನ ಗಿರಿಜಾ

ವರನ ಕರುಣಾಕರನ ದುರಿತಾಂತರನ ಗಂಗಾಧರನ

ಫಣಿಯ ಕುಂಡಲನ ಹರನು ಸಿಖರನ ನಿಲಗಣ

ನಿಗಮಸ್ವರೂಪದೆ ಚಿತ್ರಕಾಯನ ಚಿಂನ್ಮಯಾಂಬರನ...'[೪೭]

ಶಿವನನ್ನು ವರ್ಣಿಸುವ ಈ ಶಾಸನವು ಶಿವನ ಹಲವು ಹೆಸರುಗಳನ್ನು ಹೆಸರಿಸುತ್ತದೆ. ಗಿರಿಜಾವರ, ಕರುಣಾಕರ, ದುರಿತಾಂತರ, ಗಂಗಾಧರ, ಫಣಿಕುಂಡಲ, ಹರ, ಶೇಖರ, ನೀಲಗಣ ನಿಗಮದ ಚಿತ್ರಕಾಯ, ಚಿನ್ಮಯಾಂಬರ ಮೊದಲಾದ ಹೆಸರುಗಳು ಇಲ್ಲಿ ದಾಖಲುಗೊಂಡಿವೆ.

ಪೌರಾಣಿಕ ಶಿವನಿಗೆ ಇದ್ದಷ್ಟು ಹೆಸರು ಇನ್ನುಳಿದ ಯಾವ ದೇವತೆಗಳಿಗೂ ಇಲ್ಲ ಎಂಬುದನ್ನು ಗಮನಿಸಬೇಕು. ಹೇಳುತ್ತ ಹೋದರೆ ನೂರಾರು ಹೆಸರುಗಳು ಶಿವನಿಗೆ ಇವೆ. ಉತ್ತರ ಕರ್ನಾಟಕದಲ್ಲಿ ಹೆಚ್ಚಾಗಿ ಶೈವ ಪರಂಪರೆಯ ಕುರುಹುಗಳು ಗೋಚರಿಸುತ್ತವೆ. ಈ ಕಾರಣದಿಂದಲೇ ಶಿವನನ್ನು ಕುರಿತ ಶಾಸನಗಳು ಈ ಭಾಗದಲ್ಲಿ ವಿಪುಲವಾಗಿವೆ.

ಶಾಸನೋಕ್ತ ಪೌರಾಣಿಕ ಸಂಗತಿಗಳು ಇಷ್ಟಕ್ಕೇ ನಿಲ್ಲುವುದಿಲ್ಲ. ೧೨ನೇ ಶತಮಾನದ ವಚನಕಾರರನ್ನೂ ಪಾವಾಡಿಕರನ್ನಾಗಿ ಚಿತ್ರಿಸಿ, ಪುರಾಣಗಳೊಂದಿಗೆ ಸಮೀಕರಿಸಿದ್ದು ಕಂಡುಬರುತ್ತದೆ. ಇಂತಹ ಪ್ರಕ್ರಿಯೆಯ ಕಾರಣವಾಗಿಯೇ ಬಸವಣ್ಣನವರನ್ನು ಕುರಿತು ಮತ್ತು ಇನ್ನಿತರ ಶರಣರನ್ನು ಕುರಿತು ಪುರಾಣಗಳು ಹುಟ್ಟಿಕೊಂಡಿವೆ. ಹಾವೇರಿ ಜಿಲ್ಲೆಯ ಹಿರೇಕೆರೂರ ತಾಲೂಕಿನ ಅಬಲೂರ ಶಾಸನದಲ್ಲಿ ಶರಣ ಏಕಾಂತ ರಾಮಯ್ಯನ ಕತೆಯನ್ನು ಹೇಳಲಾಗಿದೆ. ಅಬಲೂರಿನ ಸೋಮನಾಥ ದೇವಾಲಯದ ನವರಂಗದ ಎಡಪಕ್ಕದ ದ್ವಾರದ ಬಳಿ ನಿಲ್ಲಿಸಿರುವ ೧೦ಳ ಸಾಲಿನ ಈ ಶಾಸನವು ಏಕಾಂತರಾಮಯ್ಯನ ಪವಾಡವನ್ನು ತಿಳಿಸುತ್ತದೆ. ಕಾವ್ಯಾತ್ಮಕವಾಗಿ ಕಾಣಿಸಿಕೊಳ್ಳುವ ಈ ಶಾಸನವು ಜೈನ ಮತ್ತು ವೀರಶೈವ ಪರಂಪರೆಗಳ ನಡುವಿನ ಸಂಘರ್ಷದ ಕುರಿತಾಗಿಯೂ ಬೆಳಕು ಚೆಲ್ಲುತ್ತದೆ.

ಶಿವನು ತನ್ನ ಸಕಲ ಗಣಗಳೊಂದಿಗೆ 'ಸುಖಸಂಕಥಾ ವಿನೋದದಿಂದಮಿರೆ ನಾರದನೆಂಬ ಗಣೇಶ್ವರನಿಂತೆಂದಂ

ಓಂ[॥*] ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ ತ್ರೈಲೋಕ್ಯ–ನಗರಾರಂಭಮೂಲಸ್ತಂಭಾಯ ಶಂಭವೇ ॥ ಶ್ರೀಮದ್ಗಂಗಾತರಂಗೋ–
ಚ್ಚಳಿತಜಳಕಣಶ್ರೇಣಿಪುಃಪಾಳಿಶೋಭಾಧಾಮಂ ಚಂಚಜ್ಜಟಾಪಲ್ಲವಮಮಿ್ರ–(ಮೃ)ತಕರೋದ್ಯತ್ಫಳಂ ಬಾಹುಶಾಖಾರಾಮಂ ಗೌರೀಲತಾ
ಲಿಂಗಿತಮಮರನುತಂ ಶಂಭುಕಲ್ಪದ್ರುವಾದಂ ರಾಮಂಗೀಗರ್ತ್ಥಿಯಿಂ ವಾಚ್ಛಿತಫಳಚಯಮಂ ಸಂತತೋತ್ಸಾಹದಿಂದಂ ॥ ಶ್ರೀಕಣ್ಠಂ ರಾಮ–ದೇವಂಗನುಪ್ಪ(ಪ)ಮ
ಮಹಿಮಂಗೀಗೆ ಸಂಪತ್ತನೆಂದುಂಣನಾ ನಾಕೌಕಾನೀಕಮೌಳಿಪ್ರಕರಮಣಿಗಣಶ್ರೇಣಿಶೋ
ಣಾಂಶುಜಾಳಬ್ಯಾ ಕೀರ್ಣ್ಣಾ[ಂ*] ಘ್ರಿದ್ವಯಾಳಂಕೃ(ಕೃ)ತನಮರ ವರಂ ಶೀತಶೈಲೇ[ಂ*]ದ್ರ–
ಕನ್ಯಾಳೋಕಾಂಶುಶ್ರೀನಿವಾಸಂ ಸಕಳಗಣವ್ರಿ(ವೃ)ತಂ ವಿರಸೋಮೇಶನೀಶಂ ॥ ಚಳದುಗ್ರಗ್ರಾಹವಕ್ತ್ರಚ್ಚು
(ಚ್ಯು)ತತಿಮಿನಿಕರಾತುಚ್ಛಪುಚ್ಛಾಗ್ರಘಾತುಕುಳಿತಾಂ
ಭಃಕುಂಭಿಯೂಥಪ್ರಕರಸಜಳಘೂತ್ಕಾರಹಸ್ತಾಭ್ರಿ(ಭ್ರ) ಮಾಳಾಮಿಳಿತಂ ಸುತ್ತಿ ಪ್ಪೊ(ಪ್ರ್ಪ)ದು
ದ್ಯನ್ಮಣಿಕಿರಣಸ್ಫಾರಮುಕ್ತಾಂಶು ವೇಳಾಚಳಮಾಳಂ
ಭೂರಮಾಮಣ್ಣನವಿಪುಳಕಟೀದೇಶಮುದ್ರಂ ಸಮುದ್ರಂ ॥ವ॥ ಅಂತನೇಕ ಜಳಚರನಿವಾ[ಸ*]ಮುಂ
ಸ[ಮು*]ತ್ತುಂಗಲಹರೀನಿವಾಸಮುಮೆನಿಸಿ ಸೊಗಯಿಸುವ

ಲವಣಸಮುದ್ರದಿಂ ಪರವ್ರಿ(ವೃ)ತವಾದ ಜಂಬೂದ್ವೀಪದ ತೆಂಕಲು ನೀಳ-ನಿಶದ (ಧ) ಹಿಮವನ್ತಪರ್ವ್ವಂತಂಗೊಳೊಳವಲ್ಲಿ ॥ವ್ರಿ॥ ಎಸಗುಂ ಪೂರ್ವಾಪರಾಂಭೋನಿಧಿಮಿ[ತಿ] ವಿತತಾಯಾಮದಿಂ ಸಿದ್ಧಕನ್ಯಾವಿಸರಾನಂಗೋರು ಕೇಳೀಶ್ರಮಶಮಮ ಹಿಮಾಕಂದರಂ ಸ್ವರ್ಧುನೀವಾಃ ಪ್ರಸರೋಪಕ್ಷುಣ್ಣ ನಾನಾ [ನಗನಿ]

ಕರಗಳದ್ಗಣ್ಡಶೈಳಾಳಿಮಾಳಾವಿಸರಂ ಪ್ರಸ್ಫಾರಶೀತದ್ಯುತಿರುಚಿನಿಚಯಭ್ರಾಜಿತಂ [ಶೀ]ತಶೈಲಂ ॥ವ॥ (॥) ಆ ಮಹಿಗಿ [ರೀ]ನ್ದ್ರದ ದಕ್ಷಿಣಪಾರ್ಶ್ವ[ತ್ರಿ]

ಯತ್ತಿಪ್ಪ ಭಾರತವರ್ಷದೊಳು ಕುಂತಳದೇಶವೆಂಬುದಧಿಕ ಶೋಭೆವೆತ್ತೆಸುವುದಲ್ಲಿ ॥ಕ॥ ಸೊಗಯಿಪುದಲನ್ದೆಯೆಂಬುದು ನಗರಂ ಚೆಲುವೆಸೆದು ನಾಡೆವ(ಯ)ಮ

ರಾವತಿಗಂ ಮಿಗಿಲೆನಿಸಿ ವಿಬುಧಜನದಿಂದಗಣಿತ ಧನಧಾನ್ಯಜಲಸಮ್ರಿ(ಮೃ)ದ್ಧಿಯಿನೆಂದು ॥ ಮತ್ತ ॥ ಪ್ರಕಟಿತಕಮರಾವತಿಯೊಳು ಸುಕೇಶಿಯುಂ [ಂ] ಮಂಜುಘೋಷೆಯುಂ ತಾಮಿರ್ಬ್ಬರ್ಸ ಕಳವಧೂತತಿಯೆಲ್ಲಂ ಸುಕೇಶಿಯರ್ಮಂಜುಘೋಷೆಯರ್ತ್ತತ್ಪುರದೊಳ್ ॥ವ್ರಿ॥ ಅದು ನಾನಾವಿಧ ಗನ್ಧಸಾಳಿವನದಿಂ ಸವ್ವತ್ತುಕೋದ್ಯಾನನಂದನದಿಂ ಪೊರ್ನ್ನ (ರ್ಣ್ಣ) ತಟಾಕಕೂಪ

ಸರಸೀಸಂನ್ದೋಹದಿಂ ಸಾರಸೋನ್ಮದಭ್ರಿ(ಭೃ)ಂಗೀಪಿಕಕೋಕಕೇಕಿಶುಕಸಂಘಾ ನೀಕಶಾಕುಂತ ನಾದದಿನೆತ್ತಂ ಗಣಿಕಾವಿನೋದಕ್ರಿ(ಕೃ)ತವೀಣಾನಾದಗದಿಂದೊಪ್ಪಗುಂ೧ । (॥) ವ। (॥) ಅಂತಪರಿಮಿತಕೇ

ದಾರಭೂಮಿಯುಂಮಪರಾಜಳಾಶ್ರಯಾಭಿರಾಮಮುಂ ಬಹುಜನಾಕೀರ್ನ್ನ(ರ್ಣ್ಣ) ಮುಮಮೇಯ ಗಣಿಕಾನಿವಾಸಮುಮಗಣಿತವಣಿಗ್ಜನಾಶ್ರಯಮುಮಮೆನಿಸಿ ಶೋಭಾನಿವಾಸಮಾಗೆ ॥

ವ್ರಿ॥ ಅವತರಿಸಿರ್ದ್ದನಲ್ಲಿ ರಜತಾಚಳದಿಂ ಗಿರಿಜಾಸಮೇತಮುತ್ಸವದೊಳೆ ಸೋಮನಾಥನಖಿಳಾಮರಮೋ (ಮೌ)ಳಿವಿನದ್ಧರತ್ನಸಂಭವ [ಕಿ*]ರಣ ಪ್ರಭಾಪಟಲಪುಂಜಪರಾಗಪದಾ(ಬ್ಜ) ನರ್ತಿಯಿಂದ

ವನತಭಾಕ್ತಿಕಾಭಿಮತಸಿದ್ಧಿಫಳೋದಯಕಳ್ಪಭೂರುಹಂ ॥ಕ॥ ಆ ಸೋಮನಾಥಪುರ ಸವಾಸಿತರೊಳು ಬ್ರಹ್ಮಪುರಿಗಳೊಳ್ಪಿ(ಳ್ವಿ)ಪ್ರರೊಳಾ ಬ್ಯಾ(ವ್ಯಾ)ಸಶುಕವಾಮದೇವಪರಾಶರಕಪಿಳಾದಿ ಸದ್ರಿ(ದೃ)ಶನೋ ರ್ಬ್ಬನ್ನೆಗಳ್ದಂ ॥ ಕಂ ॥ ಶ್ರೀವತ್ಸಗೋತ್ರನುರ್ಬ್ಬಿ (ರ್ವ್ವೀ)ದೇವನುತಂ ನಿಖಿಳವೇದವೇದಾಂಗವಿದಂ ಪಾವನಚರಿತ್ರಗುಣಸದ್ಭಾವಂ ಪುರುಷೋತ್ತಮಂದ್ವಿ(ದ್ವಿ)ಜೋತ್ತಮನೆನಿಪಂ ॥ ಕಂ ॥ ಆ ವಿಪ್ರನ ಸತಿ ಸೀತಾದೇವಿಗವಾ [ಸ]ತ್ಯ

ತಪನಸತಿಗಂ ಗುಣಸದ್ಭಾವದೆ ಪದ್ಮಾಂಬಿಕೆ ಸಲೆ ಪಾವನಸುಚರಿತೆ ಪತಿಹಿತಬ್ರ(ವ್ರ)ತೆಯೆನಿಪಳ್ ॥ ಆ ದಂಪತಿಗಳ್ಪಲಕಾಲವನಪತ್ಯರಾಗಿರ್ದ್ದೊಂದು ದೆವಸಂ ನಾಪುತ್ರಸ್ಯ ಲೋಕೋಸ್ತಿ ಎಂಬ ವೇದವಾಕ್ಯಮ[ಂ*]ತಿ

[ಳಿದು] ॥ಕ । (॥) ಪುತ್ರಾರ್ತ್ಥವಾಗಿ ಸತ್ಯಪವಿತ್ರಾಚರಣಂ ನೆಗಟ್ದ ಪುರುಷೋತ್ತಮನಾಪತ್ರಾ(ತ್ರಾ)ಣ
ನೀಶನೆಂದು ಕಳತ್ರಾನ್ವಿತನಾಗಿ ಶಂಭುವಂ ಪೂಜಿಸಿದನ್ ॥ ವ [॥*] ಅಂಗನೆಮಿತ್ತ
ದಿವಿಜದನುಜವ್ರಿ(ವೃ)ಂದ ವಂದಿತಪಾದಾರವಿಂದ
[ನಪ್ಪ] ಮಹೇಶ್ವರಂ ಕವಿಳಾಸರ್ಬ್ಬ(ರ್ವ)ತದ ರಮ್ಯಭೂಮಿಯೊಳು ಕೇಶವ ವಾಸವಾಬ್ಜಭವ
ರೋಲಗಿಸಲಸಂಖ್ಯಾತಗಣಪರಿವ್ರಿ(ವೃ)ತನುಮಾಸಹಿತಂವ [ವೊ]ಡ್ಡೋಲಗದೊಳು ಸುಖಸಂಕಥಾ
ವಿನೋದದಿಂದಮಿರೆ ನಾರದನೆಂಬ ಗಣೇಶ್ವರನಿನ್ತೆಂದ ॥ ವ್ರಿ ॥ ಓಹಿಲ ದಾಸಿ (ಸ) ಚೆಂನ
ಸಿರಿಯಾಳ ಹಳಾಯುಧ ಬಾಣನುದ್ಭಟರ್ದೇಹ ದೊಳೊಂದಿಗ ಬಂದ ಮಳಯೇಶ್ವರ
ಕೇಶವರಾಜರಾದಿಯಾಗೈಹಿ
ಕಸೌಖ್ಯಮಂ ಬಿಸುಟಸಂಖ್ಯಗಣಂ ನಿಜವಾದ ಭಕ್ತಿಸದ್ಗೇಹದೊಳಿಲ್ಲಿರಲು ಸಮಯಮುತ್ಕಟ
ವಾದುವು(ದು) ಜೈನಬೌಧ[ದ್ಧ]ರೊಳ(ಳ್) ॥ ಎಂಬುದಂ ಮಹೇಶ್ವರಂ ದರಹಸಿತವದನಾರವಿಂ
ದನಾಗಿ ವೀರಭದ್ರನಂ ನೀಂ ಮನುಷ್ಯಲೋಕದೊಳು ನಿಂನಂಶದೊಳೊರ್ಬ್ಬ(ರ್ಬ್ಬ)ನಂ
ಪುಟ್ಟಿಸಿ ಪರಸಮಯಗಳಂ ನಿಯಾಮಿಸೆಂಬುದುಂ ವೀರಭದ್ರನುಂ ಪುರುಷೋ
ತ್ತಮಭಟ್ಟರ್ಗ್ಗೆ ಸ್ವಪ್ನದೊಳ್ತಾಪಸರೂಪದಿಂ ಬಂದು ಪುತ್ರಂ ಪರಸಮ ಯನಿಯಾಮಕಂ
ನಿಮಗೆ ಪುಟ್ಟುಗುಮೆ [ಂ*]ದು ಮತ್ತಂಮಿಂತೆಂದ ॥ಶ್ಲೋಕ॥ ಜೈನಮಾರ್ಗ್ಗೇಷು ಯೇ ಯಾ
ತಾ ಬಹವೋ ದಕ್ಷಿಣಾಪಥೇ ತೇ ದೂಷಿತಾ ಭವನ್ತು ಸರ್ವ್ವೇ ರಾಮೇಣ ತವಸೂನುನಾ
॥ವ॥ ಎನ್ದು ವ (ಪ) ರಮಪ್ರಸಾದಂ ಮಾಡಿ ಪೋಪುದುಂ ಪುರುಷೋತ್ತಮಭಟ್ಟರು
ಕ್ರಿ[ಕೃ]ತಾರ್ತ್ಥರಾಗಿ ಸಂತಸಂಬಟ್ಟು ಮಗನಂ ಪಡೆದು ಜಾತಕರ್ಮಾದಿ ಕ್ರಿಯೆಗಳಂ ಮಾಡಿ
ದೇವತೊ[ದ್ದೇ]ಶದಿಂದ ರಾಮನೆಂದು ಪೆಸರನಿಟ್ಟರಾತನುಂ ತನ್ನ ದಿವ್ಯ (ವ್ಯ) ಜನ್ಮಾನುರೂಪಮಾ
ಗೆ ಶಿವಯೋಗಯುಕ್ತನಾಗಿ ನಿಸ್ಪ್ರುಹವ್ರಿ(ವೃ)ತ್ತಿಯಿಂ ಚರಿಯಿಸುತ್ತುಂ ॥ ಕಂದ ॥
ಏಕಾಗ್ರಭಕ್ತಿಯೋಗದಿನೇಕಾಕಿಯೆನಲ್ಕೆ ಸಂದು ಶಿವನಂ ಪಿರಿದಪ್ಪೇಕಾನ್ತದೊಳಾರಧಿ
ಸಿ ಯೆಕಾನ್ತದ ರಾಮನೆಂಬ ಪೆಸರ (ಂ*) ಪಡದಂ ॥ ವ್ರಿ ॥ ಸತತಂ ಸಂದು
ಶಿವಾಗಮೋಕ್ತ ವಿವಿಧಕ್ಷೇತ್ರಂಗಳೊಳು ಶಾಂಭವಾಯತನಾನೇಕನದೀನದಪ್ರಕರದೊಳು
೧ಗೌರಿ(ರೀ)ವರಾಂಘ್ರಿದ್ವ೧
ಯಾಶ್ರಿತ ವಾಕ್ಕಾಯಮನೋನುಗಂ ಚರಿಯಿಸುತ್ತಂ ಬಂದು ಕಣ್ಡಂ ಸುರಾರ್ಚ್ಚಿತನಂ
ದಕ್ಷಿಣಸೋಮನಾಥನನಘೌಘತ್ರಾಸಿಯಂ ಪ್ರೀತಿಯಿಂ ॥ ವ ॥ ಅನ್ತು ಬಂದನವರ
ತ ವಿನಮದಮರವರಮೌಳಿಮಣಿಕಿರಣಮಂಜರೀರಂಜಿತಾಂಘ್ರಿಯುಗ್ಮನಪ್ಪ ಹುಲಿಗೆಱೆಯ
ಸೋಮನಾಥನನಾರಾಧಿಸುತ್ತಮಿಪ್ಪುದುಮಾ ಪರಮೇಸ್ವರ ಪ್ರತ್ಯಕ್ಷವಾಗಿ ॥
ಅತ್ರ ಶೋಕದ್ವಯಂ ॥ ಅಲ್ಬಲೂರು ವರಗ್ರಾಮಂ ಗತ್ವಾ ರಾಮ ಮಮಾಜ್ಞೆ(ಜ್ಞ)ಯಾ [।*]
ತತ್ರ ವಾಸಂ ಕುರು ಸ್ವಸ್ಥಂ ಯಜಮಾಂಭಕ್ತಿಯೋಗತಃ ॥ ಜೈನ್ಯೆ[ಃ*]ಸಹ ವಿವಾದಂ ಚ
ಶಂಕಾಂ ಹಿತ್ವಾಕು

ರುಪ್ಪಥ । ಸ್ವಶಿರೂಪಿ ಪಣಂ ಕ್ರಿ(ಕೃ) ತ್ವಾ ಪುತ್ರ ತ್ವಂ ವಿಜಯೀ ಭವ ॥ ಎಂದು ಸೋಮನಾಥ ದೇವರ್ಬೆಸಸಿದಡೇಕಾನ್ತದ ರಾಮಯ್ಯನಬ್ಬಲೂರು ಬ್ರಹ್ಮೇಶ್ವರ೧ ಸ್ಥಾನುದೊಳುಂ೧ ನಿಷ್ಠಿ(ಷ್ಠ) ಹವ್ರಿ(ವೃ)ತ್ತಿಯಿಂದಮಿರೆ । ಕ ॥

ಯು(ಉ)ಲಿದಡ್ಡಿಬಂದು ಜೈನರ್ಪಲರನ್ತಾ ಸಂಕಗೌಣ್ಡಸಹಿತಂ ಪಿರಿದುಂ ಚಲದಿಂ ಕೈವಾರಿಸಿದರ್ತ್ತೊಲಗದೆ ಜಿನ ದೈವನೆನ್ದು ಶಿವಸಂನಿಧಿಯೊಳು ॥ ವ ॥ ಅದಂ ಕೇಳ್ದೇಕಾನ್ತದ ರಾಮಯ್ಯಂ

ನತಿಕ್ರುದ್ದ(ದ್ಧ)ನಾಗಿ ಶಿವಸಂನಿಧಿಯೊಳನ್ಯದೇವತಾಸ್ತವನಂ ಮಾಡಲಾಗದೆಂದಡ(ದ)ಂ ಮಾಣದೆ ನುಡಿ [ಯು*]ತ್ತಿರಲಿಂತೆಂದಂ ॥ ವ್ರಿ ॥ ಜಗಮಂ ಮಾಡುವನಾವನಾವನದನಾ

ಪತ್ಕಾ[ಲ]ದೊಳ್ ಕಾವನಿಂ ಮಿಗೆ ಕೋಪಂ ತನಗಾಗೆ ಸಂಹರಿಸಲಾವಂ ದಕ್ಷನಾ ಶಂಭು ಸರ್ವ್ವಗನಿರ್ದನ್ತೆ ಗತಪ್ರಭಾವವಿಭವಂ ಸಂಸಾರದೊಳು ಬಿದ್ದು ದಂದುಗದೊಳು ಬರ್ದ್ದು(ರ್ದ್ದು) ತಪಕ್ಕೆ (ಕೆ) ಸಾರ್ದ್ದು

ಸುಖಮಂ ಪೊರ್ದ್ದಿಪ್ಪನುಂ ದೇವನೇ ॥ ಕ ॥ ಹರನರ್ತ್ತೀವನೇ ನಿಂಮರುಹಂ ಮುಂಕೊಟ್ಟಿಟಾ[ವು]ದಾವುದು ಮುನ[ನ್ನಂ] ಹರನೊಳ್ಪಡದರನೇ ಕರ್ವ್ವರಮಂ ಬಾಣದಿನಿಶಾಳಭಕ್ತಗಣಂಗಳು ॥ಕ॥ ಎನೆ ಜೈ

ನರೆಂಗು ನೀಂ ಮುಂನಿನ ಹಿತರರ ಹೇಳಲೇಕೆ ನಿಂನಯ ಸಿ(ಶಿ)ರಮಂ ಜನಮಱಿಯಲರಿದು ಕೊಟ್ಟಾತನೊಳಿಂ ಪಡೆ ನೀನೆ ಭಕ್ತನಾತನೆ ದೇವಂ ॥ ಕ ॥ ಎನಲೇಕಾನ್ತದ ರಾಮಂ ಮನಸಿಜರಿಪುಗಿತ್ತು ತಲೆಯ

ನಾಂ ಪಡೆದಡೆ ನೀವೆನಗೀವ ಪಣಮದೇನೆನೆ ಮುನಿದೆಂದರ್ಜ್ಜಿನನ ಕಿತ್ತು ಶಿವನಂ ನಿಲಿಪೆವು ॥ಕ॥ ಎನೆ ಕುಡುವುದೋಲೆಯಂ ನೀವೆನಗೆಂದಿತ್ತೋಲೆಗೊಂಡು ಶಿರಮಂ ತಾ ಭೋ[ಂ*]ಕೆಲನರಿದು ಕುಡುವ ಪದದೊ

ಳು ಶಿವನಂ ಸಾಂನಿಧ್ಯಮಾಡಿ ರಾಮಂ ನುಡಿಗುಂ ॥ವ್ರಿ॥ ಉಡುಗದೆ ಶಂಭು ನೀನೆ ಶರಣೆಂನದಡಂ ಮನಮನ್ಯಬಾ(ಭಾ)ವದೊಳೊಡರ್ದಮೀ ಕ್ರಿ(ಕೃ)ಪಾಣಮುಖದಿಂ ತಲೆ ಪೋಗದೆ ನಿಲ್ಕದಲ್ಲದಿ

ರ್ದ್ದಡೆ ಶಿವ ನಿಂನ ಮುಂನಡಿಗುರುಳುಗೆನುತಂ ಕಲಿ ರಾಮನಾರ್ದ್ದು ಕೆಯ್ಗಿಡದರಿದಿ೧ಕ್ಕಲುಂರಯಿಸಿದಂ೧ ಶಿರಮಂ ಶಿವನಂಘ್ರಿಯುಗ್ಮದೊಳು ॥ವ್ರಿ॥ ೨ಅರೆಗಯಿಗೊಂಡನೆ೨ ಕಿತ್ತು ನೋಡಿದನೆ ಕೊರ್ಪ್ಪಿಂಗ

ಳುಕಿ ೩ಮೆಯಿಗಯ್ದನೆ೩ ಸೆರಗಂ ಪಾರ್ದ್ದನೆ ಬಾಳ್ಗೆ ಭಕ್ತರೆನುತಂ ಬಲ್ಲಾಳು ರಾಮಂ ಸ್ವಕಂಧರಮಂ ಚಕ್ಕನೆ ಹುಲ್ಲಕಟನರಿವಂತಕ್ಲೇಶದಿಂದಾಗಳಂ ತರಿದೀಶಾಂಘ್ರಿಯೊಳಿ[ಕ್ಕಿ ಶಂಕರ]ಗಣ[ಕ್ಕಾ]ನ[ಂ*]ದ

ವಂ ಮಾಡಿದಂ ॥ಕ॥ ಅರಿದ ತಲೆ ಏಳು ದೇವಸಂಬರೆಗಂ ಮೆಱದಿಂ ಬಳಿಕ್ಕವಿತ್ತಂ ಹರನಾದರದಿಂ ತಲೆ ಕಲೆಯಿಲ್ಲದೆ ತಿರವಾದುದು ಲೋಕವಟಿ(ಟ)ಯೆ ರಾಮ [ಂ*] ಪಡದಂ ॥ಕ॥ ಬೆಱ

ಗಾಗಿ ಜೈನರೆಲ್ಲಂ ಮುಱುಗಿ ಜಿನಪ್ರಳೆ(ಳ)ಯವೆಂಬುದಂ ಮಾಡದಿರಿಂನೆಂದೆಱಗಿ ಕಾಲ್ವಿಡಿಯೆ ಮಾಣದೆ ಬಿಜೆಸಿಡಿಲಂತೆಱಗಿ ಜಿನನ ತಲೆಯಂ ಮುಱದಂ ॥ವ್ರಿ॥ ಬಡಿಗೊಂಡೊರ್ಬ್ಬನೆ ಸೊಕ್ಕಿ ಬಾಳೆ

ವನಮಂ ಕಾಡಾನೆ ೞಪೊಕ್ಕನ್ತಿರು ಕಡಗಲುೞ ಕಾಪಿನ ವೀರರಂ ತುರುಗಮಂ ಸಾಮನ್ತರಂ ತೊಳ್ದು ಮಾಮಾರ್ಪ್ಪಡೆಗಳು ಜೈನರ ಮಾರಿ ಬಂದುದೆನುತುಂಬೆ [ಂ*]ಗೊಟ್ಟು ಪೋಗಲು ಜಿನಂ ಕೆಡವ [ವಂ]ನಂ ಬಡಿದಲ್ಲಿ ಕೈಕೊ

ೞಿಸಿದಂ ಶ್ರೀವೀರಸೋಮೇಶನಂ ॥ವಿ॥ ಅದನೆಲ್ಲಂ ನೆಱಪೋಗಿ ಬಿಜ್ಜಣಮಹೀಪಾಳಂಗೆ ಜೈನರ್ಕ್ಕಳುರ್ಕ್ಕವದಿಂ ಪೇಳ್ದು ವಿರೋಧವಾಗಿ ಪಿರಿದುಂ ದೂಱುತ್ತಿರಲು ಕೋಪ ದುರ್ಮ್ಮದನಾ ಬಿಜ್ಜಣಭೂಭುಜಂ ಮುನಿಸಿನಿಂ

ರಾಮ್ಮೈಯನಂ ಕಂಡು ನೀನಿದನನ್ಯಾಯಮನೇಕೆ ಮಾಡಿದೆಯೆನಲ್ಕೊಟೊ[ಟ್ಪೊ]ಲೆಯಂ ತೋಱದಂ ॥ಕ॥ ಅವರಿತ್ತಯೋಲೆಯಿದೆ ನೀನವಧರಿ ಸುವುದಿಕ್ಕು ನಿಂನ ಭಂಡಾರದೊಳಿಂ ನವರೊಡ್ಡವಿರಲಿಯಿನ್ನೊಡ್ಡುವುದಾರ್ಪ್ಪಡೆ ನಿಂನ ಮುನ್ದೆ ಜಿನರಂ ಪಲರಂ ॥ [ವ*] ॥ ಅನ್ತಪ್ಪಡೀ ತಲೆಯನರಿದವರ ಕೈಯೊಳೊ[ಡ್ಡು]ವೆನವರದಂ ಸುಟ್ಟಂ ಬಳಿಕವಾಂ ಪ[ಡು*]ವೆನೆನಗಾನೆಸಜ್ಜೆಯ ಬಸ

ದಿ[ಮು*]ಖ್ಯವಾಗಿ ಯಂನುಱುವ ಬಸದಿ ಜಿನರಂ ಬಸದಿ ಜಿನರಂ ಪಲರನೊಡ್ಡುವುದೆನೆ ಬಿಜ್ಜಣರಾಯಂ ನಾಮೀ ಕೌತುಕಮಂ ೧ನೋಡುವವೊಂದುಗ ಬಸದಿಗಳ ಪಂಡಿತರುಮಂ ಜೈನವಂ ಕರದು ನೀಮಾ(ಮ)ಪ್ಪಡೆ

ಬಸದಿಗಳಂ ಪಣಂಮಾಡಿ ಓಲೆಯಂ ಕುಡಿವೆನ್ದಡವರಾವೀ ಮುಂನೊಡದ ಬಸದಿಯಂ ದೂಱಲ್ ಬನ್ದೆವಲ್ಲದಿನೊಡ್ಡಿ ಜಿನಪ್ರಳೆ(ಳ) ಯಂ ಮಾಡಲು ಬಂದವರಲ್ಲೆ(ಲ್ಲ) ವೆನೆ ಬಿಜ್ಜಣರಾಯಂ ನಕ್ಕು ನೀವಿಂನುಸಿ

ರದೆ ಪೋಗಿ ಸುಖದಿನಿರಿವೆಂದವರಂ ಕಳಿಪಿ ರಾಮಯ್ಯ [ಂ*]ಗಳಿಗೆಲ್ಲರುವ ಱಯೆ ಜಂ೧೨ಪ್ರತವಂ ಕೊಟ್ಟು (ಟ್ಟಂ) । (॥) ವ್ರ ॥ ಅರಿರಾಯಕ್ಷಿತಿಭ್ರಿ(ಭೃ)ಂನಗಾರಿಯರಿರಾಯಾಂಭೋಧಿಕುಂಭೋದ್ಭ

ವಂ ಅರಿರಾಯೇಂಧನತೀವ್ರ(ವ್ರ)ವಹ್ನಿ ಅರಿರಾಯಾನಂಗಭಾಳೇಕ್ಷಣಂ ಅರಿರಾಯೋಗ್ರಭುಜಂಗ ಭೂರಿಗರುಡಂ ಶ್ರೀಬಿಜ್ಜಣಂ ವೈರಿರಾಜ್ಯರಮಾಕ ರ್ಷಣದೋಲೆ (ಲಿ) ತಾಸಿ ಸುಹ್ರಿ(ಹೃ)ದಂ ಕೀರ್ತ್ಯಂಗನಾವಲ್ಲಭಂ ॥

ಚೋಳನನಿಕ್ಕ ಲಾಳನನಧಕ್ಕರಿಸಿ ಸ್ಥಿತಿಹೀನಮಾಡಿ ನೇಪಾಳನನಂದ್ರನಂ ತುಳಿದು ಗುರ್ಜ್ಜರನಂ ಸೆಱೆಯಿಟ್ಟು ಚೇದಿಭೂಪಾಳನ ಮೈಮೆಯಂ ಮುಱಿದು ವಂಗನ ಬೀಸಿ (ಸಿ) ಕಾದಿಕೊಂದು ಬಂ
ಗಾಳಕಳಿ(ಂ)ಗಮಾಗಧಪಟಸ್ವರಮಾಳವಭೂಮಿಪಾಳರಂ ಪಾಳಿಸಿದಂ ಧರಾವಳೆ (ಳ)ಯಮಂ ಕಲಿ ಬಿಜ್ಜಣರಾಯಭೂಭುಜಂ ॥ ಕ ॥ ಕೊಡದೊಳಗೆ ಪುಟ್ಟಿ ಕಡಲಂ ಕುಡಿದಂ ಘಟಯೋನಿ ಪುಟಿ [ಟ್ಟಿ] ಕಳಚುರ್ಯ್ಯ
ರೊಳೋಗಿಸದೆ ಚಳಿಕ್ಯರನ್ವಯಗಡಲಂ ಕುಡಿದುರ್ಕ್ಕೆ ಸಜ್ಜನಂ ಬಿಜ್ಜಣನೊಳು ॥ವ॥ ಸ್ವಸ್ತಿ ಸಮಧಿಗತಪಂಚಮಹಾಶಬ್ದ ಮಹಾಮಣ್ಡಳೇಶ್ವರಂ ಕಾಳಾ(ಳ)ಂಜರಪುರವರಾಧೀಶ್ವರಂ[*।] ಸುವರ್ನ್ನ(ರ್ಣ್ಣ) ವ್ರಿ(ವೃ)ಷ
ಭಧ್ವಜಂ । ಡಮರುಗತೂರ್ಯ್ಯನಿರ್ಗ್ಘೋಷಣಂ । ಕಳಚುರ್ಯ್ಯಕುಳಕ [ಮಳ] ಮಾತ್ತ [ರ್ತ*]ಣ್ಡಂ [।*] ಕದನಪ್ರಚಣ್ಡಂ । ಮೊನೆಮುಟ್ಟೆಗಣ್ಡಂ [।*] ಸುಭಟರಾದಿತ್ಯಂ । ಕಲಿಗಳಂಕುಸ(ಶ)ಂ ಗಜಸಾ
ಮನ್ತ ಶರಣಾಗತವಜ್ರಪಂಜರಂ[।*]ಪ್ರತಾಪಲಂಕೇಶ್ವರಂ [।*] ಪರನಾರೀ ಸಹೋದರಂ [।*] ಸ(ಶ) ನಿವಾರಸಿದ್ಧಿ[।*] ಗಿರಿದುರ್ಗ್ಗಮಲ್ಲಂ [।*] ಚಲದ [ಂ*]ಕ ರಾಮ[ಂ।*] ನಿಸ್ಸ(ಶ್ಯ)ಂಕಮಲ್ಲನಿತ್ಯಖಿಲನಾಮಾದಿಸ
ಮಸ್ತಪ್ರಶಶ್ತಿಸಹಿತ [ಂ*] ಶ್ರೀಮತು ಬಿಜ್ಜಣದೇವಂ ರಾಮಯ್ಯಂಗಳು ಮಾಡಿದ ಪರಮಸಾಹಸಕಂ ನಿರತಿಶಯವಪ್ಪ ಮಾಹೇಶ್ವರಭಕ್ತಿಗ[ಂ*] ಮೆಚ್ಚಿ ವೀರ ಸೋಮನಾಥದೇವರ ದೇಗುಲ
ದ ಮಾಟಕೂಟಪ್ರಾಕಾರಖಣ್ಡಸ್ಫುಟಿತಜೀರ್ನ್ನೋದ್ಧಾರಕ್ಕ ದೇವರಂಗ ಭೋಗನೈವೇದ್ಯಕ(ಕಂ)ಂ ಬನವಸೆ ೧ಎನಿಚ್ಛಾಸಿರದ೧ ಕಂಪಣಿ(ಣಂ) ಸ[ತ್ತ]ಳಿಗೆಯೆಪ[ಪ್ಪ]ತ್ತಱ ಮ[ಂ*]ನೆಯ ಚ[ಟ್ಟ]ರಸನುಮಾಕ [ಂ] ಪಣದಗ್ರಾಯಿತಪ್ರ
ಭುಗೌಣ್ಡುಗಳಂ ಮುಂದಿಟ್ಟು ಶ್ರೀಮದು ಬಿಜ್ಜನದೇವ [ಂ*] ಸತ್ತಳಿಗೆಯೆಪ್ಪತ್ತ ಱೊಳಗೆ ಮುಳಗುಂದದಿಂ ತೆಂಕಣ ಗೋವಾವೆಯೆಂಬ ಗ್ರಾಮಮಂ ಪ್ರಸಿದ್ಧಸೀಮಾಸಹಿತಂ ತ್ರಿಭೋಗಮುಮಂ
ಶ್ರೀಮದೇಕಾನ್ತದ ರಾಮ್ಮೈ(ಮ)ಯ್ಯಂಗಳ ಕಾಲಂ ಕರ್ಚ್ಚಿ ಧಾರಾಪೂರ್ಬ್ಬ(ರ್ವ್ವ)ಕಂ ಮಾಡಿಕೊಟ್ಟು [ಪ್ರ]ತಿಪಾಳಿಸಿದಂ ॥ಓಂ [॥*] ಶ್ರೀನುತಕೀರ್ತಿ ವಿಕ್ರಮದೊಳೊಂದಿದ ಸೋಮಕುಲೈಕಭೂಷಣಂ ತಾನೆನಿಪೀ
ಚಳುಕ್ಯನ್ರಿ(ನೃ) ಪರನ್ವಯದೊಳು ವಸುಧಾಧಿನಾಥರಾಖ್ಯಾನಪರಾಕ್ರಮರ್ಕಳಿಯೆ ಧಾತ್ರಿಪರಾಪ್ರಿ(ಹೃ) ತೆಯಾಗೆ ತೈಲಪಂ ತಾನೆ ತಳುಕ್ಯಧಾತ್ರಿಕುಲಶೈಲನೆನಲು ಮುದದಿಂದೆ ತಾಳ್ದಿದಂ ॥
ಅಂತಾ ತೈಲಪದೇವಂಗೆ ಸತ್ಯಾಶ್ರಯದೇವನೆಂಬ ಮಗಂ ಪುಟ್ಟಿದಂ ತತ್ತನಯಂ ವಿಕ್ರಮದೇವಂ ⁽ತತದನುಜಂ⁾ ದಶವರ್ಮ್ಮದೇವನಾತನ ಮಗಂ ಜಯಸಿಂಗರಾಯನಾತನ ಮಗನಾಹವ

ಮಲ್ಲನಾತನ ಮಗಂ ತ್ರಿಭುವನಮಲ್ಲಪೆರ್ಮಾಡಿರಾಯನಾತನ ಮಗಂ ಭೂಲೋಕಮ[ಲ್ಲ] ಸೋಮೇಶ್ವರದೇವನಾತನ ಮಗ ಪ್ರತಾಪಚಕ್ರವರ್ತಿ ಜಗದೇಕಮ[ಲ್ಲ]ನಾತನ ತಂಮಂ ತ್ರೈಲೋ

ಕ್ಯಮಲ್ಲನೊರ್ಮ್ಮಡಿತೈಲಪನಾತನ ಮಗಂ ತ್ರಿಭುವನಮಲ್ಲ ಸೋಮೇಶ್ವರ ದೇವನಾತನ ಪರಾಕ್ರಮ ಪ್ರಭಾವಮೆಂತೆಂದಡೆ ॥ವೃ॥ ಕೋಡುಳ್ಳುಗ್ರ ಮದೇಭವೊಂದೆರಡೆನಃ[ಲ್ಕೆಂ]ಪತ್ತು ವೊಡಾಗಿರಲ್ಕೋಡಿ

ಟ್ಟಾನದೆ ತಳ್ತು ಕಾದಿ ಗೆಲ್ದಂ ಕೋಡಿಲ್ಲದೊಂದಾನೆಯಿಂ ನಾಡಂ ಬೀಡ ನಿಭಂಗಳಂ ತುರಗಮಂ ಸೋಮೇಶ್ವರಂ ಬಿಲ್ಲಮಂ ನೋಡಲ್ಕಾ ಕಳಚೂ(ಚು)ರ್ಯ್ಯವಂಶಮನದಂ ನಿರ್ಮೂಳವಂ ಮಾಡಿದಂ ॥ವೃ॥ ದ(ಧ)

ರೆ ನಿಸಾಪತ್ನವಾಗಲು ಸಿರಿ ನಿಜವಸ (ಶ)ದಿಂ ಸ[ಂ*]ದುದಾರಕ್ಕೆ ತಾನಾಗರವಾಗಲು ಕೀರ್ತಿ ದಿಕ್ಪಾಳಕನಿಕರಮುಖಾದೇಶವಾಗಲು ಜಯಾಸೌಂದರಿ ನಿಚ್ಚ[ಂ*] ತೋಳಬಾರಂ ಸೆಜೆವಿಡಿದಿರೆ ಸಾಮ್ರಾಜ್ಯಮಂ ತಾಳ್ದಿದಂ ದು

ರ್ದ್ಧರಶೌರ್ಯ್ಯಂ ವೀರಸೋಮೇಶ್ವರನಹಿತವಧೂನೇತ್ರನೀರೇಜಸೋಮಂ ॥ ಅನ್ಧತಮಮೆನಿಪ ಕಳಚುರ್ಯ್ಯಾಂಧುಂ ಮಸುಳಲ್ಕೆ ತಂನ ತೇಜದೆ ಧರೆಗನುಬನ್ಧಂ ತಂನೊಳೆ ಸಲೆ ಸಮ್ಮಂ ಧಿಸೆ ಚಾಳ್ (ಳು)ಕ್ಯರಾಯ ಸೋಮಂ ನೆಗಳ್ದಂ ॥ ವ ॥ ಅನ್ತಾ ತ್ರಿಭುವನಮಲ್ಲ ಸೋಮಶ್ವರದೇವಂ ಸಕಳಚಮೂನಾಥಶಿರೋಮಣಿಯುಂ ಚಾಳುಕ್ಯರಾಜ್ಯ ಪ್ರತಿಷ್ಠಾಪಕನಪ್ಪ ಕು

ಮಾರ ಬಮ್ಮೆಯಂನುಂ ತಾನು [ಂ*] ಸೆಲೆಯಹ [ಳ್ಳಿ]ಯ ಕೊಪ್ಪದೊಳು ಸುಖಸಂಖ (ಕ) ಥಾವಿನೋದದಿನಿರ್ದ್ದೊಂದು ದೆವಸಂ ಧರ್ಮ್ಮಗೋಷ್ಟಿ(ಷ್ಠಿ)ಯೊಳಿರ್ದು ಪುರಾತ ನೂತ [ನ*]ರಪ್ಪ ಶಿವಭಕ್ತರ ಗು

ಣಸ್ತವನಂ ಮಾಡುತ್ತಮಿರ್ದೇಕಾನ್ತದ ರಾಮಯ್ಯಂಗಳಬ(ಬ್ಬ)ಲೂರಲಿದ್ದಲ್ಲಿ ಜೈನರೆಲ್ಲಂ ನೆರದು ಬಂದು ಮಹಾವಿವಾದಮಂ ಮಾಡಿ ನೀ[ಂ*] ತಲೆಯ ನರಿದುಕೊಂಡು ಶಿವನ ಕೈಯೊಳ್ಪಡದೆಯಪ್ಪಡೆ ಜಿನ

ನನೊಡೆದು ಶಿವನಂ ಪ್ರತಿಷ್ಟೆ(ಷ್ಠೆ) ಮಾಡುವೆಂದೊಡ್ಡಮನೊಡ್ಡಿಯೋಲೆಯಂ [ಕೊ]ಟ್ಟಡವರು ಕೊಟ್ಟೋಲೆಯಂ ಕೊಂಡು ತಂನ ತಲೆಯನರಿದುಕೊಂಡು ಶಿವಂಗೆ ಪೂಜೆಮಾಡಿ ಬಳಿಕಾ ತಲೆಯಂ ಏಳು

ದೇವಸಕೆ ಮುನ್ನಿನನ್ತೆ ತಲೆಯಂ ಪೊ(?)ಲೆ(?) ವೀಜವನ್ತು ಪಡೆದು ಬಿಜ್ಜ(ಜ್ಜ)ಣದೇವನ ಕೈಯ್ಯಲು ಜಯಪತ್ರಮಂ ಪೂಜೆಸಹಿತಂ ಕೊಣ್ದುದುಮಂ ಜಿನನನೊಡೆದು ಬಸದಿಯನಳಿದು ಬಿಸು

ಟು ನೆಲನಂ ಖ[ಂ*]ಡಿಸಿ ವೀರಸೋಮನಾಥದೇವರಂ ಪ್ರ[ತಿ]ಷ್ಠೆ ಮಾಡಿ ಶಿವಾಗಮೋಕ್ತವಾಗೆ ಪರ್ಬ್ಬ(ರ್ವ್ವ) ತಪ್ರ[ಮಾ*]ಣದ ದೇಗುಲಮಂ ತ್ರಿಕೂಟ ವಾಗೆ ಮಾಡಿಸಿದರೆಂಬುದಂ [ಕೇ]ಳ್ದು ತ್ರಿಭುವನಮಲ(ಲ್ಲ) ಸೋ

ಮೇಶ್ವರದೇವಂ ವಿಸ್ಮಯಂಬಿ(ಬ)ಟ್ಟು ನೋಡುವರ್ತ್ಥಿಯಿಂ ಬಿನ್ನವತ್ತಳೆಯಂ ಬರಯಿಸಿ ಬರಿಸಿಯವರನಿದಿರ್ಗೊ[ ೯*]ಣ್ಡು ತನ್ನಂ ಮನೆಗೊಡಗೊಣ್ಡು ಪೋಗಿ ಪಿರಿದುಂ ಸತ್ಕಾರದಿಂ ಪೂಜಿ

ಸಿ ಶ್ರೀಮದ್ ವೀರಸೋಮನಾಥ ೧ದೇದೇ೧ವರ ದೇಗುಲ ವಾಟಕೂಟ ಪ್ರಾಕಾರಖಂಡಸ್ಫುಟಿತಜೀರ್ನ್ನೋ[ ೯*]ದ್ಧಾರಕಂ ದೇವರ ಅಂಗಭೋಗರಂಗ ಭೋಗನೈವೇದ್ಯಕ್ಕಂ ಚೈತ್ರ

ಪವಿತ್ರವಸಂತೋತ್ಸವಾದಿ ಪರ್ವ್ವ[ ೯*]ಗಳಿಗವನ್ನದಾನ ವಿದ್ಯಾದಾನಕ್ಕ[ಂ*] ಬನವಸೆ ಪನಿಚ್ಚಾಸಿರದ ಕ[ಂ*]ಪಣಂ ನಾಗರಖಂಡವೆಪ್ಪತ(ತ್ತ)ಜಿರೋಳಗಣಬ(ಬ್ಬ) ಲೂರನಾ ದೇವರ್ಗ್ಗೆ ವೂರಾಗ ಲು ಬೇಳ್ಕುವೆಂದು ಪರಮಭಕ್ತಿಯಿಂದಾ ಕ[ಂ*]ಪಣ[ದ] ಮನ್ನೆಯ ಮಲ್ಲಿದೇವನಂ ಮು[ಂ*]ದಿಟ್ಟಾ ವೂರ ಮೇಲಾಳಿಕೆ ಮನ್ನೆ ಸುಂಕ ದಂಡದೋಷನಿಧ ನಿಕ್ಷೇಪಸಹಿತವಾಗಿ ಏಕಾನ್ತ

[ದ*] ರಾಮಯ್ಯ [ಂ*]ಗಳ ಕಾಲಂ ಕರ್ಚ್ಚಿ ಪೂರ್ವ್ವ ಪ್ರಸಿದ್ಧಸೀಮಾಸಹಿತಂ ತ್ರಿಭೋಗಸಹಿತಂ ಧಾರಾಪೂರ್ವಕಂ ಮಾಡಿ ಪಾರಮೇಶ್ವರದತ್ತಿಯಾಗೆ(ಗಿ) ತಾಂಬ್ರಶಾಸನಮಂ ಕೊಟಾ[ಟ್ಟಾ] ನೆಯನೇಜಿ(ಱಿ)ಸಿ ಮೆ

ಱಯಿಸಿ ಪರಮಭಕ್ತಿಯಿಂ ಪ್ರತಿಪಾಳಿಸಿದಂ [॥*] ಶ್ರೀಯಂ ದೀರ್ಗ್ಘಾ[ ೯*] ಯುವಂ ಕೀರ್ತ್ತಿಯ ನನುದಿನವುಂ ಮಾಳ್ಕೆ ಗೀರ್ವಾಣವ್ರಿ(ವೃ)ಂದಜ್ಯಾಯಂ ಶ್ರೀವೀರಸೋಮಂವಿಧ್ರಿ(ಧೃ)ತಹಿಮಕರಂ ಕಾಮದೇವಂಗುದಾರಶ್ರೀಯುಕ್ತಂ

ಗದ್ರಿಜಾಸಸ್ಮಿತಸಿತತರಾಲೋಲವಿಸ್ತಾರಲೀಲಾನೇಯಾ(ತ್ರಾ)ಳೋಕೊದ್ದ (?) ತಶ್ರೀಲಲಿತರತಿ ಕಳಾಲಾಸ್ಯಶೈಲೂಷವೇಷಂ ॥ ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಮಂ

ಡಳೇಶ್ವರಂ ಬನವಾಸೀಪುರವರಾದೀ(ಧೀ)ಶ್ವರಂ ಜಯನ್ತೀಮಧುಕೇಶ್ವರ ದೇವಲಬ್ಧವರಪ್ರಸಾದಂ ವಿದ್ವಜ(ಜ್ಜ) ನಾಹ್ಲಾದಂ ಮಯೂರವರ್ಮ್ಮ[ ೯*] ಕುಲಭೂಷಣಂ ಕಾದಂಬಕಣ್ಠೀರವಂ ಕದನಪ್ರಚಣ್ಡಂ ಸಾಹ

ಸೋತ್ತು[ಂ*]ಗಂ ಕಲಿಗಳಂಕುಸ(ಶ)ಂ ಸತ್ಯರಾಧೇಯಂ ಶರಣಾಗತವಜ್ರ ಪಂಜರ [ಂ*] ಯಾಚಕಕಾಮ[ಧೇ]ನುವಿತ್ಯಖಿಳನಾಮಾವಳಿಸಹಿತನಪ್ಪ ಶ್ರೀಮನ್ಮಹಾಮಣ್ಡಳೇಶ್ವರ[ಂ*] ಕಾಮದೇವರಸ

ರ್ಪ್ಪನುಂಗಲ್ಯೆ(ಲ್ಲೈ) ನೂಱುವಂ ದುಷ್ಟನಿಗ್ರಹಶಿಷ್ಟಪ್ರತಿಪಾಳನದಿನಾಳುತ್ತ ಮಿರ್ದ್ದಬ್ಬಲೂರ ವೀರಸೋಮನಾಥದೇವರಂ ಬಂದು ಕಣ್ಣು ರಾಮಯ್ಯಂಗಳು ಶಿವಾಗವಾ(ಮ) ವಿಧಾ

